# ವಿಜಯನಗರ ಪೂರ್ವದ ಶಾಸನಕವಿಗಳು




Accredited by NAAC 'A' Grade
University with potential for Excellence

ಪಿಎಚ್.ಡಿ. ಪದವಿಗಾಗಿ ಕರ್ನಾಟಕ ವಿಶ್ವವಿದ್ಯಾಲಯದ ಡಾ.ಆರ್.ಸಿ.ಹಿರೇಮಠ ಕನ್ನಡ ಅಧ್ಯಯನ ಪೀಠಕ್ಕೆ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧ

ಸಂಶೋಧಕರು

ಸಂತೋಷ ಸಂಗಯ್ಯ ಹಿರೇಮಠ

ಎಂ.ಎ., ಎಂ.ಫಿಲ್.

ಡಾ.ಆರ್.ಸಿ.ಹಿರೇಮಠ ಕನ್ನಡ ಅಧ್ಯಯನ ಪೀಠ
ಕ.ವಿ.ವಿ. ಧಾರವಾಡ

ಮಾರ್ಗದರ್ಶಕರು

ಡಾ. ಎನ್.ವಾಯ್. ಮಟ್ಟಿಹಾಳ

ಎಂ.ಎ., ಪಿಎಚ್.ಡಿ.

ಪ್ರಾಧ್ಯಾಪಕರು
ಡಾ.ಆರ್.ಸಿ.ಹಿರೇಮಠ ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಡಾ.ಆರ್.ಸಿ.ಹಿರೇಮಠ ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೦೩

೨೦೨೦

# ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

## ಡಾ.ಆರ್.ಸಿ.ಹಿರೇಮಠ ಕನ್ನಡ ಅಧ್ಯಯನ ಪೀಠ




## ಘೋಷಣಾ ಪತ್ರ

ಸಂತೋಷ ಸಂಗಯ್ಯ ಹಿರೇಮಠ ಆದ ನಾನು ಕರ್ನಾಟಕ ವಿಶ್ವವಿದ್ಯಾಲಯದ ಡಾ.ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠದಲ್ಲಿ ಪ್ರಾಧ್ಯಾಪಕರಾದ ಡಾ. ಎನ್.ವಾಯ್. ಮಟ್ಟಿಹಾಳ ಇವರ ಮಾರ್ಗದರ್ಶನದಲ್ಲಿ 'ವಿಜಯನಗರ ಪೂರ್ವದ ಶಾಸನಕವಿಗಳು' ಎಂಬ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಯ ಅವಶ್ಯಕತೆಗಾಗಿ ಕರ್ನಾಟಕ ವಿಶ್ವವಿದ್ಯಾಲಯದ ಡಾ.ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠಕ್ಕೆ ಸಲ್ಲಿಸಲೆಂದು ಸಿದ್ಧಪಡಿಸಲಾಗಿದೆ. ಈ ಮಹಾಪ್ರಬಂಧದ ವಿಷಯವನ್ನು ಇದರ ಭಾಗವನ್ನು ಈ ಮೊದಲು ಯಾವುದೇ ಪದವಿಯ ಉದ್ದೇಶಕ್ಕಾಗಿ ಬಳಸಿಕೊಂಡಿಲ್ಲವೆಂದು ಘೋಷಿಸುತ್ತೇನೆ.

ಸ್ಥಳ: ಧಾರವಾಡ
ದಿನಾಂಕ:

ಸಂತೋಷ ಸಂಗಯ್ಯ ಹಿರೇಮಠ
ಸಂಶೋಧನಾ ವಿದ್ಯಾರ್ಥಿ
ಡಾ.ಆರ್.ಸಿ.ಹಿರೇಮಠ ಕನ್ನಡ ಅಧ್ಯಯನ ಪೀಠ
ಕ.ವಿ.ವಿ. ಧಾರವಾಡ

# ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
## ಡಾ.ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠ




## ಪ್ರಮಾಣ ಪತ್ರ

**ಸಂತೋಷ ಸಂಗಯ್ಯ ಹಿರೇಮಠ** ಅವರು **'ವಿಜಯನಗರ ಪೂರ್ವದ ಶಾಸನಕವಿಗಳು'** ಎಂಬ ಶೀರ್ಷಿಕೆಯ ಕುರಿತು ಸಿದ್ಧಪಡಿಸಿದ ಮಹಾಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದೆ. ಶ್ರೀಯುತರು ನನ್ನ ಮಾರ್ಗದರ್ಶನದಲ್ಲಿ ಡಾ.ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠದಲ್ಲಿ ಸಂಶೋಧನೆ ಕೈಗೊಂಡು ಪೂರ್ಣಗೊಳಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಸಂಶೋಧಕರ ಸ್ವಂತ ಅಧ್ಯಯನದ ಮೇಲೆ ರೂಪುಗೊಂಡಿದ್ದು ಈ ಮಹಾಪ್ರಬಂಧದ ವಿಷಯವು ಇಡಿಯಾಗಿ ಇಲ್ಲವೇ ಬಿಡಿಯಾಗಿ ಎಲ್ಲಿಯೂ ಪ್ರಕಟಗೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ: ಧಾರವಾಡ
ದಿನಾಂಕ:

**ಡಾ. ಎನ್.ವಾಯ್. ಮಟ್ಟಿಹಾಳ**
ಪ್ರಾಧ್ಯಾಪಕರು
ಡಾ.ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠ
ಕ.ವಿ.ವಿ. ಧಾರವಾಡ

## ನಿವೇದನೆ

ಕರ್ನಾಟಕ ವಿಶ್ವವಿದ್ಯಾಲಯದ ಡಾ.ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠದಲ್ಲಿ 'ವಿಜಯನಗರ ಪೂರ್ವದ ಶಾಸನಕವಿಗಳು' ಎಂಬ ವಿಷಯ ಕುರಿತು ಪಿಎಚ್.ಡಿ. ಅಧ್ಯಯನ ಮಾಡಲು ಅವಕಾಶ ಕಲ್ಪಿಸಿಕೊಟ್ಟ ಕುಲಪತಿಗಳಿಗೆ, ಕುಲಸಚಿವರುಗಳಿಗೆ, ಅಧ್ಯಯನ ಪೀಠದ ಅಧ್ಯಕ್ಷರಿಗೆ ಹಾಗೂ ನನ್ನ ವಿದ್ಯಾಗುರುವೃಂದಕ್ಕೆ ನನ್ನ ಅನಂತ ಕೃತಜ್ಞತೆಗಳು.

ನನ್ನ ಸಂಶೋಧನೆಗೆ ಅಭಯಹಸ್ತ ನೀಡಿ ನನಗೆ ಸಹಾಯಕ ಪ್ರಾಧ್ಯಾಪಕ ಹುದ್ದೆಯನ್ನು ಕರುಣಿಸಿದ ಮುಂಡರಗಿಯ ಶ್ರೀ ಜಗದ್ಗುರು ನಾಡೋಜ ಡಾ. ಅನ್ನದಾನೀಶ್ವರ ಮಹಾಶಿವಯೋಗಿಗಳಿಗೆ ಅನಂತ ನಮನಗಳು. ಹಾಗೂ ಶ್ರೀಮಠದ ಉತ್ತಾರಾಧಿಕಾರಿಗಳಾದ ಶ್ರೀ ಮ.ನಿ.ಪ್ರ. ಜಗದ್ಗುರು ಡಾ.ಮಲ್ಲಿಕಾರ್ಜುನ ಮಹಾಸ್ವಾಮಿಗಳು ಇವರಿಗೂ ನನ್ನ ಸಾಷ್ಟಾಂಗ ಪ್ರಣಾಮಗಳು.

ನನ್ನ ಸಂಶೋಧನ ಆಸಕ್ತಿಗೆ ನೀರೆರೆದು ಪೋಷಿಸಿ, ಪ್ರೋತ್ಸಾಹಿಸಿದ ನನ್ನ ವಿದ್ಯಾಗುರುಗಳು, ಪಿಎಚ್.ಡಿ. ಮಾರ್ಗದರ್ಶಕರಾದ ಕರುಣಾಮಯಿ, ವಾತ್ಸಲ್ಯಮೂರ್ತಿಗಳು, ತಾಯಿಹೃದಯದ ಡಾ.ಎನ್.ವಾಯ್. ಮಟ್ಟಿಹಾಳ ಗುರುಗಳಿಗೆ ನಾನು ಚಿರಋಣಿಯಾಗಿರುವೆನು. ನನಗೆ ಎಂ.ಎ., ಎಂ.ಫಿಲ್. ಮುಗಿದ ನಂತರ ಪಿಎಚ್.ಡಿ. ಅಧ್ಯಯನ ಕೈಗೊಳ್ಳುವ ಸದಿಚ್ಛೆಯನ್ನು ಗುರುಗಳ ಮುಂದೆ ನಿವೇದಿಸಿದಾಗ ಅವರು ನನಗೆ ಸಂಶೋಧನ ನಡೆಸಲು ಅವಕಾಶ ನೀಡಿದರು. ಈ ಹಿಂದೆ ಎಂ.ಫಿಲ್. ಪದವಿಗೆ ಶಾಸನ ಕ್ಷೇತ್ರವನ್ನು ಆಯ್ಕೆ ಮಾಡಿಕೊಂಡಿದ್ದ ನನಗೆ ಪಿಎಚ್.ಡಿ. ಪದವಿಗೆ 'ವಿಜಯನಗರ ಪೂರ್ವದ ಶಾಸನಕವಿಗಳು' ಎಂಬ ವಿಷಯವನ್ನು ಡಾ.ಜೆ.ಎಂ. ನಾಗಯ್ಯ ಗುರುಗಳು ಸೂಚಿಸಿದರು. ಅದನ್ನೇ ನನ್ನ ಸಂಶೋಧನೆಯ ವಿಷಯವಾಗಿ ಸ್ವೀಕರಿಸಿ ಅಧ್ಯಯನ ನಡೆಸಲು ಗುರುಗಳು ಸೂಕ್ತ ಸಲಹೆ–ಸೂಚನೆ ನೀಡಿದರು. ಮತ್ತು ಆಕರಗಳನ್ನು ಒದಗಿಸಿದರು. ಅವರಿಗೂ ತುಂಬಾ ಆಭಾರಿಯಾಗಿದ್ದೇನೆ.

ಅಧ್ಯಯನದ ವಿಷಯದ ಬಗ್ಗೆ ಚರ್ಚೆ ಹಾಗೂ ಸಲಹೆ ಸೂಚನೆ ನೀಡಿದವರಲ್ಲಿ ಹಲವಾರು ಮಹನೀಯರ ಸಂದರ್ಶನ ಮಾಡುವ ಸದಾವಕಾಶ ದೊರೆಯಿತು. ಮುಖ್ಯವಾಗಿ ಡಾ.ಶ್ರೀನಿವಾಸ ರಿತ್ತಿ, ಡಾ.ಸಿ. ನಾಗಭೂಷಣ, ಡಾ.ಎಂ. ಜಿ. ಮಂಜುನಾಥ, ಡಾ. ಅಶೋಕ ಶೆಟ್ಟರ್, ಡಾ. ರಾಜೇಶ್ವರಿ ಸಾಲಿ, ಡಾ.ಬಿ.ವ್ಹಿ. ಮಲ್ಲಾಪೂರ, ಡಾ.ಎನ್.ಎಸ್. ತಾರಾನಾಥ, ಡಾ.ಎಂ. ಚಿದಾನಂದಮೂರ್ತಿಯವರಂಥ ಸಂಶೋಧಕರು ಹಾಗೂ ಡಾ. ಕಲ್ಲಯ್ಯ ಹಿರೇಮಠ, ಡಾ.ವೀರಭದ್ರಯ್ಯ ಚಿಕ್ಕ್ಯಾಟಿಮಠ, ಡಾ.ಗಂಗಾಧರ

ಆರ್.ಎಚ್. ಸಂಶೋಧನಾಸಕ್ತಿ ಉಳ್ಳವರು ನನ್ನ ಪ್ರಬಂಧ ರೂಪಗೊಳ್ಳುವಲ್ಲಿ ಸೂಕ್ತ ಸಲಹೆ ನೀಡಿ ಉಪಕರಿಸಿದ್ದಾರೆ. ಅವರೆಲ್ಲರಿಗೂ ನನ್ನ ಅಭಿನಂದನೆಗಳು.

ಡಾ.ಪಿ.ಕೆ. ರಾಠೋಡ ಗುರುಗಳು ನನ್ನ ಸಂಶೋಧನೆಗೆ ಬೇಕಾದ ಪೂರಕ ಆಕರಗಳನ್ನು ಒದಗಿಸಿಕೊಟ್ಟಿದ್ದಾರೆ. ಅವರಿಗೂ ನನ್ನ ಕೃತಜ್ಞತೆಗಳು. ಕರ್ನಾಟಕ ವಿಶ್ವವಿದ್ಯಾಲಯದ ಗ್ರಂಥಾಲಯ, ಕನ್ನಡ ಅಧ್ಯಯನ ಪೀಠದ ಗ್ರಂಥಾಲಯ, ಕೆ.ಆರ್.ಐ. ಗ್ರಂಥಾಲಯದ ಸಿಬ್ಬಂದಿ ಸಕಾಲಕ್ಕೆ ಸಂಶೋಧನ ಆಕರಗಳನ್ನು ಒದಗಿಸಿಕೊಟ್ಟಿದ್ದಾರೆ. ಅವರಿಗೂ ತುಂಬು ಹೃದಯದ ಅಭಿನಂದನೆಗಳು ಸಲ್ಲುತ್ತವೆ.

ಡಾ. ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠದ ಅಧ್ಯಕ್ಷರು ಹಾಗೂ ಪ್ರಾಧ್ಯಾಪಕರಾದ ಡಾ.ರಾಜೇಂದ್ರ ನಾಯಕ, ಡಾ. ಧನವಂತ ಹಾಜವಗೋಳ, ಡಾ.ಟಿ.ಎಂ. ಭಾಸ್ಕರ್, ಡಾ.ಕೃಷ್ಣ ನಾಯಕ, ಡಾ.ನಿಂಗಪ್ಪ ಮುದೇನೂರು, ಡಾ. ಅನಿತಾ ಗುಡಿ, ಡಾ.ಮಲ್ಲಪ್ಪ ಬಂಡಿ, ಡಾ. ಅನಸೂಯ ಕಾಂಬಳೆ, ಜಾನಪದ ವಿಭಾಗದ ಮುಖ್ಯಸ್ಥರಾದ ಡಾ.ವ್ಹಿ.ಎಲ್. ಪಾಟೀಲ್, ಡಾ.ಅಪ್ಪಣ್ಣ ವಗ್ಗರರವರನ್ನು ನೆನೆಯದೆ ಇರಲಾರೆ.

ನನ್ನ ಸಂಶೋಧನೆಗೆ ಪ್ರೋತ್ಸಾಹಿಸಿದ ಶ್ರೀ ಶಶಿ ಸಾಲಿ, ಇಂಧೂರಧರ ಸಾಲಿ, ವಿಕ್ರಮಾದಿತ್ಯ, ವಿಜಯಾದಿತ್ಯ, ಕಟ್ಟಿಮಠ ಗುರುಗಳು ಇವರಿಗೂ ನನ್ನ ನೆನಕೆಗಳು ಸಲ್ಲುತ್ತವೆ.

ನನ್ನ ಅಧ್ಯಯನ ಹಾಗೂ ಜೀವನಕ್ಕೆ ಬೆಂಗಾವಲಾಗಿ ನಿಂತ ನನ್ನ ತಾಯಿಯವರಾದ ಸಾವಿತ್ರಿ ಸಂಗಯ್ಯ ಹಿರೇಮಠ ಹಾಗೂ ನನ್ನ ಸಹೋದರನಾದ ಮಹೇಶ ಹಿರೇಮಠ ಅವರಿಗೂ ನನ್ನ ಪ್ರೀತಿಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ನನ್ನ ಚಿಕ್ಕಮ್ಮ ಗಿರಿಜಾ ಶಂಕರಯ್ಯ ಜಡಿಮಠ, ಸಹೋದರರಾದ ಪ್ರದೀಪ, ಗುರುರಾಜ ಅವರಿಗೂ ಹಾಗೂ ಮಾವನವರಾದ ಶಿವಲಿಂಗಯ್ಯ ಪಂಚಾಕ್ಷರಯ್ಯ ಹಿರೇಮಠ ಅವರಿಗೂ ನನ್ನ ಅಭಿನಂದನೆಗಳು. ನನ್ನ ಅತ್ತೆ ಮತ್ತು ಮಾವಂದಿರಾದ ಶಂಕ್ರಯ್ಯ, ಪ್ರೇಮಾ (ಚೇತನಾ) ಹೊಸಮಠ ಹಾಗೂ ನನ್ನ ಧರ್ಮಪತ್ನಿ ದೀಪಾ ಇವರಿಗೂ ನನ್ನ ಕೃತಜ್ಞತೆಗಳು. ಅರ್ಚನಾ, ನಂದಾ, ಗಂಗಾಧರ, ಅಜಾತ, ತನ್ವೀಶ ಇವರನ್ನು ಇಲ್ಲಿ ಸ್ಮರಿಸುತ್ತೇನೆ. ನನ್ನ ಸಂಶೋಧನೆಗೆ ಸಹಾಯಕರಾದ ಅಚ್ಚುಕಟ್ಟಾಗಿ ಡಿ.ಟಿ.ಪಿ. ಮಾಡಿದ ರಮೇಶ ಗುರಲಿಂಗಪ್ಪಗೌಡ್ರ ಅವರಿಗೂ ಕೃತಜ್ಞತೆಗಳು.

ಸ್ಥಳ: ಧಾರವಾಡ
ದಿನಾಂಕ:

ಸಂತೋಷ ಸಂಗಯ್ಯ ಹಿರೇಮಠ

## ಪರಿವಿಡಿ

# ಅಧ್ಯಾಯ-೧

## ೧.೧: ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

"ಕನ್ನಡ ಶಾಸನ ಪ್ರಪಂಚಕ್ಕೆ ಸಾಹಿತ್ಯ ದೃಷ್ಟಿಯಿಂದ ಭಾರತೀಯ ಮಹತ್ವವನ್ನು ದೊರಕಿಸಿಕೊಟ್ಟವರು 'ಶಾಸನಕವಿಗಳು', ರಾಜಕೀಯ ಮತ್ತು ಸಾಮಾಜಿಕ ದಾಖಲೆಗಳಾದ ಶಾಸನಗಳನ್ನು, ತಮ್ಮ ಪ್ರತಿಭಾಸ್ಪರ್ಶದಿಂದ ಸಾಹಿತ್ಯವನ್ನಾಗಿಸಿದ, ಈ ಕವಿಗಳ ಸಂಖ್ಯೆ ಕರ್ನಾಟಕದಲ್ಲಿ ವಿಫುಲವಾಗಿದೆ. ಇವರನ್ನು ಹೊರತುಪಡಿಸಿ ಬರೆದ ಕವಿಚರಿತೆ ಯಾವ ಕಾಲಕ್ಕೂ ಅಪೂರ್ಣ"[೧] ಎಂದು ಡಾ.ಎಂ.ಎಂ. ಕಲಬುರ್ಗಿಯವರು ಅಭಿಪ್ರಾಯಪಟ್ಟಿದ್ದಾರೆ. ಇದು ಸತ್ಯವೂ ಹೌದು ಏಕೆಂದರೆ ಶಾಸನ ಕವಿಗಳನ್ನು ಕುರಿತು ಒಂದು ವ್ಯವಸ್ಥಿತ ಚರಿತ್ರೆಯನ್ನು ಬರೆಯದಿರುವುದು, ಇಂದಿಗೂ ಒಂದು ಕೊರತೆಯಾಗಿಯೇ ಉಳಿದಿದೆ.

ನಮ್ಮ ನಾಡಿನ ಸುಮಾರು ೨೫೦೦೦ ಶಾಸನಗಳನ್ನು ಬರೆದಿರುವ ಇವರು ತಮ್ಮ ಹೆಸರು ಹೇಳಿಕೊಂಡುದು ಕೆಲವು ಶಾಸನಗಳಲ್ಲಿ ಮಾತ್ರ. ಅದೂ ಶಾಸನದ ತೀರ ಕೊನೆಯ ಭಾಗದಲ್ಲಿ. ಕೆಲವೊಮ್ಮೆ ಆರಂಭದಲ್ಲಿ ಹಾಗೂ ಶಾಸನದ ಮಧ್ಯಭಾಗದಲ್ಲಿಯೂ ಹೇಳಿಕೊಂಡಿದ್ದಾರೆ. ಶಾಸನೋಕ್ತ ಕವಿ (ಬೇರೊಬ್ಬ ಶಾಸನ ಕವಿ ಉಲ್ಲೇಖಿಸಿರುತ್ತಾನೆ) ಲಿಪಿಕಾರ, ರೂವಾರಿ (ಓಜ) ಇವರ ನಡುವೆ ಇರುವ ವ್ಯತ್ಯಾಸದ ಸೂಕ್ಷ್ಮತೆಗಳನ್ನು ಗಮನಿಸಿ; ಸ್ವತಃ ಶಾಸನ ಕವಿಯಾದವರು ತಮ್ಮ ಹೆಸರನ್ನು ತಾವೇ ಬರೆದ ಶಾಸನದಲ್ಲಿ ಗುರುತಿಸಿ; ಅಂಥ ಕವಿಗಳನ್ನು ಮಾತ್ರ ಪ್ರಸ್ತುತ ಅಧ್ಯಯನದಲ್ಲಿ ವಿಶ್ಲೇಷಿಸುವುದು ಮುಖ್ಯ ಉದ್ದೇಶವಾಗಿದೆ.

ಕನ್ನಡದ ಶಾಸನ ಕವಿಗಳು ಬರೆದ ಶಾಸನಗಳು ಕೇವಲ ಚಾರಿತ್ರಿಕ ಬರವಣಿಗೆಗೆ ಮೀಸಲಾಗಿದ್ದರೂ ಅವುಗಳ ಸಾಹಿತ್ಯಿಕ ಅಂಶಗಳನ್ನು ಅಲ್ಲಗಳೆಯುವಂತಿಲ್ಲ. ಯಾವುದೇ ಒಂದು ಘಟನೆಯ ಶುಷ್ಕ ವಿವರಣೆ ಅವುಗಳ ವಿಷಯವಾಗಿ ಉಳಿಯದೇ; ಅವುಗಳ ವರ್ಣನೆಯಲ್ಲಿ ಭಾಷಾಪೌಢಿಮೆಯೂ, ಕಾವ್ಯಮಯ ವಿವೇಚನೆಯೂ ನಡೆದಿರುವುದನ್ನು ಗಮನಿಸಬೇಕಾಗಿದೆ. ಕಲಾತ್ಮಕ ದೃಷ್ಟಿ, ಭಾಷಾಶೈಲಿ, ಕಥನಕ್ರಮ, ನಿರೂಪಣೆಯ ರೀತಿ, ವರ್ಣನೆಯ ಸೊಬಗು ರಸಾರ್ದ್ರತೆಗಳಿಂದ ಕೂಡಿವೆ. ಅಂಥ ರಸಗಟ್ಟಿಗಳನ್ನು, ಶಾಸನ ಕವಿಗಳ ಪುಟ್ಟ ಕಾವ್ಯಗಳಂತಿರುವ ಶಾಸನಗಳಿಂದ ಶೋಧಿಸಿ ವಿಶ್ಲೇಷಿಸುವುದೇ ನಮ್ಮ ಸಂಶೋಧನೆಯ ಉದ್ದೇಶವಾಗಿದೆ.

ಕಾವ್ಯಾಂಶರಹಿತವಾದ ಶಾಸನಗಳನ್ನು ವರ್ಜಿಸಿ ಉಳಿದುವನ್ನೆಲ್ಲಾ ನೋಡಿದಾಗ ಶಾಸನ ಕವಿಗಳದೇ ಒಂದು ವಿಶಿಷ್ಟ ವರ್ಗವೆಂಬುದು ತಿಳಿದುಬರುತ್ತದೆ. ಅವರು ಯಾರೂ ಪ್ರಥಮ

ವರ್ಗದ ಕವಿಗಳಾಗಿ ತೋರುವುದಿಲ್ಲ. ಕಾರಣ ಶಾಸನಗಳ ಉದ್ದೇಶ ಮಹಾಕಾವ್ಯವನ್ನು ಬರೆಯುವುದಲ್ಲ. ದಾಖಲೆಗಳನ್ನು ಬರೆಯುವುದು, ಶಾಸನ ಕವಿಗಳು ಕಾವ್ಯಗಳನ್ನು (ಸಾಹಿತ್ಯ ಕಾವ್ಯ) ಬರೆದಿದ್ದರೆ, ಕೆಲವರಾದರೂ ಮಹಾಕವಿಗಳಾಗುತ್ತಿದ್ದರು. ಕೆಲವು ಮಹಾನ್ ಕವಿಗಳೂ ಶಾಸನಗಳನ್ನು ಬರೆದಿರುವರು. ರನ್ನ, ಜನ್ನ, ಶಾಂತಿನಾಥ, ನಾಗಚಂದ್ರ ಮುಂತಾದವರು ಮೇಲಿನ ಮಾತಿಗೆ ಅಪವಾದದಂತಿದ್ದಾರೆ. ಮೊದಲು ವಾಮನ ರೂಪದಲ್ಲಿ ಕಾಣಿಸಿಕೊಂಡ ಶಾಸನ ಸಾಹಿತ್ಯ ಹಾಗೂ ಶಾಸನ ಕವಿಗಳು ನಂತರ ವಿರಾಡ್ರೂಪ ದರ್ಶನ ನೀಡುತ್ತಾರೆ.

ಅಧ್ಯಯನದ ವ್ಯಾಪ್ತಿಯನ್ನು ಕುರಿತು ಹೇಳುವುದಾದರೆ ಆರ್.ಎಸ್. ಪಂಚಮುಖಿಯವರು ಹೇಳಿದಂತೆ ಶತಮಾನ ವಿಭಾಗಕ್ರಮವನ್ನು ಅಧ್ಯಯನಕ್ಕೆ ಅಳವಡಿಸಿಕೊಂಡು, ಅಧ್ಯಯನ ಕೈಗೊಳ್ಳಲಾಗುವುದು. ಹಾಗೆ ಗುರುತಿಸುವಾಗಲೂ ಯಾವ ರಾಜಮನೆತನಗಳ ಕಾಲಾವಧಿಯಲ್ಲಿ ಸಾಮಂತರ, ದಂಡನಾಯಕರ, ಗಾವುಂಡರ, ಪ್ರಭುಗಳ ಕಾಲಾವಧಿಯಲ್ಲಿ ಈ ಶಾಸನ ಕಾವ್ಯ ರಚನೆಗೊಂಡಿತು ಎಂಬುದನ್ನು ಸಾಧಾರವಾಗಿ ಗುರುತಿಸಿ ವಿಶ್ಲೇಷಿಸುವುದಾಗಿದೆ. ನಮ್ಮ ಅಧ್ಯಯನದ ವ್ಯಾಪ್ತಿಯು ಕ್ರಿ.ಶ.೮ನೇ ಶತಮಾನದಿಂದ ಆರಂಭಗೊಂಡು ಕ್ರಿ.ಶ.೧೩೩೪ರವರೆಗೆ ನಡೆಯುವುದು. ಇದರಿಂದ ನಮ್ಮ ಶೀರ್ಷಿಕೆಯು ಒಳಗೊಂಡ ಕಾಲಮಿತಿಯಲ್ಲಿಯೇ ಕಂಡುಬಂದ ಶಾಸನ ಕವಿಗಳನ್ನು ಅನುಲಕ್ಷಿಸಿ, ವಿಜಯನಗರ ಪೂರ್ವದ ಶಾಸನಕವಿಗಳನ್ನು ಅಧ್ಯಯನಕ್ಕೊಳಪಡಿಸಿದೆ. ಅಂದರೆ ಕ್ರಿ.ಶ. ೮ನೇ ಶತಮಾನದಿಂದ ಕ್ರಿ.ಶ. ೧೩೩೬ರ ಕಾಲಾವಧಿಯ ಮಿತಿಯಲ್ಲಿ ನಮ್ಮ ಅಧ್ಯಯನ ವ್ಯಾಪ್ತಿ ಒಳಗೊಂಡಿದೆ.

### ೧.೨: ಪೂರ್ವ ಅಧ್ಯಯನಗಳ ಸ್ಥೂಲ ಸಮೀಕ್ಷೆ

ಕನ್ನಡದ ಕೆಲವು ಶಾಸನ ಕವಿಗಳ ಕುರಿತಾಗಿ ಈ ಹಿಂದೆ ಹಲವಾರು ವಿದ್ವಾಂಸರು ಬಿಡಿಬಿಡಿಯಾದ ಅಧ್ಯಯನ ಕೈಗೊಂಡಿದ್ದಾರೆ. ಆದರೆ ಪಿಎಚ್.ಡಿ. ಅಧ್ಯಯನಕ್ಕಾಗಿ ಪ್ರತ್ಯೇಕವಾದ ಅಧ್ಯಯನಗಳು ನಡೆದಿಲ್ಲ. ಕೇವಲ ಆನುಷಂಗಿಕ ನೆಲೆಯಲ್ಲಿಯೇ, ಸಂಕ್ಷಿಪ್ತ ವಿವರಣೆಯಲ್ಲಿ ಪರ್ಯಾವಸಾನಗೊಂಡಿವೆ. ವಿಶ್ಲೇಷಣಾತ್ಮಕವಾದ ಅಧ್ಯಯನಗಳು ನಡೆದಿಲ್ಲ. ನಡೆದರೂ ಸೀಮಿತ ವ್ಯಾಪ್ತಿ ಪಡೆದಿವೆ. ಕೇವಲ ರೂಪಾತ್ಮಕಶೋಧದ ನೆಲೆಯಲ್ಲಿ ಚರ್ಚೆಗಳಾಗಿವೆ ಹೊರತು; ಸಮಗ್ರತೆಯೆಡೆಗೆ ಸಾಗಿಲ್ಲ. ಡಾ.ಎಂ.ಎಂ. ಕಲಬುರ್ಗಿಯವರು ಗುರುತಿಸಿರುವಂತೆ ಶ್ರೀ ಆರ್. ನರಸಿಂಹಾಚಾರ್, ಶ್ರೀ ಮೇವುಂಡಿ ಮಲ್ಲಾರಿ ಮುಂತಾದ ವಿದ್ವಾಂಸರು ಈ ಬಗ್ಗೆ ಅಧ್ಯಯನ ನಡೆಸಿದ್ದಾರೆ.

ಆರ್. ನರಸಿಂಹಾಚಾರ್ ಅವರು 'ಕರ್ನಾಟಕ ಕವಿಚರಿತೆ'ಯಲ್ಲಿ ಹಲವು ಶಾಸನಕವಿಗಳ ಬಗ್ಗೆ ಚರ್ಚಿಸಿದ್ದಾರೆ. ಟಿ.ಟಿ.ಶರ್ಮ 'ಕೆಲವು ಕರ್ನಾಟಕ ಕವಿಗಳ ಚರಿತ್ರೆ' ಹಾಗೂ 'ಶಿಲಾಶಾಸನದ ಕನ್ನಡ ಕವಿಗಳು', ಎಂ. ಮರಿಯಪ್ಪಭಟ್ಟರ 'ಕೆಲವು ಕನ್ನಡ ಶಾಸನ ಕವಿಗಳು' ಮತ್ತು ಡಾ.ಶ್ರೀನಿವಾಸ ರಿತ್ತಿಯವರ 'ಶಿಲಾಶಾಸನಗಳ ಕೆಲವು ಕನ್ನಡ ಕವಿಗಳು'. ಹೀಗೆ ಕೆಲವರು ಶಾಸನ ಕವಿಗಳನ್ನು ಕುರಿತು ಬರೆದಿರುವರು. ಇವರಲ್ಲಿ ಶ್ರೀ ಮೇವುಂಡಿ ಮಲ್ಲಾರಿಯವರ 'ಕನ್ನಡ ನಾಡಿನ ಕೆಲವು ಶಾಸನ ಕವಿಗಳು' ಎಂಬುದು ಗ್ರಂಥರೂಪದ ಪ್ರಥಮ ಪ್ರಯತ್ನವಾಗಿದೆ[೨] ಎಂದಿದ್ದಾರೆ. ಅದೇರೀತಿಯಾಗಿ ಡಾ.ಎಂ.ಎಂ. ಕಲಬುರ್ಗಿಯವರು ೬೦ ರ ದಶಕದಲ್ಲಿ ನಡೆಸಿದ ಸಂಶೋಧನ ಮಹಾಪ್ರಬಂಧ 'ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ'ದಲ್ಲಿ ೧೨ ಜನ ಶಾಸನಕವಿಗಳ ಬಗ್ಗೆ ಚರ್ಚಿಸಿದ್ದಾರೆ. ಹಾಗೆಯೇ 'ಚೇತನ ಯುಗಾಂತರ ಕನ್ನಡ ಸಾಹಿತ್ಯ' ಪ್ರಧಾನ ಸಂಪಾದಕರಾದ ಜಿ.ಎಸ್.ಭಟ್ ಅವರು ಎಂ.ಎಂ. ಕಲಬುರ್ಗಿಯವರ 'ಕನ್ನಡ ಶಾಸನ ಸಾಹಿತ್ಯ' ಸಂಪಾದಿಸಿದ್ದಾರೆ. ಅದರಲ್ಲಿ 'ಶಾಸನ ಕವಿಗಳು' ಎಂಬ ಲೇಖನವು ೧೬೨ ಶಾಸನ ಕವಿಗಳ ಹೆಸರುಗಳು ಉಲ್ಲೇಖವಿದೆ. ಇಲ್ಲಿ ವಿಶ್ಲೇಷಣೆಗೆ ಒಳಪಡಿಸಿರುವುದಿಲ್ಲ. ಹಾಗೆಯೇ ಡಾ.ಸದಾನಂದ ನಾಯಕ ಅವರು 'ಸಾಹಿತ್ಯ ಸಂಶೋಧನೆ ಮತ್ತು ಸಮಾಲೋಚನೆ' ಗ್ರಂಥದಲ್ಲಿ ಆನುಷಂಗಿಕವಾಗಿ 'ಶಾಸನ ಕವಿಗಳ' ಉಲ್ಲೇಖವಿದೆ. ಮೈಸೂರು ವಿಶ್ವವಿದ್ಯಾಲಯದ 'ಕನ್ನಡ ಸಾಹಿತ್ಯ ಚರಿತ್ರೆ' ಸಂಪುಟ–೩–೪, ೫ ರಲ್ಲಿ ವಿವಿಧ ವಿದ್ವಾಂಸರು ಶಾಸನ ಕವಿಗಳ ಬಗ್ಗೆ ಲೇಖನ ಬರೆದಿದ್ದಾರೆ. ಹಾಗೂ ಬೆಂಗಳೂರು ವಿಶ್ವವಿದ್ಯಾಲಯದ 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ' ಸಂಪುಟ–೩ರಲ್ಲಿ ಜನ್ನನು ರಚಿಸಿದ ಶಾಸನಗಳು ಎಂಬ ಲೇಖನವಿದೆ. ಹು.ಕಾ. ಜಯದೇವ ಬರೆದ 'ಶಾಸನ ಮತ್ತು ಗದ್ಯ' ಪುಸ್ತಕದಲ್ಲಿ ಶಾಸನ ಕವಿಗಳ ಉಲ್ಲೇಖವಿದೆ. ಡಾ.ವಿ. ಜಯರಾಮ್ ಅವರು ರಚಿಸಿದ 'ಕನ್ನಡ ಶಾಸನ ಸಾಹಿತ್ಯ' ಎಂಬ ಸಂಶೋಧನ ಮಹಾಪ್ರಬಂಧದಲ್ಲಿ ಕೆಲವು ಶಾಸನ ಕವಿಗಳ ಉಲ್ಲೇಖವಿದೆ. ಹಾಗೆಯೇ ಡಾ.ಡಿ.ಜಿ. ಹಾಜವಗೋಳ ಅವರ 'ಮುಳಗುಂದ ನಾಡು–ಒಂದು ಅಧ್ಯಯನ' ಮಹಾಪ್ರಬಂಧದಲ್ಲಿ ಮುಳಗುಂದ ಪರಿಸರದ ಕೆಲವು ಶಾಸನ ಕವಿಗಳ ಬಗ್ಗೆ ಚರ್ಚಿಸಿದ್ದಾರೆ. ಡಾ.ಸಿ.ವೀರಣ್ಣ ಅವರು 'ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ ಸಂ.೧ರಲ್ಲಿ ಶಾಸನ ಕವಿಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ. ಡಾ.ಎಸ್.ಎಂ. ಹಿರೇಮಠ ಅವರೂ ಕೂಡಾ ತಮ್ಮ 'ಶಾಸನಾಧ್ಯಯನ' ಗ್ರಂಥದಲ್ಲಿ ಶಾಸನಕವಿಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ.

## ೧.೩: ಆಕರ ಸಾಮಗ್ರಿಗಳು

'ವಿಜಯನಗರ ಪೂರ್ವದ ಶಾಸನ ಕವಿಗಳು' ಎಂಬ ನನ್ನ ಈ ಸಂಶೋಧನ ಮಹಾಪ್ರಬಂಧ ರಚನೆಗೆ ಮೈಸೂರು ವಿಶ್ವವಿದ್ಯಾಲಯದ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಪರಿಷ್ಕೃತ ಎಫಿಗ್ರಾಫಿಯಾ ಕರ್ನಾಟಿಕಾ ಶಾಸನ ಸಂಪುಟಗಳು, ಬಿ.ಎಲ್. ರೈಸ್ ಅವರ ಹನ್ನೆರಡು ಎಫಿಗ್ರಾಫಿಯಾ ಕರ್ನಾಟಿಕಾ ಶಾಸನ ಸಂಪುಟಗಳು, ಹಂಪಿ ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟಗಳು, ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ಕರ್ನಾಟಕ ಇನ್ಸ್ಕ್ರಿಪಷನ್ ಸಂಪುಟಗಳನ್ನು ಬಳಸಿಕೊಳ್ಳಲಾಗುವುದು.

ಭಾರತ ಸರ್ಕಾರದ ಶಾಸನ ಇಲಾಖೆಯಿಂದ ಪ್ರಕಟವಾಗುತ್ತಿರುವ ಸೌಥ್ ಇಂಡಿಯನ್ ಇನ್ಸ್ಕ್ರಿಪಷನ್ ಸಂಪುಟಗಳನ್ನು ಬಳಸಿಕೊಳ್ಳಲಾಗುವುದು. ಎಪಿಗ್ರಾಫಿಯಾ ಇಂಡಿಕಾ ಸಂಪುಟಗಳು, ಕರ್ನಾಟಕದ ಶಾಸನಗಳಲ್ಲದೆ ಕರ್ನಾಟಕದ ಹೊರಗಡೆ ಅಂದರೆ ಆಂಧ್ರಪ್ರದೇಶದ, ತಮಿಳುನಾಡಿನ, ಮಹಾರಾಷ್ಟ್ರದ ಮುಂತಾದ ರಾಜ್ಯಗಳಲ್ಲಿ ದೊರೆತಿರುವ ಕನ್ನಡ ಶಾಸನಗಳನ್ನು ಬಳಸಿಕೊಳ್ಳಲಾಗುವುದು. ಅದೇ ರೀತಿ ಇತಿಹಾಸ ದರ್ಶನ, ಸಾಧನೆ, ಪ್ರಬುದ್ಧ ಕರ್ನಾಟಕ, ಜಯಕರ್ನಾಟಕ, ಕನ್ನಡನುಡಿ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಶಾಸನ ಅಧ್ಯಯನ ಮುಂತಾದ ನಿಯತಕಾಲಿಕೆಗಳಲ್ಲಿ ಪ್ರಕಟವಾಗಿರುವ ಶಾಸನಗಳನ್ನು ಪೂರಕ ಹಾಗೂ ಅನುಷಂಗಿಕ ಆಕರಗಳನ್ನಾಗಿ ವಿವಿಧ ಸಂಶೋಧನ ಲೇಖನಗಳಿಂದ ಬಳಸಿಕೊಳ್ಳಲಾಗುವುದು ಪ್ರಬಂಧದ ಕೊನೆಗೆ ಆಕರಗ್ರಂಥಗಳು ಹಾಗೂ ಶಾಸನ ಸಂಪುಟಗಳು, ಪೂರಕ ಆಕರಗಳು, ಆನುಷಂಗಿಕ ಆಕರಗಳ ಪಟ್ಟಿ ನೀಡಲಾಗುವುದು.

## ೧.೪: ಪ್ರಸ್ತುತ ಅಧ್ಯಯನದ ರೂಪುರೇಷೆಗಳು

ಪ್ರಸ್ತುತ ಅಧ್ಯಯನದಲ್ಲಿ ಕ್ರಿ.ಶ. ೮ನೇ ಶತಮಾನದಿಂದ ಕ್ರಿ.ಶ.೧೩೩೪ ರವರೆಗಿನ ಶಾಸನ ಕವಿಗಳ ಶಾಸನ ಕಾವ್ಯಗಳನ್ನು ಗುರುತಿಸಿ ಸಮಗ್ರವಾಗಿ ವಿಶ್ಲೇಷಣೆ ಮಾಡಲಾಗುವುದು. ಅಂದರೆ 'ವಿಜಯನಗರ ಪೂರ್ವದ ಶಾಸನಕವಿಗಳು' ಎಂಬ ಶಿರ್ಷಿಕೆಯಂತೆ ಕ್ರಿ.ಶ.೧೩೩೬ಕ್ಕಿಂತ ಪೂರ್ವದಲ್ಲಿ ಕಂಡುಬರುವ ಶಾಸನ ಕವಿಗಳ ವಿಶ್ಲೇಷಣೆಗೊಳಪಡಿಸಲಾಗುವುದು. ಈ ಮಹಾಪ್ರಬಂಧದಲ್ಲಿ ಅಧ್ಯಾಯ ೧.೧ರಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಕುರಿತು ಚರ್ಚಿಸಲಾಗಿದೆ. ೧.೨ರಲ್ಲಿ 'ಪೂರ್ವ ಅಧ್ಯಯನದ ಸ್ಥೂಲ ಸಮೀಕ್ಷೆ'ಯನ್ನು ಕೈಗೊಳ್ಳಲಾಗುವುದು. ೧.೩ರಲ್ಲಿ ಅಧ್ಯಯನಕ್ಕೆ ಬಳಸಿಕೊಳ್ಳಬಹುದಾದ ಆಕರಸಾಮಗ್ರಿಗಳನ್ನು ಹೆಸರಿಸಲಾಗುವುದು.

೧.೪ರಲ್ಲಿ ಪ್ರಸ್ತುತ ಅಧ್ಯಯನದ ರೂಪುರೇಷೆಗಳನ್ನು ಚರ್ಚಿಸಲಾಗುವುದು. ೧.೫ರಲ್ಲಿ ಶಾಸನದ ಅರ್ಥ, ವ್ಯಾಖ್ಯೆ ಹಾಗೂ ವ್ಯಾಪ್ತಿಯನ್ನು ಕುರಿತು ಚರ್ಚಿಸಲಾಗುವುದು. ೧.೬ ರಲ್ಲಿ ಶಾಸನಗಳ ಸಿದ್ಧತೆ ಹಾಗೂ ಸಂರಕ್ಷಣೆ ಕುರಿತು ಚರ್ಚಿಸಲಾಗುವುದು. ೧.೭ರಲ್ಲಿ ಶಾಸನ ಕವಿಗಳು, ಲಿಪಿಕಾರರು, ರೂವಾರಿಗಳನ್ನು ಗುರುತಿಸುವ ಬಗೆಯನ್ನು ವಿಶ್ಲೇಷಿಸಲಾಗುವುದು. ೧.೮ರಲ್ಲಿ ಶಾಸನಾಧ್ಯಯನದ ಇತಿಹಾಸವನ್ನು ಕುರಿತು ವಿವೇಚನೆಗೊಳಪಡಿಸಲಾಗುವುದು. ಅಧ್ಯಾಯ ೨ರಲ್ಲಿ 'ವಿಜಯನಗರ ಪೂರ್ವದ ಶಾಸನಕವಿಗಳು' ಎಂಬ ಶೀರ್ಷಿಕೆಯಡಿಯಲ್ಲಿ ೨.೧ರಲ್ಲಿ ೮ನೇ ಶತಮಾನದ ಶಾಸನಕವಿಗಳ ಬಗ್ಗೆ ವಿಶ್ಲೇಷಿಸಲಾಗುವುದು.

ಕ್ರಿ.ಶ.೮ನೇ ಶತಮಾನದ ಕಾಲಾವಧಿಯಲ್ಲಿ ಕ್ರಿ.ಶ.೮ನೇ ಶತಮಾನದ ಅಚಲನ್ ಶಾಸನಕವಿಯಿಂದ ಆರಂಭಗೊಂಡು ಕ್ರಿ.ಶ.೮೯೦ರ ನಾಮಯ್ಯ ಶಾಸನ ಕವಿಯವರೆಗೆ ೬ ಜನ ಶಾಸನಕವಿಗಳ ಬಗ್ಗೆ ವಿಶ್ಲೇಷಣೆಗೊಳಪಡಿಸಲಾಗುವುದು. ಅಧ್ಯಾಯ ೩ರಲ್ಲಿ ಕ್ರಿ.ಶ.೯ನೇ ಶತಮಾನದ ದಿವಾಕರನಿಂದ ಆರಂಭಗೊಂಡು ಕ್ರಿ.ಶ.೯೮೦ರವರಗಿನ ಕಮಳಾದಿತ್ಯನವರೆಗೆ ಒಟ್ಟು ೨೨ ಜನ ಶಾಸನಕವಿಗಳನ್ನು ಕುರಿತು ವಿಶ್ಲೇಷಿಸಲಾಗುವುದು. ಅಧ್ಯಾಯ ೪ರಲ್ಲಿ ಕ್ರಿ.ಶ. ೧೦ನೇ ಶತಮಾನದ ಶ್ರೀಕಂಠಪಂಡಿತನಿಂದ ಆರಂಭಗೊಂಡು ಕ್ರಿ.ಶ. ೧೦೦೦ದಿಂದ ರೇಚನ ಎಂಬ ಶಾಸನಕವಿಯವರೆಗೆ ಕ್ರಿ.ಶ.೧೮೯ರವರೆಗಿನ ೬೮ ಜನ ಶಾಸನಕವಿಗಳ ವಿಶ್ಲೇಷಣೆಗೆ ಒಳಪಡಿಸಲಾಗುವುದು. ಅಧ್ಯಾಯ ೫ರಲ್ಲಿ ಕ್ರಿ.ಶ. ೧೧ನೇ ಶತಮಾನದ ಶಾಸನಕವಿಗಳು ಎಂಬ ಅಧ್ಯಾಯದಲ್ಲಿ ಕ್ರಿ.ಶ.೧೧೦೦ರ ನಾಗವರ್ಮನಿಂದ ಆರಂಭಗೊಂಡು ಕ್ರಿ.ಶ.೧೧೯೬ರವರೆಗಿನ ಮಾರಮರಸನವರೆಗೆ ಒಟ್ಟು ೮೮ ಜನ ಶಾಸನ ಕವಿಗಳನ್ನು ವಿಶ್ಲೇಷಣೆಗೊಳಪಡಿಸಲಾಗುವುದು. ಅಧ್ಯಾಯ ೬ರಲ್ಲಿ ೧೨ನೇ ಶತಮಾನದ ಶಾಸನಕವಿಗಳು ಎಂಬ ಅಧ್ಯಾಯದಲ್ಲಿ ಕ್ರಿ.ಶ.೧೨೦೦ ಆರಂಭಗೊಂಡು ಕ್ರಿ.ಶ. ೧೨೯ರವರೆಗಿನ ಬೊಮ್ಮಣವರೆಗಿನ ಒಟ್ಟು ೩೪ ಜನ ಶಾಸನಕವಿಗಳ ಬಗ್ಗೆ ವಿಶ್ಲೇಷಿಸಲಾಗುವುದು. ಅಧ್ಯಾಯ ೭ರಲ್ಲಿ ೧೩ನೇ ಶತಮಾನದ ಶಾಸನ ಕವಿಗಳು ಎಂಬ ಅಧ್ಯಾಯದಲ್ಲಿ ಕ್ರಿ.ಶ. ೧೩೦೦ರ ಜಿನಯ್ಯನಿಂದ ಆರಂಭಗೊಂಡು ಕ್ರಿ.ಶ. ೧೩೩೪ರ ರಾಮಂಣ ಎಂಬ ಶಾಸನ ಕವಿಯವರೆಗೆ ಒಟ್ಟು ೧೦ ಜನ ಶಾಸನ ಕವಿಗಳ ಬಗ್ಗೆ ವಿವೇಚಿಸಲಾಗುವುದು. ಒಟ್ಟು ಕ್ರಿ.ಶ.೮ನೇ ಶತಮಾನದಿಂದ ಕ್ರಿ.ಶ.೧೩೩೪ರವರೆಗೆ ಒಟ್ಟು ೨೨೮ ಜನ ಶಾಸನಕವಿಗಳ ಬಗ್ಗೆ ವಿಶ್ಲೇಷಣೆಗೆ ಒಳಪಡಿಸಲಾಗುವುದು. ಪ್ರಬಂಧದ ಕೊನೆಗೆ ಸಮಾರೋಪ ಹಾಗೂ ಅನುಬಂಧದಲ್ಲಿ ಆಕರಗ್ರಂಥಗಳನ್ನು ನೀಡಲಾಗುವುದು.

## ೧.೫: ಶಾಸನದ ಅರ್ಥ, ವ್ಯಾಖ್ಯೆ ಹಾಗೂ ವ್ಯಾಪ್ತಿ

**ಶಾಸನದ ಅರ್ಥ:**

'ಶಾಸ್' ಎಂಬ ಧಾತುವಿನಿಂದ 'ಶಾಸನ' ಎಂಬ ಪದ ರೂಪುಗೊಂಡಿದ್ದು ಅದಕ್ಕೆ ಅಜ್ಞಾಪಿಸು, ರಕ್ಷಿಸು, ನಿಯಂತ್ರಿಸು ಎಂಬ ಅರ್ಥವಿದೆ. ಶಾಸನಗಳು ಮೂಲತಃ ದಾನ ಸಂಬಂಧವಾದ ರಾಜಾಜ್ಞೆಗಳಾಗಿದ್ದವು. ಈ ಅರ್ಥದಲ್ಲಿ ಶಾಸನಗಳೆಂದರೆ ದಾನ ಶಾಸನಗಳೇ. ಆದರೆ ಕಾಲಾನುಕ್ರಮದಲ್ಲಿ ಇವು ವಿಶಾಲ ನೆಲೆಯಲ್ಲಿ ರೂಪುಪಡೆಯುತ್ತಾ ಸಾಗಿರುವುದು ವಿಶೇಷ.

ಶಾಸನಕ್ಕೆ ಸಮಾನಾರ್ಥವಾಗಿ ಬಳಕೆಯಾಗುತ್ತಿರುವ ಆಂಗ್ಲ ಶಬ್ದ 'Inscription' ಇದಕ್ಕೆ 'Epigraph' ಎಂಬ ಪದಪ್ರಯೋಗವೂ ಇದೆ. ಇದರಿಂದಲೇ 'Epigraphy' ಎಂಬ ಶಬ್ದ ಬಳಕೆಯಲ್ಲಿದೆ. 'Inscription' ಎಂಬ ಪದವು 'Inscribe' ಎಂಬ ಲ್ಯಾಟಿನ್ ಭಾಷೆಯ ಪದದಿಂದ ಬಂದಿದ್ದು ಮೇಲೆ ತಿಳಿಸಿದಂತೆ ಬರೆ ಎಂಬ ಅರ್ಥವನ್ನು ಹೊಂದಿದೆ. ಹಾಗೆಯೇ Epigraphy' ಎಂಬ ಪದವು 'epi' (ಮೇಲೆ) ಮತ್ತು 'graphie' (ಬರೆ, ಸಂಕೇತ) ಎಂಬೆರೆಡು ಗ್ರೀಕ್ ಪದಗಳಿಂದ ಹುಟ್ಟಿಕೊಂಡಿದೆ. 'Epigraphy' ಪದವನ್ನು 'ಬರಹಗಳ ಅಧ್ಯಯನಶಾಸ್ತ್ರ' ಎಂಬರ್ಥದಲ್ಲಿ ಬಳಸಲಾಗುತ್ತದೆ.

'Inscription' ಎಂದರೆ ಬಹುಕಾಲ ನಿಲ್ಲಬಲ್ಲ, ಶಾಶ್ವತವಾಗಿ ಉಳಿಯಬಲ್ಲ, ವಸ್ತುಗಳ ಮೇಲೆ ಕೊರೆಯಲ್ಪಟ್ಟ ಬರಹ. ಕಲ್ಲು, ತಾಮ್ರ, ಬೆಳ್ಳಿ ಮೊದಲಾದವುಗಳ ಮೇಲೆ ಕೊರೆಯಲ್ಪಟ್ಟ ಬರಹಗಳು ಶಾಸನಗಳು.[೨]

"ಭಾರತೀಯರು ಶಾಸನ ಎಂಬ ಪದಕ್ಕೆ ವಿಶಾಲ ಅರ್ಥವನ್ನು ನೀಡುವುದರ ಸಲುವಾಗಿ ಅವುಗಳ ಆಂತರಿಕ ವಿಷಯವನ್ನು ಗಮನದಲ್ಲಿರಿಸಿಕೊಂಡು ವ್ಯಾಖ್ಯಾನಿಸಿದರು. ಹೀಗಾಗಿ ಶಾಸನವೆಂಬುದು ಆಜ್ಞೆ, ಪ್ರಜೆಗಳೆಲ್ಲರೂ ಪಾಲಿಸಬೇಕಾದ ಒಂದು ಸಂಹಿತೆ ಸಂವಿಧಾನ. ನೀತಿ ನಿಯಮಗಳನ್ನು ಉಲ್ಲಂಘಿಸಿದರೆ ಶಿಕ್ಷೆಗೆ ಗುರಿಯಾಗುತ್ತಿರೆಂಬ ಎಚ್ಚರಿಕೆಯ ನೀತಿಸಂಹಿತೆಗಳು ಎಂಬ ಅರ್ಥ ಪಡೆದುಕೊಂಡಿತು. ಅಶೋಕನು ತಾನು ಹಾಕಿದ ಶಾಸನಗಳನ್ನು 'ಧರ್ಮಲಿಪಿ' ಗಳೆಂದು ಕರೆದುಕೊಂಡಿದ್ದಾನೆ. ಅಂದರೆ 'Inscribe' ಎಂಬುದರಿಂದ ಹೊರಟ ಕೆತ್ತು ಕೊರೆ, ಕಂಡರಿಸು ಎಂಬ ಅರ್ಥಕ್ಕಿಂತ ಭಿನ್ನವಾಗಿ ಆಡಳಿತ, ಪ್ರಭುತ್ವ, ಆಜ್ಞೆ, ಅಪ್ಪಣೆ, ಕಾನೂನು, ಕಟ್ಟಳೆ,

ವಿಧಿ, ನಿಗ್ರಹ, ಹಿಡಿತ, ಶಿಕ್ಷೆ, ದಂಡನೆ, ಶಾಸ್ತಿ, ಒಪ್ಪಂದ ಮತ್ತು ಕರಾರು ಎಂಬ ವ್ಯಾಪಕ ಅರ್ಥವನ್ನು ಶಾಸನ ಪಡೆದುಕೊಂಡಿದೆ.[೪]

ರಾಜನ ಸಹಿ, ಮುದ್ರೆ, ದಿನಾಂಕದೊಂದಿಗೆ ಅಧಿಕೃತವಾಗಿ ಹೊರಟ ಶಾಸನಗಳು ಶಿಲೆ, ತಾಮ್ರ, ಕಬ್ಬಿಣ ಇತ್ಯಾದಿ ಮಾಧ್ಯಮಗಳಲ್ಲಿ ಬರೆದಿರುವ ರಾಜಾಜ್ಞೆಗಳಾಗಿದ್ದಂತೆ, ರಾಜರಲ್ಲದವರು ಕುರಿತು ಬರೆಯಿಸಿದಾಗಲೂ ಅವು ಶಾಸನಗಳೆಂದು ಕರೆಯಿಸಿಕೊಂಡವು. ವೀರರ, ಮಹಾಸತಿಯರ, ಸನ್ಯಾಸಿಗಳ ಮರಣ ವೃತ್ತಾಂತವನ್ನು ಉಲ್ಲೇಖಿಸುವ ವೀರಗಲ್ಲು, ಮಾಸ್ತಿಕಲ್ಲು, ನಿಸಿಧಿ ಕಲ್ಲುಗಳು ಸಹ ಶಾಸನದ ಪರಂಪರೆಗೆ ಸೇರಿದವು. ಇವುಗಳನ್ನು ಹೊರತುಪಡಿಸಿ ಶುದ್ಧ ಕಾವ್ಯ, ನಾಟಕ, ವ್ಯಾಕರಣ, ಸಂಗೀತ ಮುಂತಾದ ಯಾವ ಪ್ರಕಾರವೇ ಆಗಲಿ ಶಿಲೆಯ ಮೇಲಿದ್ದರೆ ಅದು ಸಹ ಶಾಸನವೆಂಬ ಹೆಸರನ್ನು ಪಡೆಯಿತು.

ಹೀಗೆ ರಾಜಪ್ರಭುತ್ವದ ಪರಿಸರದಲ್ಲಿ ಬೆಳೆದುಬಂದ ಶಾಸನಗಳು ದಂಡನೆ, ಶಿಕ್ಷೆ, ಕರಾರು, ಕಟ್ಟಳೆ ಎಂಬ ಸಂಕುಚಿತ ಅರ್ಥದಿಂದ ಹೊರಬಂದು ಅಂದಂದಿನ ಜೀವನ ಪದ್ಧತಿಯನ್ನು ಕಾಯ್ದಿಟ್ಟುಕೊಂಡು ಬಂದ ದಾಖಲೆಗಳೆಂಬ ವಿಶಾಲಾರ್ಥವನ್ನು ಪಡೆದುಕೊಂಡವು.[೫]

**ವ್ಯಾಖ್ಯೆ:**

ಶಾಸನಗಳನ್ನು ಕುರಿತು ಅನೇಕ ವಿದ್ವಾಂಸರು ಹಲವಾರು ಬಗೆಯ ವ್ಯಾಖ್ಯಾನಗಳನ್ನು ನೀಡಿದ್ದಾರೆ.

೧. ಶಾಸನ (ಎಂಬ ಪದ) ರಾಜರ ಆಜ್ಞೆಗಳನ್ನು ತಿಳಿಸುವ ಬರಹವನ್ನು ಹೇಳುತ್ತದೆ. **"ಕೌಟಿಲ್ಯ ಅರ್ಥಶಾಸ್ತ್ರ"**.

೨. Document insised on some hard or permanent material in the form of letters or other conventional signs for the purpose of conveying some information or preserving a record. They are, therefore to be distinguished on the one hand from manuscripts or documents written on papyrus, parchment, paper or other more or less smooth surfaces by means of a brush, reed or pen and some coloured fluid. [ತಾಳೆಗರಿ, ಭೂರ್ಜಪತ್ರ, ಕಾಗದ ಮುಂತಾದವುಗಳ ಮೇಲೆ ಕಂಡುಬರುವ ಬರಹಗಳನ್ನು

ಬಿಟ್ಟು, ಬಹುಕಾಲ ಉಳಿಯುವ ಸಾಮಗ್ರಿಯ ಮೇಲೆ ಕೆತ್ತಿರುವ ಬರಹಗಳನ್ನು ಶಾಸನಗಳೆಂದು ಸ್ಥೂಲವಾಗಿ ಕರೆಯಬಹುದು].

೩. The inscription are notification, very frequently of an official character, and generally more or less of a public nature, which recite facts, simple or complex with or without dates and were intended to be lasting record of the matters to which they refer. [ಶಾಸನಗಳು ಬಹು ಸಂದರ್ಭದಲ್ಲಿ ಅಧಿಕೃತ ಲಕ್ಷಣವುಳ್ಳ, ಸಾಧಾರಣವಾಗಿ ಹೆಚ್ಚು ಕಡಿಮೆ ಸಾರ್ವಜನಿಕ ಸ್ವರೂಪವುಳ್ಳ, ಸರಳವಾದ ಅಥವಾ ಇಲ್ಲದಿರುವ ಮತ್ತು ತಾವು ಪ್ರಸ್ತಾಪಿಸುವ ವಿಷಯಗಳ ಬಗ್ಗೆ ಶಾಶ್ವತವಾದ ದಾಖಲೆಗಳಾಗಬೇಕೆಂದು ಉದ್ದಿಷ್ಟವಾದ ಪ್ರಕಟನೆಗಳು] –J.F. Fleet.

೪. Inscription literally means any writing engraved on some object. [ಶಾಸನವೆಂದರೆ ಯಾವುದಾದರೊಂದು ಪದಾರ್ಥದ ಮೇಲೆ ಕೊರೆದ ಯಾವುದೇ ಬರಹವೆಂದು ಅಕ್ಷರಶಃ ಅರ್ಥವಾಗುತ್ತದೆ.]

– ಡಿ.ಸಿ. ಸರ್ಕಾರ್

೫. ಶಾಸನ ಕಲ್ಲು ಅಥವಾ ತಾಮ್ರ ಮುಂತಾದ ಲೋಹಗಳ ಮೇಲೆ ಬರೆದ ದಾಖಲೆ

–ಶ್ರೀನಿವಾಸ ರಿತ್ತಿ

೬. ಶಾಸನಗಳು ಸಾಹಿತ್ಯದ ತಲಕಾವೇರಿ

– ಎಂ.ಚಿದಾನಂದಮೂರ್ತಿ

೭. 'ಶಾಸನ' ಎಂಬ ಶಬ್ದಕ್ಕೆ ನಾನಾರ್ಥಗಳಿರುವವಾದರೂ ಈ ದಾಖಲೆಗಳ ಸಂದರ್ಭದಲ್ಲಿ ಅದಕ್ಕೆ 'ರಾಜಾಜ್ಞೆ' ಎಂಬ ವಿಶಿಷ್ಟಾರ್ಥ ಅನ್ವಯವಾಗುತ್ತದೆ. ಇದನ್ನು ಬರೆಯಿಸಿದವರು ಕೂಡ ಆಗೀಗ ಇವನ್ನು 'ಶಾಸನ'ವೆಂದೇ ಹೆಸರಿಸಿದ್ದಾರೆ. ಇದಲ್ಲದೆ ಲಿಪಿ, ಧರ್ಮಲಿಪಿ, ಲೇಖ, ಶಿಲಾಲೇಖ, ಕಲ್ಬರಹ, ತಾಮ್ರಪಟ್ಟಕ್, ತಾಮ್ರಪಟ ತಾಮ್ರಶಾಸನ ಇತ್ಯಾದಿ ನಾಮಾಂತರಗಳೂ ಶಾಸನಗಳಿಗೆ ಉಂಟು.

– ಎಂ.ಬಿ. ನೇಗಿನಹಾಳ

೮. ಶಾಸನವೆಂದರೆ ರಾಜಾಜ್ಞೆ, ರಾಜನು ತಾನು ಅಥವಾ ಬೇರೆ ರಾಜರು ಕೊಟ್ಟ ದತ್ತಿಯನ್ನು ಯಾರೂ ನಾಶಮಾಡಬಾರದು. ಅದನ್ನು ತನ್ನ ಕೆಳಗಿನ ಅಧಿಕಾರಿಗಳು ನಡೆಸಿಕೊಂಡು

ಹೋಗಬೇಕು ಎಂದು ಈ ಆಜ್ಞೆ ವಿಧಿಸುತ್ತಿದ್ದನು. ಇದನ್ನು ಜನರಿಗೆ ತಿಳಿಯಪಡಿಸಲು ಹಾಸುಗಲ್ಲುಗಳ ಮೇಲೆ ಅಥವಾ ತಾಮ್ರಪಟ್ಟಿಕೆಗಳ ಮೇಲೆ ಬರೆಯಿಸುತ್ತಿದ್ದನು.

– ಎ.ಎಂ. ಅಣ್ಣಿಗೇರಿ, ಮೇವುಂಡಿ ಮಲ್ಲಾರಿ

೯. ಶಾಸನಗಳು ಕರ್ನಾಟಕದ ಪ್ರಾಚೀನ ಸಂಸ್ಕೃತಿಯ ಮೂಕಸಾಕ್ಷಿಗಳು.

– ಆರ್.ಸಿ. ಹಿರೇಮಠ, ಎಂ.ಎಂ. ಕಲಬುರ್ಗಿ.

೧೦. ಶಾಸನಗಳು ಆಯಾ ಕಾಲದಲ್ಲಿ ಬರೆದವುಗಳಾಗಿದ್ದು ಲಿಪಿಕಾರರು ಕಾಲಕಾಲಕ್ಕೆ ಮಾಡುವ ತಿದ್ದುಪಡಿಯ ದೋಷವಿಲ್ಲದೆ ಅನೂಚಾನವಾಗಿ ಬಂದ ಮೂಲಸಾಮಗ್ರಿಗಳಾಗಿವೆ.

–ಎ.ಎಂ.ಅಣ್ಣಿಗೇರಿ, ಆರ್.ಶೇಷಶಾಸ್ತ್ರಿ.

೧೧. ಶಾಸನಗಳು ಒಂದು ಪ್ರದೇಶದ ಪ್ರಾಚೀನ ಇತಿಹಾಸವನ್ನು ಸಂಸ್ಕೃತಿಯನ್ನು ತಿಳಿಸುವಲ್ಲಿ ಮೂಕಸಾಕ್ಷಿಗಳಾಗಿ ನಿಂತಿವೆ.

– ಜೆ.ಎಂ.ನಾಗಯ್ಯ

೧೨. ಶಾಸನಗಳು ಪ್ರಮುಖವಾಗಿ ಒಂದು ಕಾಲದಲ್ಲಿ ನಡೆದ ವ್ಯವಹಾರಗಳ ಲಿಖಿತ ದಾಖಲೆಗಳು, ನಾಡಿನ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಅಂಶಗಳನ್ನು ಅರ್ಥಮಾಡಿಕೊಳ್ಳುವ ಮೂಲಸಾಮಗ್ರಿಗಳಾಗಿವೆ.

–ಸಿ. ನಾಗಭೂಷಣ.

ಈ ಮೇಲ್ಕಾಣಿಸಿದ ವಿವಿಧ ವ್ಯಾಖ್ಯೆಗಳನ್ನು ಗಮನಿಸಿದಾಗ ಶಾಸನಗಳ ಎರಡು ಬಹುಮುಖ್ಯ ಲಕ್ಷಣಗಳು ಎದ್ದು ತೋರುತ್ತವೆ. ಮೊದಲನೆಯದಾಗಿ ಶಾಸನಗಳು ಬರೆದವುಗಳಲ್ಲ; ಕೊರೆದವು. ಗಟ್ಟಿಪದಾರ್ಥಗಳ ಮೇಲೆ ಕೆತ್ತಿದುವೆ ಹೊರತು; ತಾಳೆಗರಿ ಭೂರ್ಜಪತ್ರ, ಕಾಗದ ಮೊದಲಾದವುಗಳ ಮೇಲೆ ಕೊರೆದವುಗಳಲ್ಲ. ಎರಡನೆಯದಾಗಿ ಜೆ.ಎಫ್. ಫ್ಲೀಟ್ ಅವರು ಹೇಳುವಂತೆ ಶಾಸನಗಳು ವಿಶೇಷತಃ ಸಾರ್ವಜನಿಕ ಸ್ವರೂಪವುಳ್ಳವು. ಸಾರ್ವತ್ರಿಕ ಅವಗಾಹನೆಗಾಗಿ ಉದ್ದಿಷ್ಟವಾದವೇ ವಿನಃ; ಖಾಸಗಿ ವಸ್ತುಗಳಲ್ಲ. ಶಾಸನ ಮೂಲಾರ್ಥ ಮತ್ತು ಅದರ ಆಧುನಿಕ ವ್ಯಾಪ್ತಿ ಏನೇ ಇರಲಿ, ಈ ಎರಡೂ ಲಕ್ಷಣಗಳು ಮಾತ್ರ ಶಾಸನಗಳಲ್ಲಿ ಸಾರಭೂತವಾಗಿ ನಿಲ್ಲುವಂಥವು.[೬]

**ವ್ಯಾಪ್ತಿ:**

ಕ್ರಿ.ಶ. ೩ನೇ ಶತಮಾನದ ಅಶೋಕನ ಶಾಸನಗಳೇ ಭಾರತದಲ್ಲಿ ಅತ್ಯಂತ ಪ್ರಾಚೀನ ಶಾಸನಗಳು. ಇವನ ಕಾಲದಿಂದಲೇ ಕರ್ನಾಟಕದಲ್ಲಿ ಶಾಸನಗಳ ಚರಿತ್ರೆ ಪ್ರಾರಂಭವಾಗುತ್ತದೆ. ಅಶೋಕನ ಶಾಸನಗಳು ಧರ್ಮೋಪದೇಶ ಪರವಾಗಿವೆ. ಹೀಗಾಗಿ ಅವುಗಳನ್ನು ಧರ್ಮಲಿಪಿಗಳೆಂದು ಕರೆಯಲಾಗಿದೆ. ದಾನಮಾಡಿ ಪುಣ್ಯ ಕಟ್ಟಿಕೊಳ್ಳಬೇಕೆಂಬ ಬೌದ್ಧರ ಧರ್ಮ ಕಟ್ಟಳೆಯಿಂದಾಗಿ ಶಾತವಾಹನರ ಕಾಲದಲ್ಲಿ ಬೌದ್ಧಧರ್ಮದ ದಾನ ಶಾಸನಗಳು ಹೆಚ್ಚಾಗಿ ಕಾಣಿಸಿಕೊಂಡವು.[೭]

ಕರ್ನಾಟಕದಲ್ಲಿ ಕಲ್ಯಾಣ ಚಾಲುಕ್ಯರ ಮಾಂಡಲೀಕರಾದ ಕಲಚೂರಿ, ಯಾದವ, ಹೊಯ್ಸಳ, ಮುಂದೆ ವಿಜಯನಗರ ಅರಸರ ಕಾಲದಲ್ಲಿ ಅಸಂಖ್ಯಾತ ಶಾಸನಗಳು ಹುಟ್ಟಿಕೊಂಡವು. ತದನಂತರ ಮೈಸೂರು ಅರಸರ ಕಾಲದಲ್ಲಿ ಶಾಸನ ಸಂಪತ್ತು ಇಳಿಮುಖವಾಗುತ್ತಾ ನಡೆಯಿತು.

ಕನ್ನಡನಾಡಿನಲ್ಲಿ ಧರ್ಮಶಾಸನಗಳಲ್ಲದೇ, ದಾನದತ್ತಿಗಳು ಲೌಕಿಕ ಹಾಗೂ ಪಾರಮಾರ್ಥಿಕ ಪ್ರಯೋಜನಕ್ಕಾಗಿ, ಮಡಿದವರ ಸ್ಮಾರಕವಾಗಿ, ವೀರ, ಮಾಸ್ತಿ, ನಿಷಿಧಿ ಕಲ್ಲುಗಳು ರಚನೆಗೊಂಡವು. ಇವುಗಳ ಬೆಳವಣಿಗೆಯನ್ನು ಆರ್.ಎಸ್. ಪಂಚಮುಖಿಯವರು ಈ ರೀತಿ ಗುರುತಿಸಿದ್ದಾರೆ.[೮]

೧. ಕ್ರಿ.ಶ.ಪೂ.೩ನೇ ಶತಮಾನದಿಂದ ಕ್ರಿ.ಶ.೪ನೇ ಶತಮಾನದವರೆಗೆ
   (ಅಶೋಕನ ಕಾಲದಿಂದ ಬನವಾಸಿ ಕದಂಬರ ಉದಯದವರೆಗೆ)
೨. ಕ್ರಿ.ಶ.೫ನೇ ಶತಮಾನದಿಂದ ಕ್ರಿ.ಶ.೧೦ನೇ ಶತಮಾನದವರೆಗೆ
   (ಕದಂಬರಿಂದ ಆರಂಭಿಸಿ-ಕಲ್ಯಾಣ ಚಾಲುಕ್ಯರ ಉದಯದವರೆಗೆ)
೩. ಕ್ರಿ.ಶ. ೧೧ನೇ ಶತಮಾನದಿಂದ ಕ್ರಿ.ಶ. ೧೩ನೇ ಶತಮಾನದವರೆಗೆ
   (ಕಲ್ಯಾಣ ಚಾಲುಕ್ಯರಿಂದ ವಿಜಯನಗರ ಅರಸೊತ್ತಿಗೆ ಹುಟ್ಟುವವರೆಗೆ)
೪. ಕ್ರಿ.ಶ.೧೫ನೇ ಶತಮಾನದಿಂದ ಕ್ರಿ.ಶ.೧೮-೧೯ನೇ ಶತಮಾನದವರೆಗೆ
   (ವಿಜಯನಗರ ಕಾಲದಿಂದ ಮರಾಠಾ ಅರಸರ ಅಳಿಗಾಲದವರೆಗೆ)

ಹೀಗೆ ಕ್ರಿ.ಶ.ಪೂ. ೩ನೇ ಶತಮಾನದಿಂದ ರಚನೆಗೊಂಡ ಶಾಸನಗಳಲ್ಲಿ ಕನ್ನಡದ ಮೊದಲ ಶಾಸನವೊಂದು ಖ್ಯಾತಿಯನ್ನು ಪಡೆದುಕೊಂಡಿರುವುದು ಕ್ರಿ.ಶ.೪೫೦ರ ಕದಂಬ ಕಕುತ್ಸವರ್ಮನ

ಹಲ್ಮಿಡಿ ಶಾಸನ ಇಲ್ಲಿಂದ ಕರ್ನಾಟಕದಲ್ಲಿ ಕನ್ನಡ ಶಾಸನಗಳು ಧರ್ಮ, ದತ್ತಿ, ವೀರ, ತ್ಯಾಗ ಬಲಿದಾನಗಳ ಸಂಬಂಧವಾಗಿ ಎಲ್ಲೆಂದರಲ್ಲಿ ಸೃಷ್ಟಿಯಾದವು.

"ಕರ್ನಾಟಕದ ಶಾಸನಗಳ ವಿಫುಲತೆಗೆ ಮೊದಲು ಧರ್ಮವೇ ಮೂಲವೆಂದು ಧಾರಾಳವಾಗಿ ಹೇಳಬಹುದು. ಆರ್ಯ ಧರ್ಮದ ಅಳಿಗಾಲದ ಚಿನ್ಹೆಗಳು ಇಸ್ಲಾಂ ಧರ್ಮದ ಪ್ರಸಾರದ ಕಾಲದಲ್ಲಿ ತಲೆದೋರಿದವು. ಮುಸಲ್ಮಾನ ರಾಜರ ಕಾಲದಲ್ಲಿ ಆರ್ಯ (ವೈದಿಕ) ಧರ್ಮಕ್ಕೆ ಅವಶ್ಯವಿದ್ದ ಸ್ಫೂರ್ತಿಯುಕ್ತ ಪೋಷಣೆ ಇಲ್ಲದ್ದರಿಂದ ಆಗ ವೈದಿಕ ಧರ್ಮದ ದೇವಾಲಯಗಳ ಅಳಿಗಾಲವು ಆರಂಭವಾಯಿತು. ಬ್ರಿಟೀಷರ ಆಳ್ವಿಕೆಯಲ್ಲಿ ಅದು ಸಂಪೂರ್ಣವಾಗಿ ಕೊನೆಗೊಂಡಿತು. ಈ ರೀತಿಯಾಗಿ ದೇವಾಲಯಗಳ ಉಗಮ, ಬೆಳವಣಿಗೆ ಅಳಿಗಾಲಗಳಿಗನುಗುಣವಾಗಿ ಶಾಸನಗಳು ಹುಟ್ಟಿದುವು, ಬೆಳೆದವು ಮತ್ತು ನಷ್ಟವಾದವೆಂದು ಹೇಳಬಹುದು.

**೧.೬ ಶಾಸನಗಳ ಸಿದ್ಧತೆ ಹಾಗೂ ಸಂರಕ್ಷಣೆ**

ಪ್ರಾಚೀನ ಕಾಲದಲ್ಲಿ ಶಾನಸಗಳನ್ನು ಸಿದ್ಧಪಡಿಸಲು ಸಾಮಾನ್ಯವಾಗಿ ಕೃತಿಕಾರ, ಲಿಪಿಕಾರ, ಹಾಗೂ ಶಿಲ್ಪಿ ಈ ಮೂವರೂ ಪ್ರಮುಖ ಪಾತ್ರವಹಿಸುತ್ತಿದ್ದರು. ಕೃತಿಕಾರ (ಈತ ಒಬ್ಬ ಕವಿಯಾಗಿರಬಹುದು) ಶಾಸನದ ಕರಡನ್ನು ತಾಳಪತ್ರ ಅಥವಾ ಭೂರ್ಜಪತ್ರದ ಮೇಲೆ ಸಿದ್ಧಪಡಿಸುತ್ತಿದ್ದ. ಅದನ್ನು ಲಿಪಿಕಾರ ಅಥವಾ ಕೆಲವು ಸಲ ಕೃತಿಕಾರನೇ ಶಿಲೆಯ ಮೇಲೆ ಅಥವಾ ತಾಮ್ರಪಟದ ಮೇಲೆ ಬಳಪದಿಂದಲೇ, ಮಸಿಯಿಂದಲೋ ಬಣ್ಣದಿಂದಲೋ ಬರೆಯುತ್ತಿದ್ದ. ಶಿಲ್ಪಿ ಅದನ್ನು ಕೊರೆಯುವ ಕೆಲಸ ಮಾಡುತ್ತಿದ್ದ.

ಪ್ರಾಚೀನ ಭಾರತದಲ್ಲಿ ಶಾಸನಗಳನ್ನು ಹೇಗೆ ಸಿದ್ಧಗೊಳಿಸಬೇಕು ಎಂಬುದನ್ನು ತಿಳಿಸಲು ಕ್ಷೇಮೇಂದ್ರ, ವ್ಯಾಸದಾಸನ 'ಲೋಕಪ್ರಕಾಶ' 'ಲೇಖನಪಂಚಾ 'ಲೇಖಪದ್ಧತಿ' ಮೊದಲಾದ ಕೆಲವು ಪ್ರಮುಖ ಗ್ರಂಥಗಳಿದ್ದವು. ಅಂದು ಶಾಸನಗಳ ಸಿದ್ಧತೆಯಲ್ಲಿ ಕನಿಷ್ಠ ಇಬ್ಬರಾದರೂ ಬೇಕಾಗುತಿತ್ತು. ಕೃತಿಕಾರನೇ ಶಾಸನ ಪಾಠವನ್ನು ಶಿಲೆ ಅಥವಾ ತಾಮ್ರಪಟದ ಮೇಲೆ ಬರೆದುಕೊಡುತ್ತಿದ್ದುದುಂಟು ಅಥವಾ ರೂವಾರಿಯೇ ಲಿಪಿಕಾರನ ಪಾತ್ರವನ್ನು ವಹಿಸುತ್ತಿದ್ದನು. ಕವಿಯ ಶಾಸನ ಪಾಠವನ್ನು ಶಿಲೆಯ ಮೇಲೆ ಬರೆದುಕೊಟ್ಟಿರುವುದಕ್ಕೆ ಪ್ರಸಿದ್ಧವಾದ ಉದಾಹರಣೆಗೆ 'ತಾಳಗುಂದ ಶಾಸನ'. ಈ ಶಾಸನದಲ್ಲಿ ಕುಬ್ಜ ತನ್ನ ಕಾವ್ಯವನ್ನು ಕಲ್ಲಿನ ಮೇಲೆ ಬರೆದನು ಎಂಬುದನ್ನು (ಕುಬ್ಜ ಸ್ವಕಾವ್ಯಮಿದಮಶ್ಮತಲೇ ಲಿಲೇಖ) ಸ್ಪಷ್ಟವಾಗಿ ಹೇಳಲಾಗಿದೆ. ಒಟ್ಟಿನಲ್ಲಿ ಶಾಸನ ವಿಷಯವನ್ನು

ರಚಿಸುವ ಮತ್ತು ಕೊರೆಯುವ ವ್ಯಕ್ತಿಗಳು ಸಂಪೂರ್ಣವಾಗಿ ಬಿನ್ನ, ಬಿನ್ನ ಅವರಿಲ್ಲದೇ ಶಾಸನವೇ ಆಗುತ್ತಿರಲಿಲ್ಲ. ಇವರ ನಡುವೆ ಬರುವ ಲಿಪಿಕಾರ ಕೂಡ ಒಂದು ಪ್ರತ್ಯೇಕ ಪ್ರಮುಖ ವರ್ಗವಾದರೂ ಅವನು ಉಳಿದ ಇಬ್ಬರಷ್ಟು ಅನಿವಾರ್ಯ ಭಾಗವಾಗಿರಲಿಲ್ಲವೆಂದು ತಿಳಿಸುತ್ತದೆ.

ಕರ್ತೃ, ಲಿಪಿಕಾರ, ರೂವಾರಿ ಈ ಮೂವರ ಹೆಸರುಗಳನ್ನು ಉಲ್ಲೇಖಿಸುವ ಶಾಸನಗಳು ಸಾಕಷ್ಟಿವೆ. ಇದಕ್ಕೆ ಉದಾಹರಣೆಯಾಗಿ ಗದಗ ತಾಲೂಕಿನ ಕುರ್ತಕೋಟಿಯ ಕ್ರಿ.ಶ. ೧೦೮೨ರ ಶಿಲಾಶಾಸನವನ್ನು ನೋಡಬಹುದು. ಈ ಶಿಲಾಶಾಸನವನ್ನು ರಚಿಸಿದವನು ನಾಗದೇವ. ಶಿಲೆಯ ಮೇಲೆ ಬರೆದವನು ಕುಲಕರಣಿ ಮಾಬಲಾರ್ಯ ಕೊರೆದವನು ಅಯ್ಯಣ್ಣ.

ಶಿಲೆಯ ಮೇಲೆ ಶಾಸನ ವಿಷಯವನ್ನು ಕೆತ್ತುತ್ತಿದ್ದ ಶಿಲ್ಪಿಗೆ ಸೂತ್ರದಾರ, ಶಿಲಾಕೂಟ, ರೂಪಕಾರ (ರೂಪಕಾರಿ>ರೂವಾರಿ) ಮೊದಲಾದ ಹೆಸರುಗಳಿದ್ದವು. ಹಾಗೆಯೇ ತಾಮ್ರಪಟಗಳ ಮೇಲೆ ಶಾಸನಗಳನ್ನು ಕೊರೆಯುತ್ತಿದ್ದವರು ಅಯಸ್ಕಾರ, ಸೂತ್ರಧಾರ, ಹೇಮಕಾರ, ಸೂನಾರ (ಸುವರ್ಣಕಾರ) ಶಿಲ್ಪಿ, ವಿಜ್ಞಾನಿ, ಅಕ್ಕಸಾಲೆ, ಮೊದಲಾಗಿ ಕರೆಯಲ್ಪಡುತ್ತಿದ್ದರು. ಕನ್ನಡ ಶಾಸನಗಳಲ್ಲಿ ಇವರ ಹೆಸರುಗಳು ಸಾಮಾನ್ಯವಾಗಿ ಆಚಾರಿ, ಓಜ, ಎಂದು ಅಂತ್ಯಗೊಳ್ಳುತ್ತದೆ. ಶಿಲ್ಪಶಾಸ್ತ್ರ ಪಾರಂಗತರಾದ ಈ ರೂವಾರಿಗಳು ತಮ್ಮನ್ನು ಗೌರವ ಭಾವದಿಂದ ಸರಸ್ವತೀ ಗಣದಾಸಿಗಳೆಂದೂ ಕರೆದುಕೊಂಡಿರುವುದಲ್ಲದೆ, ತಾವು ತ್ವಷ್ಟೃ ಕುಲದವರು. 'ವಿಶ್ವಕರ್ಮ' ತಮ್ಮ ಅಧಿದೇವತೆ ಎಂದು ಹೇಳಿಕೊಂಡಿದ್ದಾರೆ.

ಕಲ್ಹಣನ 'ರಾಜತರಂಗಿಣಿ'ಯ ಪ್ರಕಾರ ಕಾಶ್ಮೀರದ ರಾಜಸ್ಥಾನದಲ್ಲಿ ಶಾಸನಗಳ ಸಿದ್ಧತೆಯ ಮೇಲ್ವಿಚಾರಣೆಯು 'ಪಟ್ಟೋಪಾಧ್ಯಾಯ'ವೆಂಬ ಅಧಿಕಾರಿಯದಾಗಿತ್ತು. ಆತನು 'ಅಕ್ಷಪಟಲ'ವೆಂಬ ವಿಭಾಗಕ್ಕೆ ಸೇರಿದವನಾಗಿದ್ದನು. ತಾಮ್ರಪಟಗಳಲ್ಲಿ ಈತನ ಹೆಸರು ಕಂಡುಬರುತ್ತದೆ. ರಾಜಶಾಸನಗಳನ್ನು ಈತನೇ ನೋಡಿಕೊಳ್ಳುತ್ತಿದ್ದನು.

ಶಾಸನಗಳಲ್ಲಿ ಲಿಪಿಕಾರ ಯಾವುದಾದರೊಂದು ಅಕ್ಷರವನ್ನು ಬರೆಯದೇ ಬಿಟ್ಟಿದ್ದರೆ. ಅದನ್ನು ಆಯಾ ಪಂಕ್ತಿಯ ಮೇಲೆ ಅಥವಾ ಕೆಳಗೆ ಲೋಪಸ್ಥಾನದ ಹತ್ತಿರ ಬರೆಯಲಾಗುತ್ತಿತ್ತು. ಶಬ್ದಗಳೇ ಬಿಟ್ಟು ಹೋಗಿದ್ದಾಗ ಅವನ್ನು ಅಂಚಿನಲ್ಲಿ ಕೆತ್ತುತ್ತಿದ್ದರು. ಕೆಲವೊಮ್ಮೆ ಲೋಪಸ್ಥಾನವನ್ನು ಕಾಕಪಾದ, ಹಂಸಪಾದ, ಸ್ವಸ್ತಿಕ ಮೊದಲಾದ ಚಿನ್ಹೆಗಳಿಂದ ಸೂಚಿಸಲಾಗಿತ್ತು. ತಪ್ಪಾಗಿ ಕೆತ್ತಿದ ಅಕ್ಷರದ ಸುತ್ತ ವೃತ್ತವೊಂದನ್ನೆಳೆದು ಅದನ್ನು ಗಣನೆಗೆ ತೆಗೆದುಕೊಳ್ಳಬಾರದೆಂದು

ಸೂಚಿಸಿರುವುದುಂಟು. ಈ ಪದ್ಧತಿಯ ಉಲ್ಲೇಖ ಶ್ರೀ ಹರ್ಷನ ನೈಷದೀಯ ಕಾವ್ಯದಲ್ಲೂ ಬಂದಿದೆ.[೯]

ಹೀಗೆ ಶಾಸನಗಳನ್ನು ಸಿದ್ಧಪಡಿಸುವ ಕೃತಿಕಾರ, ಲಿಪಿಕಾರ ಮತ್ತು ಶಿಲ್ಪಿಯಿಂದ ಮೊದಲುಗೊಂಡು ಶಾನಸಗಳನ್ನು ಸಂರಕ್ಷಿಸುವವರೆಗೆ ಅಂದಿನ ಜನರು ಕಾಳಜಿವಹಿಸುತ್ತಿದ್ದರು. ಶಾಸನಗಳನ್ನು ರಾಜನ ಅಥವಾ ಆತನ ಅಧಿಕಾರಿಯ ಸಮ್ಮುಖದಲ್ಲಿ ಸಿದ್ಧಪಡಿಸಬೇಕಾಗಿತ್ತು. ಅವು ರಾಜಾಜ್ಞೆಯಾದುದರಿಂದ ಜನರ ಸಂಪರ್ಕ ಹೆಚ್ಚಾಗಿರುವ ದೇವಸ್ಥಾನ, ಕೆರೆ, ಬಾವಿ ಮೊದಲಾದೆಡೆ ನೆಡುತ್ತಿದ್ದರು. ಈ ಸ್ಥಳಗಳು ಹೆಚ್ಚು ಸುರಕ್ಷಿತವಾಗಿದ್ದವು. ತಾಮ್ರ ಶಾಸನಗಳನ್ನು ತಮ್ಮ ತಮ್ಮ ಮನೆಗಳಲ್ಲಿ ಸಂರಕ್ಷಿಸಿಡುತ್ತಿದ್ದರು. ಆದರೆ ಇಂದು ಜನರ ಅಜ್ಞಾನ ಕಾರಣವಾಗಿ ಶಿಲಾಶಾಸನಗಳು ಕಟ್ಟೆಯ ಕಲ್ಲಾಗಿ, ಮೆಟ್ಟಿಲಾಗಿ, ಬಳಕೆಗೊಳ್ಳುತ್ತಿರುವುದು, ಖೇದಕರ.

**೧.೭ ಶಾಸನ ಕವಿಗಳು**

**೧. ಶಾಸನಕವಿಗಳು:**

ಕನ್ನಡ ಶಾಸನ ಪ್ರಪಂಚಕ್ಕೆ ಸಾಹಿತ್ಯ ದೃಷ್ಟಿಯಿಂದ ಭಾರತೀಯ ಮಹತ್ವವನ್ನು ದೊರಕಿಸಿಕೊಟ್ಟವರು 'ಶಾಸನ ಕವಿಗಳು' ರಾಜಕೀಯ ಮತ್ತು ಸಾಮಾಜಿಕ ದಾಖಲೆಗಳಾದ ಶಾಸನಗಳನ್ನು ತಮ್ಮ ತಮ್ಮ ಪ್ರತಿಭಾಸ್ಪರ್ಶದಿಂದ ಸಾಹಿತ್ಯವನ್ನಾಗಿಸಿದ ಈ ಕವಿಗಳ ಸಂಖ್ಯೆ ಕರ್ನಾಟಕದಲ್ಲಿ ವಿಪುಲವಾಗಿದೆ.[೧೦] ಈ ಶಾಸನ ಕವಿಗಳು ಸುಮಾರು ೩೦೦೦೦ಕ್ಕೂ ಹೆಚ್ಚು ಶಾಸನಗಳನ್ನು ಬರೆದಿರುವ ಇವರು ತಮ್ಮ ಹೆಸರು ಹೇಳಿಕೊಂಡಿರುವುದು ಕೆಲವು ಶಾಸನಗಳಲ್ಲಿ ಮಾತ್ರ. ಅದೂ ಶಾಸನದ ತೀರ ಕೊನೆಯ ಭಾಗದಲ್ಲಿ ಕೆಲವೊಮ್ಮೆ ಮಧ್ಯಭಾಗದಲ್ಲಿಯೂ ಕೆಲವೊಮ್ಮೆ ಆರಂಭದಲ್ಲಿಯೂ ಹೇಳಿಕೊಂಡಿದ್ದಾರೆ. ಕೆಲವು ಸ್ಪಷ್ಟ ಉಲ್ಲೇಖಗಳಿರುವುದರಿಂದ ಶಾಸನ ಕವಿಗಳನ್ನು ಗುರುತಿಸುವುದು ಬಹು ಸುಲಭ. ಉದಾಹರಣೆಗೆ–

೧) 'ಬಮ್ಮರ ಹರಿಯಂಣ ಹೇಳ್ದಶಾಸನ'

೨) .... ವಿರಚಿಸಿದನೊಪ್ಪೆ ಲಕ್ಷ್ಮೀಧರತನಯಂ ರಾಮದೇವನೀ ಶಾಸನಮಂ'

೩) 'ಕವಿರಾಜಪಂಡಿತ ಮಾಳೆಯನ ಕವಿತೆ'

೪) 'ಶ್ರೀ ಕಂದರ್ಪನ ಕಾವ್ಯಂ'

ಇಂಥ ಅವಕಾಶಗಳನ್ನು ಬಳಸಿಕೊಂಡು ಶಾಸನ ಕವಿಗಳ ಚರಿತ್ರೆಯನ್ನು ಬಹುಮಟ್ಟಿಗೆ ಖಚಿತವಾಗಿ ಬರೆಯಬಹುದು. ಆದರೆ

೧) 'ಶ್ರೀ ಮತ್ಕವಿರಾಜವಲ್ಲಭಂ ಕಪ್ಪಣಭಟ್ಟರ ಲಿಖಿತಂ'

೨) 'ಕವಿ ವೈಜನಾಥ ಬರೆದಂ'

೩) 'ಬರವರಾಚಾರ್ಯ್ಯ ಸೂರ್ಯ್ಯಣಂ ಬರದ'

೪) 'ಜನ್ನಯ್ಯನ ಕವಿತೆ, ದಾವಣ್ಣಮ ಬರಪ...'

ಎಂಬ ವಾಕ್ಯಗಳಲ್ಲಿಯಂತೆ ಕವಿ, ಲಿಪಿಕಾರ, ರೂವಾರಿ ಮೂವರಿಗೂ 'ಲಿಖಿತಂ' 'ಬರೆದಂ' ಬರೆಪಂ' ಎಂಬ ಪದಗಳನ್ನು ಬಳಸಿದ್ದರೆ ಇವರಿಂದ ಕವಿಯನ್ನು ಪ್ರತ್ಯೇಕಿಸುವುದು ಕಷ್ಟವಾಗುತ್ತದೆ. ಅಂಥ ಸಂದರ್ಭದಲ್ಲಿ 'ಶ್ರೀಮತ್ಕವಿರಾಜವಲ್ಲಭರ ಕಪ್ಪಣಬಟ್ಟರ ಲಿಖಿತಂ' ಎಂಬಂತೆ ಹೆಸರಿನ ಹಿಂದೆ ವಿದ್ವತ್ ಸೂಚಕ ವಿಶೇಷಣಗಳಿದ್ದರೆ ಮಾತ್ರ ಆತನು ಶಾಸನ ಕವಿಯೆಂದು ಭಾವಿಸಬಹುದು ಎಂದು ಡಾ.ಎಂ.ಎಂ. ಕಲಬುರ್ಗಿಯವರ ವಿಚಾರ.[೧೧] ಆದರೆ ಕೆಲವು ಸಂದರ್ಭದಲ್ಲಿ ಶಾಸನಕ್ಕೆ ಪಾಠವನ್ನು ಮಾತ್ರ ರಚಿಸಿಕೊಡುವುದು ಕವಿಯ ಕಾರ್ಯ. ಆದರೆ ಅಲ್ಲಲ್ಲಿ ಬರುವ

೧) ಕನ್ಥೆಯ ಗುರುಗಳ ಹರವಿಯರ ಚಟ್ಟಪಾರ್ಯ್ಯಂ ಪೇಳ್ದು ಬರೆದ'

೨) ದೇವರಸರ ಮಗಂ ಮಾರಮರಸಂ ಹೇಳ್ದು ತಾನೆ ಬರೆದ ಶಾಸನಂ

೩) ಸಂಧಿವಿಗ್ರಹಿ ದಾಮರಾಜಂ ಸಾಸನಗಬ್ಬಂ ಪೇಳ್ದು ಬರೆದಂ

ಎಂಬ ಮಾತುಗಳು ಕವಿಯಾದವನು ಲಿಪಿಕಾರನ ಕಾರ್ಯ ಮಾಡಿದುದನ್ನು ತಿಳಿಸುತ್ತದೆ. ಇದಕ್ಕೆ ಕಾರಣ ಶಾಸನ ಕವಿಯ ಹಸ್ತಾಕ್ಷರವು ಸುಂದರವಾಗಿದ್ದರೆ; ಅಥವಾ ಲಿಪಿಕಾರನ ಅಭಾವ ಕೆಲವು ಸಲ ಕಾರಣವಾಗಿರಬೇಕು. ಸಾಮಾನ್ಯವಾಗಿ ಒಂದು ಶಾಸನಕ್ಕೆ ಒಬ್ಬನೇ ಸಾಹಿತ್ಯವನ್ನು ಒದಗಿಸುತ್ತಿದ್ದರೂ ಕೆಲವು ಶಾಸನಗಳಿಂದ ಇಬ್ಬರು ಮೂವರು ಜನ ಸೇರಿ ಸಾಹಿತ್ಯ ಪೂರೈಸಿದ ಬಗ್ಗೆ ತಿಳಿಯುವುದು. ಉದಾಹರಣೆಗೆ.

೧) ಸುಕರ ಕವಿಯಪ್ಪಚರಾಜನುಂ ಸಹಜಕವಿ ಮಲ್ಲದೇವನುಂ ಬರೆದರು

೨) ಕವಿಕಬ್ಬದ ದಾಮೋದರ ಚಕ್ರೇಶ ಚೇರೆಯಲ್ಲಾಳಬುಧಂ ।
ಸವಿನಯದೆ ಪೇಳ್ದರೆನೆ । ಪಳಿವವನೆಂಬನಾವ ಕವಿಗಳ ಕೃತಿಯಂ ॥

ದಂಡನಾಯಕ ಕೇಶಿ, ವಾದಿರಾಜ ಮುನಿಪುಂಗವ, ಬ್ರಹ್ಮ, ಆರ್ಯಸೇನ ಮೊದಲಾದ ಅಧಿಕ ಪ್ರಜ್ಞರ ಕನ್ನಡದ ಗದಾಯುದ್ಧ, ಪಂಚತಂತ್ರ, ಮದನತಿಲಕ, ಪುಣ್ಯಾಶ್ರವ ಕೃತಿಗಳನ್ನು ತಿದ್ದಿದಂತೆ ಒಬ್ಬ ರಚಿಸಿದ ಶಾಸನ ಪಾಠವನ್ನು ಇನ್ನೊಬ್ಬನು ತಿದ್ದಿ ಒಪ್ಪಗೊಳಿಸಿರಬಹುದು.[೧೨]

## ೨. ಶಾಸನ ಲಿಪಿಕಾರರು:

'ಬಳಸಿ ಬರೆಯಲು ಕಂಟ ಪತ್ರದ ಉಲುಹುಗೆಡದಗ್ಗಳಿಕೆ' ಎಂಬುದು ಕವಿ ಕುಮಾರವ್ಯಾಸನು ವೀರನಾರಾಯಣನ 'ಲಿಪಿಕಾರ'ನಾಗಿ ಹೇಳಿದ ಒಂದು ಅರ್ಥವತ್ತಾದ ಮಾತು. ಕೆಲವು ಶಾಸನ ಲಿಪಿಕಾರರಿಂದಲೂ ಉದ್ಘೋಷಿಸಲ್ಪಟ್ಟ ಇಂತಹ ಉತ್ಕಟ ಅಗ್ಗಳಿಕೆಯನ್ನು ಗಮನಿಸಿ, ಶಾಸನ ನಿರ್ಮಾಣ ಕಾಲದಲ್ಲಿ ಅವರು ನಿರ್ವಹಿಸಿದ ಪಾತ್ರವನ್ನು ಅವರ ರೋಚಕ ಹಸ್ತಕೌಶಲ, ರೋಮಾಂಚಕಾರಿ ಹಸ್ತಕೌಶಲಗಳನ್ನೂ ಅರಿಯಬಹುದಾಗಿದೆ.[೧೩]

ಆನೆಕೆರೆ ಶಾಸನದ ಕೊನೆಯ 'ಜನ್ನಯ್ಯನ ಕವಿತೆ' 'ದಾವಣ್ಣನ ಬರಪ' ಮಲ್ಲೋಜನ ಕಂಡರಣೆ ಎಂಬ ಮಾತಿನಿಂದ, ಒಂದು ತಾಮ್ರ ಫಲಕ ಇಲ್ಲವೆ ಶಿಲಾ ಫಲಕ ಶಾಸನವಾಗುವಲ್ಲಿ ಸಾಮಾನ್ಯವಾಗಿ ಕವಿ, ಲಿಪಿಕಾರ, ರೂವಾರಿಗಳು ಅವಶ್ಯವೆಂದು ತಿಳಿದುಬರುತ್ತದೆ. 'ಪತ್ರಶಾಸನವ ನೋಡ ಬರದ ಆಚಾರಿ ಮನಸೋಜ' ಎಂಬ ಮಾತಿನಿಂದ ಎಲೆಯ ಮೇಲೆ ಬರೆದು ತಂದ ವಿಷಯವನ್ನು 'ಲಿಪಿಕಾರ' ಬಳಪದಿಂದ ಶಿಲೆಯ ಮೇಲೆ ತೀಡಿದ ತರುವಾಯ ರೂವಾರಿ ಅದನ್ನು ಕಂಡರಿಸುತ್ತಿದ್ದನು. ಆದರೆ ಕುಬ್ಜ 'ಸ್ವಕಾವ್ಯಮಿದಶ್ಮತಲೇ ಲಿಲೇಖ' ಹಾಗೂ ಹುಲಿಗೆರೆಯ ಬಮ್ಮೊಜ ತಾನೆ ಬರೆದು ತಾನೇ ಕಂಡರಿಸಿದ' ಎಂಬಲ್ಲಿ 'ಕವಿ ಕುಬ್ಜ' ರೂವಾರಿ ಬಮ್ಮೋಜರು ಲಿಪಿಕಾರನ ಕಾರ್ಯ ಮಾಡಿದ್ದಾರೆ. ಆದರೆ ಮೂರು ಕಾರ್ಯ ಮಾಡಿದ ಅಂದರೆ ಕವಿಯೇ ಸ್ವತಃ ಸಾಹಿತ್ಯ ರಚಿಸಿ, ಲಿಪಿಕಾರನ ಕಾರ್ಯ ಹಾಗೂ ಕಂಡರಣೆಯ ಕಾರ್ಯ ಮಾಡಿದ ಉಲ್ಲೇಖಗಳಿಲ್ಲ.[೧೪]

ಶಾಸನಗಳಲ್ಲಿ ಬರೆದಂ, ಲಿಖಿಸಿದಂ, ಎಂಬ ಪದಗಳ ಬಳಕೆ ಕಟ್ಟುನಿಟ್ಟು ಇಲ್ಲದೆ ಒಮ್ಮೊಮ್ಮೆ ಕವಿ, ಲಿಪಿಕಾರ ಮತ್ತು ರೂವಾರಿಗಳಿಗೂ ಆರೋಪಿತವಾಗಿದ್ದು ಶಾಸನಗಳಿಂದ ಲಿಪಿಕಾರರನ್ನು ಗುರುತಿಸುವುದು ಕಷ್ಟ. ಲಿಪಿಕಾರರು ತಮ್ಮ ಹೆಸರಿನೊಂದಿಗೆ ಆರಾಧ್ಯದೇವತೆ, ಧರ್ಮಗುರು, ಲಿಪಿವಿದ್ಯಾಗುರು, ತಂದೆ, ಅಜ್ಜ, ಮಾವ, ಊರು, ಇತ್ಯಾದಿ ಸಂಬಂಧಗಳನ್ನು ಹೇಳುತ್ತಾರೆ. ಇವರಲ್ಲಿ ಸಂಧಿವಿಗ್ರಹಿ ಪಟ್ಟಣ ಸ್ವಾಮಿಗಳಂಥ ಪ್ರತಿಷ್ಠಿತರು ಕುಳಕರಣಿ, ಸೇನಬೋವ, ಶ್ರೀಕರಣ, ಕಾಯಸ್ಥ, ಗಾವುಂಡ ಗಣಕರಂಥ ಅಧಿಕಾರಿಗಳು, ಮಿಕ್ಕ ಸಾಮಾನ್ಯ ಪ್ರಜೆಗಳು ಎಂಬ ಅಕ್ಷರಜ್ಞರೆಲ್ಲ ಕಂಡುಬರುತ್ತಾರೆ. ಲಿಪಿಕಾರ್ತಿಯರ ಉಲ್ಲೇಖ ಸದ್ಯಕ್ಕೆ 'ಕಚಿವಯ ಕಾಳಿಸೆಟಿ.....ಳಿಯ

ಹದಿಸೆಟ್ಟಿಯಕವ್ವೆಯ ಬರಪ'[೧೫] ಎಂಬುದು ಗಮನಾರ್ಹ ಉಲ್ಲೇಖ. ಧಾರವಾಡದ ನೂಲಕೇರಿಯ ಶಾಸನ ತೀಡಿದ ಏಕೈಕ ಮಹಿಳೆ ಎನ್ನಬೇಕಾಗುತ್ತದೆ.

ಲಿಪಿಸೌಂದರ್ಯ ಸಾಧಿಸಬೇಕಾದರೆ ಕನ್ನಡ ಅಕ್ಷರಗಳ ಅವಯವಜ್ಞಾನ ಅವಯವ ಪ್ರಮಾಣ ಜ್ಞಾನ ಅವಶ್ಯಕ.

**ಪೊಕ್ಕಳು ತಲೆಕಟ್ಟುಮನ ।**
**ನಕ್ಷರದವಯವಮನಱಿದು ಖಂಡರಿಸುಲುಕೀ ।**
**ಇಕ್ಕುಡನೆ ಬಲ್ಲನಱಿಯ ।**
**ರ್ಮಿಕ್ಕವರೆನ್ದೊಸೆದು ಧರಣಿ ಬಣ್ಣಿಸುತಿಕ್ಕುಂ ॥**

ದಾವಣಗೆರೆ ಜಿಲ್ಲೆಯ ಕೊಡಗನೂರಿನ[೧೬] ಕ್ರಿ.ಶ.೧೧೧೩ರ ಶಾಸನವು ಕನ್ನಡ ಅಕ್ಷರಗಳ ಅಂಗತ್ರಯಗಳನ್ನು ಪೊಕ್ಕಳು=ಅಕ್ಷರದ ಮುಖ್ಯಭಾಗ. ತಲೆಕಟ್ಟು ಮತ್ತು ಅನಂತರದ ಅವಯವಗಳ ಬಗ್ಗೆ ಶಾಸ್ತ್ರೀಯವಾಗಿ ಬರವಣಿಗೆಯ ವಿಧಾನವನ್ನು ತಿಳಿಸುತ್ತದೆ. ಇದು ಲಿಪಿಕಾರ ಅರಿಯಬೇಕಾದ ಮೊದಲ ತತ್ವ.

**ಬಹುರೇಖೆಯಾಗಿ ಬಾರದೆ ।**
**ಯತಿನಿಬಿಡಂ ನೋರ್ಪ(ನೇರ್ಪ)ಡೆಲ್ಲರುಂ ಹೊಗಳಲುಕೀ ।**
**ವಸ್ಮತಿ (ವಸುಮತಿಯೊಳು) ಕಣ್ಗೊಳಿಸಲು ।**
**ಕತಿ ಬಲ್ಲಂ ದಾಸೋಜನಗ್ರತನಯಮ್ಮಸಣರಿ ॥**[೧೭]

ಇಲ್ಲಿ ಇಕ್ಕುಡ ಹಾಗೂ ಮಸಣರು ಲಿಪಿಕಾರರಲ್ಲ, ಅಕ್ಷರದ ಶರೀರ ರಚನೆಯನ್ನು ಹೇಳಿದ ಕಾರಣ ಈ ಪದ್ಯಗಳನ್ನು ಸ್ವೀಕರಿಸಲಾಗಿದೆ. ಬಹುರೇಖೆಯಾಗಿ ಬಾರದೆ ಅಂದರೆ ರೇಖೆ ಬಳಸಿಬರುವಂತೆ ಯತಿನಿಬಿಡಂ ನೇರ್ಪಡೆ ಅಂದರೆ ಅಕ್ಷರಗಳ ಮದ್ಯೆ ಯೋಗ್ಯ ಸ್ಥಳವಿರುವಂತೆ ಅಕ್ಷರಗಳನ್ನು ಬರೆಯಬೇಕು ಎಂದು ಅಕ್ಷರಗಳ 'ಆಕಾರಜ್ಞಾನ' ವಿನ್ಯಾಸ ವಿಧಾನಗಳನ್ನು ತಿಳಿಸಿಕೊಡುತ್ತದೆ. ಹೀಗಾಗಿ ಇಲ್ಲಿಯ ವಿವರಣೆ ವೈಜ್ಞಾನಿಕವಾಗಿ ಭಾಷಾವಿಜ್ಞಾನದ ಹಿನ್ನೆಲೆಯಿಂದ ನೋಡಿದಾಗಲೂ ಇದು ಸತ್ಯವೆನಿಸುತ್ತದೆ. ಲಿಪಿಕಾರನೊಬ್ಬ 'ವಾಚಕಚಕ್ರವರ್ತಿ' ಎಂದು ಹೇಳಬಹುದು. ಉದಾಹರಣೆಗೆ ಕೆಲವು ಲಿಪಿಕಾರರನ್ನು ನೋಡಬಹುದು.

೧. ಘಂಟೆಯಂಮನ ಸುಹಸ್ತದ ಬರಹ

೨. ಶಾನಭೋಗ ಲಕ್ಷ್ಮಪತ್ತಿ (ಲಕ್ಷ್ಮೀಪತಿ) ಶುಭಹಸ್ತ ಬರಹವು.

೩. ಸ್ವಸ್ತಿ ಶ್ರೀ ಭರತಯ್ಯನ ದಿವ್ಯಲಿಖಿತ'[೧೮]

ಹೀಗೆ ಶಾಸನ ಲಿಪಿಕಾರರನ್ನು ಗುರುತಿಸಬಹುದಾಗಿದೆ.

**೩. ಶಾಸನ ರೂವಾರಿಗಳು (ಕಂಡರಣೆಕಾರರು):**

ಶಾಸನಗಳಿಗೆ ಬಳಸುವ ಫಲಕಗಳಲ್ಲಿ ಶಿಲೆ ಮತ್ತು ಲೋಹಗಳು ಪ್ರಮುಖವಾದವು. ಕವಿ ರಚಿಸಿಕೊಟ್ಟ ಪಾಠವನ್ನು ಫಲಕಗಳ ಮೇಲೆ ಕೊರೆಯುವವರು ಶಿಲಾ ವಿದ್ಯಾ ಪ್ರವೀಣರಾದ ಕಲ್ಲು ಕುಟಿಗರು ಮತ್ತು ಲೋಹ ಪ್ರವೀಣರಾದ ಅಕ್ಕಸಾಲಿಗರು, ಕೆಲವು ಸಲ ಬಡಿಗ, ಕಮ್ಮಾರ ಮತ್ತು ಕಂಚುಗಾರರೂ ಈ ಕಾರ್ಯವನ್ನು ಮಾಡಿದ್ದುಂಟು ಈ ಅಕ್ಷರ ಶಿಲ್ಪಿಗಳನ್ನು ರೂವಾರಿಗಳನ್ನು (ಕಂಡರಣೆಕಾರರು) ಎಂದು ಕರೆಯುವರು.

ಶಾಸನಗಳಲ್ಲಿ ರೂವಾರಿಗಳ ಉಲ್ಲೇಖ ಸಾಮಾನ್ಯವಾಗಿ ಶಾಸನಕವಿ ಲಿಪಿಕಾರ, ಹಾಗೂ ನಂತರದಲ್ಲಿ ಕಂಡರಣಿಕಾರ ಹೀಗೆ ಶಾಸನದ ತೀರ ಕೊನೆಗೆ ರೂವಾರಿಗಳ ಹೆಸರಿರುತ್ತದೆ. ಸಾಮಾನ್ಯವಾಗಿ ರೂವಾರಿಗಳ ಹೆಸರಿನ ಹಿಂದೆ ಕಲ್ಕುಟಗ, ಕಲ್ಲಂ ಕಡಿದಾತ, ಕಂಡರಣಿಕಾರ, ಸರಸ್ವತಿಗಣವ್ರತ್ರ, ಸರಸ್ವತಿಗಣದಾಸಿ, ಶಾಸನಾಚಾರ್ಯ, ಸೂತ್ರಧಾರಿ, ವಿಶ್ವಕರ್ಮ, ಅಕ್ಕಸಾಲಿ, ಭಿನ್ನಣಿ, ಬಡಗಿ, ಶಿಲ್ಪಿ, ಆಚಾರಿ, ಕಮ್ಮಾರ, ಕಂಚಗಾರ, ಗವುಂಡ, ಮತ್ತು ರೂವಾರಿಯೆಂಬ ವಿಶೇಷಣಗಳು ಬರುತ್ತವೆ.[೧೯] ಉದಾಹರಣೆಗೆ

೧. 'ಕೆರೆಯೂರ ಕಲ್ಕುಟಿಗ ಸಾತೋಜಂ ಕಣ್ಡರಿಸಿದ'

೨. 'ಶಿಲ್ಪಿ ಬಸವನ ಮಗ ಮಲ್ಲಾಚಾರಿ'

೩. ಖಂಡರಿಸಿದಂ ಕಂಚಗಾರ ಜನ ಮಗ ದಾಸೋಜ

೪. 'ಅಗ್ಗಳೋಜನ ಮಗಂ ರೂವಾರಿ ಮುಚ್ಚೋಜಂ ಬೆಸಗೆಯ್ದ'[೨೦]

ಹೀಗೆ ಶಾಸನ ರೂವಾರಿಗಳನ್ನು ಗುರುತಿಸಬಹುದು.

**೧.೮ ಶಾಸನಾಧ್ಯಯನದ ಇತಿಹಾಸ**

ಡಾ.ಪಿ.ಬಿ. ದೇಸಾಯಿಯವರು ಶಾಸನಾಧ್ಯಯನದ ಸೂಕ್ಷ್ಮ ಸುಳುಹುಗಳನ್ನು ಹೀಗೆ ತಿಳಿಸುತ್ತಾರೆ. "ಶಾಸನ ಪ್ರಪಂಚದಲ್ಲಿ ತಿಳಿವಿನ ಯುಗ, ಕತ್ತಲೆಯ ಯುಗ, ಸಂಶೋಧನಯುಗ ಎಂದು ಮೂರು ಯುಗಗಳನ್ನು ಗುರುತಿಸಿದ್ದಾರೆ. ತಿಳಿವಿನ ಯುಗದಲ್ಲಿ ಪ್ರಾಚೀನ ಶಾಸನಗಳನ್ನು ಓದಿ, ಅರ್ಥ ವಿವರಿಸುವ ಸಮರ್ಥ ವಿದ್ವಾಂಸರು ಬಾಳಿದ್ದರೆಂದು ತಿಳಿಸುತ್ತಾರೆ.

ಕತ್ತಲೆಯ ಯುಗದಲ್ಲಿ ಶಾಸನಗಳ ಬಗೆಗಿನ ಜ್ಞಾನವು, ವಿದ್ಯಾವಂತರಲ್ಲಿ ಸಹ ಪೂರ್ತಿಯಾಗಿ ಲುಪ್ತವಾಗಿರುವುದನ್ನು ಗುರುತಿಸುತ್ತಾರೆ.[೨೧]

ಬ್ರಿಟಿಷಾದಿ ಪಾಶ್ಚಿಮಾತ್ಯರು ಭಾರತಕ್ಕೆ ಬಂದಾಗ: ಅವರಲ್ಲಿನ ಕೆಲವು ವಿದ್ವಾಂಸರಿಗೆ ಭಾರತೀಯತ್ವದ ಬಗೆಗೆ ಆಸಕ್ತಿ ಹುಟ್ಟಿತು. ಹೀಗಾಗಿ ಅವರು ಭಾರತದ ಪ್ರಾಚೀನ ಜನಗಳ ಸಂಸ್ಕೃತಿ, ಇತಿಹಾಸ, ಸಮಾಜ ಸಾಹಿತ್ಯಗಳೆಡೆಗೆ ತಮ್ಮ ವಿಶಿಷ್ಟ ಕುತೂಹಲದಿಂದ ಗಮನಹರಿಸಿ, ಕಾರ್ಯ ಪ್ರವೃತ್ತರಾದರು. ಈ ಕಾಲದಲ್ಲಿ ಶಾಸನಾಧ್ಯಯನವು ಆರಂಭಗೊಂಡಿತು. ಶಾಸನಗಳನ್ನು ಹುಡುಕುವ, ಓದುವ, ಅರ್ಥ ವಿವರಿಸುವ, ಒಂದೆಡೆ ಸಂಗ್ರಹಿಸುವುದು, ಸಂಪಾದಿಸುವುದು, ಪ್ರಕಟಿಸುವುದು ಈ ಎಲ್ಲಾ ಕಾರ್ಯಚಟುವಟಿಕೆಗಳು ನಡೆದವು. ಹೀಗಾಗಿ ಇದು ಸಂಶೋಧನೆಯ ಯುಗವಾಯಿತು.

ಶಾಸನಾಧ್ಯಯನದ ದೃಷ್ಟಿಯಿಂದ ಈ ಸಂಶೋಧನೆಯ ಯುಗವು ಅತ್ಯಂತ ಮಹತ್ವದ್ದು. ಇಲ್ಲಿಂದಲೇ ಅದರ ಇತಿಹಾಸವು ಆರಂಭಗೊಳ್ಳುತ್ತದೆ. ಆದುದರಿಂದ ಸದ್ಯದಮಟ್ಟಿಗೆ ಶಾಸನಾಧ್ಯಯನ ಇತಿಹಾಸಕ್ಕೆ ಸುಮಾರು ೨೫೦ ವರ್ಷಕ್ಕಿಂತಲೂ ಹೆಚ್ಚು ಪ್ರಾಚೀನತೆ ಇದೆ.

ಡಾ.ಎಂ.ಎಂ. ಕಲಬುರ್ಗಿಯವರು ಶಾಸನಾಧ್ಯಯನದ ಇತಿಹಾಸವನ್ನು ಈ ರೀತಿ ವಿಭಾಗಿಸಿ ಅವಲೋಕನ ಮಾಡಿದ್ದಾರೆ.[೨]

೧. ಕರ್ನಲ್ ಮೆಕೆಂಝಿ ಯುಗ–೧೭೯೧–೧೮೫೭

೨. ಸರ್ ವಾಲ್ಟರ್ ಇಲಿಯಟ್ ಯುಗ–೧೮೫೭–೧೮೭೦

೩. ಡಾ.ಫ್ಲೀಟ್ ಮತ್ತು ರೈಸ್ ಯುಗ–೧೮೭೦ರ ತರುವಾಯ

ಅಧ್ಯಯನದ ದೃಷ್ಟಿಯಿಂದ ಡಾ.ಎಂ.ಎಂ.ಕಲಬುರ್ಗಿ ಅವರ ವಿಭಾಗ ಕ್ರಮ ಹೆಚ್ಚು ಅನುಕೂಲಕರವಾಗಿದೆ.

### ೧) ಕರ್ನಲ್ ಮೆಕೆಂಝಿ ಯುಗ (೧೭೯೧–೧೮೫೭):

'ಸರ್ ವಿಲಿಯಂ ಜೋನ್ಸ್' ಎಂಬ ನ್ಯಾಯಾಧೀಶನು 'ಏಷಿಯಾಟಿಕ್ ಸೊಸಾಯಿಟಿ ಆಫ್ ಬೆಂಗಾಲ' ಎಂಬ ಸಂಸ್ಥೆಯನ್ನು ೧೭೮೪ ರಂದು ಕಲ್ಕತ್ತೆಯಲ್ಲಿ ಸ್ಥಾಪಿಸಿದನು. ಅದರ ಉದ್ದೇಶ ಭಾರತೀಯತ್ವದ ಅಧ್ಯಯನ ಈ ಸಂಸ್ಥೆಯ ಪರವಾಗಿ ೧೭೮೯ ರಲ್ಲಿ 'ಏಷಿಯಾಟಿಕ್ ರಿಸರ್ಚಸ್' ಹೆಸರಿನ ಪತ್ರಿಕೆ ಪ್ರಾರಂಭವಾಯಿತು. ಇದರ ಮೂರನೇ (೧೭೯೧) ಸಂಪುಟದಲ್ಲಿ ಸರ್ ವಿಲಿಯಂ ಜೋನ್ಸ್‌ನಿಂದ ಒಂದು ತಾಮ್ರಶಾಸನ "A royal grant of land in carnata" ಎಂಬ ಶೀರ್ಷಿಕೆಯಲ್ಲಿ ಪ್ರಕಟವಾಯಿತು. ಈ ಶಾಸನವನ್ನು ಬರೆಯಿಸಿದವರು ವಿಜಯನಗರದ

ಅರಸರು ತಮಿಳುನಾಡಿನ ಕಂಚಿ ದೇವಾಲಯಕ್ಕೆ ದತ್ತಿಕೊಟ್ಟುದ್ದು ಇದರ ವಿಷಯ. ಭಾಷೆ ಸಂಸ್ಕೃತ. ಈ ಶಾಸನ ಕಂಚಿಯಲ್ಲಿ ಸಿಕ್ಕಿದರೂ ನಮ್ಮ ಅರಸರಿಗೆ ಸಂಬಂಧಪಟ್ಟದ್ದೆಂಬ ಕಾರಣದಿಂದ ಇದನ್ನೇ ಕರ್ನಾಟಕದ ಪ್ರಥಮ (ಸಂಸ್ಕೃತ) ಶಾಸನವೆನ್ನಬಹುದು. ಇಲ್ಲಿಂದ ಮುಂದೆ ನಮ್ಮ ಶಾಸನದ ಅಧ್ಯಯನ ಆರಂಭವಾಯಿತು. ಈ ಪ್ರಸಂಗದಲ್ಲಿ ನೆನೆಯಬೇಕಾದ ವ್ಯಕ್ತಿ, ಶಾಸನಾಧ್ಯಯನದ ಯುಗಪುರುಷ 'ಕರ್ನಲ್ ಮೆಕೆಂಝಿ'. ಟಿಪ್ಪುವಿನ ಮರಣದ ತರುವಾಯ ಆಂಗ್ಲರ ಕೈವಶವಾದ ಮೈಸೂರು ಪ್ರದೇಶದ ಭೌಗೋಳಿಕ ಪರಿವೀಕ್ಷಣಾಧಿಕಾರಿಯಾಗಿ ಈತನು ನೇಮಕಗೊಂಡನು. ೧೭೯೯ ರಿಂದ ೧೮೦೯ರವರೆಗೆ ಅದಿಕಾರವನ್ನು ವಹಿಸಿಕೊಂಡಿದ್ದ ಇವನ ಅಭಿರುಚಿ ಶಿಲ್ಪ, ಶಾಸನ ಮತ್ತು ಹಳೆಯ ಗ್ರಂಥಗಳ ಸಂಗ್ರಹದ ಕಡೆಗೆ ಮುಂದುವರೆಯಿತು. ಈ ಲೋಕೋತ್ತರ ಸಂಗ್ರಹ ಕಾರ್ಯದಲ್ಲಿ ಮೆಕೆಂಝಿಗೆ ಬಹುದೊಡ್ಡ ನೆರವು ನೀಡಿದವ ಭಾರತೀಯ ಪಂಡಿತ 'ಕವೆಲ್ಲಿ ಬೋರಯ್ಯ' ಬಹುಭಾಷಾ ಬಲ್ಲಿದ. ತೀಕ್ಷ್ಣಮತಿ, ಆಶುಕವಿಯಾಗಿದ್ದ. ಇವನ ನೆರವು ಇಲ್ಲದಿದ್ದರೆ ಮೆಕೆಂಝಿ ಇಂಥ ಘನಕೀರ್ತಿ ಗಳಿಸುತ್ತಿರಲಿಲ್ಲ. ಆದರೆ ಈತನ ಕಾರ್ಯ ಅಧಿಕಾರಿಯ (ಮೆಕೆಂಝಿ ಹೆಸರಿನಲ್ಲಿ ಮುಳುಗಿಹೋಯಿತು. ಬೋರಯ್ಯನನ್ನು ಕುರಿತು ಹೇಳಿದ. "When he deciphered the Halakannada characters, Inscribed on the table found at Dodare, which is now deposited in the museum of the Asiatic Society, His master was highly gratified and put his name on it" ಎಂಬ ಮಾತನ್ನು ನೋಡಿದರೆ, ಕನ್ನಡ ಶಾಸನವನ್ನು ಮೊದಲು ಓದಿದ ಕೀರ್ತಿ 'ಬೋರಯ್ಯ'ನಿಗೆ ಸಲ್ಲುವಂತೆ ಕಾಣುತ್ತದೆ. ಈತನು ೧೮೦೭ರ ಏಸಿಯಾಟಿಕ್ ರಿಸರ್ಚಸ್ ಪತ್ರಿಕೆಯ ಒಂಭತ್ತನೆಯ ಸಂಪುಟದಲ್ಲಿ ಶ್ರವಣಬೆಳಗೊಳಕ್ಕೆ ಸಂಬಂಧಿಸಿದ ಬುಕ್ಕರಾಯನ ಧರ್ಮಶಾಸನವನ್ನು ಪ್ರಕಟಿಸಿದ (ಪು–೨೭೦). ಬಹುಶಃ ಇದು ಕನ್ನಡ ಭಾಷೆಯ ಪ್ರಥಮ ಪ್ರಕಟಿತ ಶಾಸನ ಎಂದು ಡಾ.ಎಂ.ಎಂ. ಕಲಬುರ್ಗಿಯವರು ಅಭಿಪ್ರಾಯಪಟ್ಟಿದ್ದಾರೆ.

ಇದೇ ಸಂಪುಟದ ೨೭೮ನೇ ಪುಟದ ಮೇಲೆ ಮೆಕೆಂಝಿ ಸಂಗ್ರಹಿಸಿದ ಶಾಸನದ ಚಿತ್ರವಿದ್ದು, ಅದರ ಕೆಳಗೆ "Ancient sculpture and inscription sravanagoodya near Madagasee" ಎಂದು ಬರೆಯಲಾಗಿ. ಬ್ರೌನ್ಸ್ ಎಂಬಾತನು ಕನ್ನಡ ಶಾಸನಗಳನ್ನು ಸಂಗ್ರಹಿಸಿದ್ದನೆಂದು ಇದೇ ಸಂಪುಟದ ೨೭೪ನೆಯ ಪುಟದ ಅಡಿಯಿಂದ ತಿಳಿದುಬರುತ್ತದೆ. ಇಲ್ಲಿಯೇ ಮೆಕೆಂಝಿ ಕಳಿಸಿದ ಕನ್ನಡ ಶಾಸನಗಳನ್ನು ಕುರಿತು ಕೋಲ್‌ಬ್ರುಕ್ ಲೇಖನ ಬರೆದಿದ್ದಾರೆ. (ಪು.೪೧೨, ೪೨೧, ೪೨೨)

೧೮೩೫ರ JRAS ದ ಎರಡನೆಯ ಸಂಪುಟ (ಪು–೩೭೮–೯೯)ದಲ್ಲಿ ಹೆನ್ರಿ ಎಂಬುವನು ಕರ್ನಾಟಕದ ಹನ್ನೆರಡು ಶಾಸನಗಳನ್ನು ಕುರಿತು ಅಭ್ಯಾಸ ಮಾಡಿದ್ದಾನೆ. ಪ್ರೊ. ವಿಲ್ಸನ್ ಎಂಬುವನು ಇವುಗಳಿಗೆ ಅಲ್ಲಿಯೇ ಟಿಪ್ಪಣಿ ಬರೆದಿದ್ದಾನೆ. (ಮೂರನೆಯ ಸಂಪುಟ ಪು.೯೪ ಮತ್ತು ೨೫೮, ನಾಲ್ಕನೆಯ ಸಂಪುಟದ ಪು–೨೮೦, ಐದನೆಯ ಸಂಪುಟದ ಪು–೧೭೩ ರ ಮೇಲೆ ಇವುಗಳ ಪಾಠ ಮತ್ತು ಭಾಷಾಂತರಗಳನ್ನು ವಥೆನ್ ನೀಡಿದ್ದಾನೆ.)

೧೮೩೭ರ JASB ಯ ಆರನೇ ಸಂಪುಟದಲ್ಲಿ ಕವೆಲ್ಲಿ ಬೋರಯ್ಯ ಕಳಿಸಿದ ಒಂದು ಶಾಸನದ ನಕಲು ಮತ್ತು ಸಾರಾಂಶಗಳನ್ನು ಜೇಮ್ಸ್ ಪ್ರಿನ್ಸೆಪ್ ಪ್ರಕಟಿಸಿದ್ದಾರೆ. ಹೀಗೆ ಪ್ರಾರಂಭ ಕಾಲದಲ್ಲಿ ಹಲವು ವಿದ್ವಾಂಸರು ದುಡಿದಿದ್ದರೂ ಇವರಲ್ಲಿ ಕನ್ನಡ ಶಾಸನಾಧ್ಯಯನಕ್ಕೆ ಶ್ರದ್ಧೆಯ ಹಿನ್ನೆಲೆ ಹಾಕಿದ ಕೀರ್ತಿ ಮೆಕೆಂಝಿಗೆ ಸಲ್ಲುತ್ತದೆ. ೧೮೦೦ ರಿಂದ ೧೮೧೭ರ ಅವಧಿಯಲ್ಲಿ ಇವನು ಸಂಗ್ರಹಿಸಿದ ಶಾಸನಗಳ ಸಂಖ್ಯೆ ಸುಮಾರು ೩೦೦. ಮುಂದೆ ಈತನ ಮರಣ ಕಾಲವಾದ ೧೮೨೧ರ ಹೊತ್ತಿಗೆ ಈ ಸಂಖ್ಯೆ ೬೦೦೦ಕ್ಕೆ ಮುಟ್ಟಿತು. ಇವುಗಳಲ್ಲಿ ಕರ್ನಾಟಕಕ್ಕೆ ಸಂಬಂಧಪಟ್ಟವು. ೧೦೦ಕ್ಕೆ ೯೮. ಈತನ ಶಕ್ತಿಯೆಲ್ಲ ಶಾಸನ ಸಂಗ್ರಹದಲ್ಲಿ ವ್ಯಯವಾದ ಕಾರಣ ಪ್ರಕಟನ ಕಾರ್ಯ ಹೇಳಿಕೊಳ್ಳುವಷ್ಟು ನಡೆಯಲಿಲ್ಲ.

ಒಟ್ಟಿನಲ್ಲಿ ೧೭೯೧ ರಿಂದ ೧೮೩೭ರವರೆಗೆ ಸರ್. ವಿಲಿಯಂ ಜೋನ್ಸ್, ಕರ್ನಲ್ ಮೆಕೆಂಝಿ, ಕವೆಲ್ಲಿ ವೆಂಕಟ ಬೋರಯ್ಯ. ಬ್ರೌನ್ಸ್, ಕೋಲ್‌ಬ್ರುಕ್, ಹೆನ್ರಿವಥೆನ್, ವಿಲ್ಸನ್, ಪ್ರಿನ್ಸೆಪ್ ಇವರಿಂದ ಕೆಲವೇ ಕನ್ನಡ ಶಾಸನಗಳು ಪ್ರಕಟಗೊಂಡವು. ಈ ಕಾರ್ಯಕ್ಕೆ ವೇದಿಕೆಯಾದ ಪತ್ರಿಕೆಗಳೆಂದರೆ ಏಷಿಯಾಟಿಕ್ ರಿಸರ್ಚಸ್ JRAS ಮತ್ತು JASB.

### ೨) ಸರ್ ವಾಲ್ಟರ್ ಇಲಿಯಟ್ ಯುಗ: (೧೮೩೭–೧೮೭೦)

ಇಲಿಯಟ್ ಮದ್ರಾಸ್ ಸಿವಿಲ್ ಸರ್ವಿಸ್‌ನಲ್ಲಿ ಅಧಿಕಾರಿಯಾಗಿದ್ದ. ಈತನಿಂದ ಕನ್ನಡ ಶಾಸನಗಳ ವ್ಯವಸ್ಥಿತ ಅಭ್ಯಾಸ ಆರಂಭವಾಯಿತು. ಮುಂಬೈ ಕರ್ನಾಟಕ, ನಿಜಾಂ ಕರ್ನಾಟಕದ ಪಶ್ಚಿಮ ಭಾಗ, ಹಳೆಯ ಮೈಸೂರು ಪ್ರಾಂತದ ಉತ್ತರ ಭಾಗಗಳಿಂದ ಇವನು ಸಂಗ್ರಹಿಸಿದ ಶಾಸನಗಳ ಸಂಖ್ಯೆ ೧೩೦೦. ಇವುಗಳಲ್ಲಿ ೫೯೪ ಶಾಸನಗಳನ್ನು ಆರಿಸಿಕೊಂಡು "Karnataka Desh Inscription" ಎಂಬ ಹೆಸರಿನಲ್ಲಿ ಕೈಬರಹದ ನಾಲ್ಕು ಪ್ರತಿಗಳನ್ನು ಸಿದ್ಧಪಡಿಸಿದನು. ಅವುಗಳನ್ನು ಕುರಿತು ಫ್ಲೀಟನು 'ಎಡಿನ್‌ಬರ್ಗ್ ವಿಶ್ವವಿದ್ಯಾಲಯಕ್ಕೆ ಸಂಬಂಧಪಟ್ಟ ಒಂದು ಪ್ರತಿ ನನ್ನ ಕೈಯಲ್ಲಿದೆ. ಇನ್ನೊಂದು ಪ್ರತಿ ಲಂಡನ್ನಿನ ರಾಯಲ್ ಏಷಿಯಾಟಿಕ್ ಸೊಸಾಯಿಟಿಯಲ್ಲಿದೆ.

ಮಿಕ್ಕೆರಡು ಎಲ್ಲಿವೆ ನನಗೆ ಗೊತ್ತಿಲ್ಲ" ಎಂದಿದ್ದಾನೆ. ಉತ್ತರಕರ್ನಾಟಕದ ಚರಿತ್ರೆಯ ಅಧ್ಯಯನಕ್ಕೆ ಅಗತ್ಯವಾದ ಶಾಸನಗಳನ್ನೊಳಗೊಂಡ ಬೆಲೆಯುಳ್ಳ ಸಂಪುಟವಿದು. ಇವನು ತಮ್ಮ ಶಾಸನಾಧ್ಯಯನದ ಸಮಗ್ರ ಕೃಷಿಯನ್ನು "Hindu Inscriptions" ಎಂಬ ಅಭ್ಯಾಸಪೂರ್ಣ ಲೇಖನದಲ್ಲಿ "(JRAS-IV, p.೧-೧೪, ೧೮೩೭) ವ್ಯಕ್ತಪಡಿಸಿರುವನು. ಈ ಲೇಖನದ ಪರಿಷ್ಕೃತ ರೂಪ 'Madras Journal of the literature and science-VII, p.೧೯೩ ದಲ್ಲಿ ಪ್ರಕಟವಾಯಿತು.

೧೮೩೯ ರ JRAS ದ ಸಂಪುಟ-೫ ರ ಮೇಲೆ ಹೆನ್ರಿ ವಥೆನ್ ಬೆಳಗಾವಿಯ ಕೆಲವು ಕನ್ನಡ-ಸಂಸ್ಕೃತ ಶಾಸನಗಳನ್ನು ಪ್ರಕಟಿಸಿದ. ಇದೇ ಸುಮಾರಿಗೆ ಭಾರತೀಯರಾದ ಬಾಲಗಂಗಾಧರ ಶಾಸ್ತ್ರೀಯವರು, ಕೊಲ್ಲಾಪುರ ಪ್ರದೇಶದ ಏಳು ಶಾಸನಗಳನ್ನು (IBBRASI-IIP ೨೬೩-೭೨, ೧೮೪೫) ಪ್ರಕಟಿಸಿದರು.

ಮೇಜರ್ ಡಿಕ್ಸನ್ ಎಂಬುವನು ತೆಗೆದುಕೊಂಡ ಚಿತ್ರದುರ್ಗ, ಬಳ್ಳಿಗಾವಿ, ಹರಿಹರ ಪ್ರದೇಶಗಳ ಸುಮಾರು ೯೦ ಶಾಸನ ಪೋಟೊಗಳನ್ನು ಮೈಸೂರು ಸರ್ಕಾರ ೧೮೬೫ರಲ್ಲಿ ಪ್ರಕಟಿಸಿತು. ಡಾ.ಪಿಗು ಮತ್ತು ಕರ್ನಲ್ ಬ್ರಿಗ್ಸ್, ಮೈಸೂರು, ಧಾರವಾಡ ಮುಂತಾದ ಪ್ರದೇಶಗಳಿಗೆ ಸಂಬಂಧಿಸಿದ ೬೦ ಶಾಸನಗಳ ಪೋಟೊ ತೆಗೆದುಕೊಂಡರು. ಇವುಗಳನ್ನು ಆಧರಿಸಿ ಮಿ.ಹೋಪ್ ಎಂಬುವನು "Inscription in Dharwad and Mysore" ಎಂಬ ಹೆಸರಿನಿಂದ ೬೪ ಶಾಸನ ಚಿತ್ರಗಳನ್ನೊಳಗೊಂಡ ಒಂದು ಸಂಪುಟವನ್ನು ಸಿದ್ಧಗೊಳಿಸಿ ಇದರ ಹತ್ತು ಪ್ರತಿಗಳನ್ನು ಮಾಡಿಸಿದನು. ಇವುಗಳಲ್ಲಿ ೧) ರಾಯಲ್ ಏಷಿಯಾಟಿಕ್ ಲೈಬ್ರರಿ ಲಂಡನ್ ೨) ಸೊಸೈಟಿ ಏಷಿಯಾಟಿಕ್ ಪ್ಯಾರಿಸ್ ೩) ರಾಯಲ್ ಓರಿಯಂಟಲ್ ಸೊಸೈಟಿ ಲೀಪ್ಜಿಕ್ ೪) ಇಂಡಿಯಾ ಆಫೀಸ್ ಲೈಬ್ರರಿ ಲಂಡನ್ ೫) ಮಿಸ್ ಥಾಮಸ್ ಹೀಗೆ ಇವರ ವಶದಲ್ಲಿ ಐದು ಪ್ರತಿಗಳಿದ್ದು ಮಿಕ್ಕ ಐದು ಪ್ರತಿಗಳ ಇರುವಿಕೆ ತಿಳಿದುಬಂದಿಲ್ಲ. ಈ ಕಾಲದಲ್ಲಿ ಡಾ.ಭಾವೂದಾಜಿಯವರು ಕರ್ನಾಟಕದಲ್ಲಿ ಸಂಗ್ರಹಿಸಿದ ಕೆಲವು ಶಾಸನ ಭಾವಚಿತ್ರಗಳ ಬಗೆಗೆ ವಿವೇಚಿಸಿರುವರು. (JBBRAS IX p-೩೧೪, ೧೮೬೭-೭೦) ಹೀಗೆ ಈ ಅವಧಿಯಲ್ಲಿ ಕೆಲವು ಶಾಸನಗಳ ಪೋಟೊ ಸಂಗ್ರಹ ಮತ್ತು ವಿವರಣೆಗಳೂ JARS, JBBRAS ಇವುಗಳ ಮೂಲಕ ಲೇಖನಗಳೂ ಬೆಳಕಿಗೆ ಬಂದವು. ೧೮೩೬ರಲ್ಲಿ ಲ್ಯಾಸೆನ್, ೧೮೩೭-೩೮ರಲ್ಲಿ ಜೇಮ್ಸ್ ಪ್ರಿನ್ಸೆಪ್

ಇವರು ಬ್ರಾಹ್ಮಿಲಿಪಿಯನ್ನು ಸಮರ್ಪಕವಾಗಿ ಓದಿದ್ದರಿಂದ ಕನ್ನಡ ಶಾಸನ ಓದುವ ಕಾರ್ಯ ಈ ಯುಗದಲ್ಲಿ ತೃಪ್ತಿಕರವಾಗಿ ನಡೆಯಿತು.

### ೩) ಫ್ಲೀಟ್ ಮತ್ತು ರೈಸ್ ಯುಗ:

ಜಾನ್ ಫೇತ್‌ಫುಲ್ ಫ್ಲೀಟ್ ಮತ್ತು ಬೆಂಝಿಮಿನ್ ಲೂಯಿ ರೈಸ್ ಅವರು ಕರ್ನಾಟಕ ಶಾಸನಾಧ್ಯಯನವನ್ನು ಶ್ರೀಮಂತಗೊಳಿಸಿದ ಅಶ್ವಿನಿದೇವತೆಗಳು ಇವರಿಂದ ನಮ್ಮ ಶಾಸನಗಳ ವ್ಯವಸ್ಥಿತ ಅಧ್ಯಯನ ಆರಂಭವಾಯಿತು. JBBRAS IX (೧೮೬೭–೭೦)ದಲ್ಲಿ ಡಾ. ಫ್ಲೀಟರು ಕದಂಬರ ಕನ್ನಡ ಮತ್ತು ಸಂಸ್ಕೃತ ಶಾಸನಗಳನ್ನು ಪ್ರಕಟಿಸಿದ್ದಾರೆ. ಇದೇ ಪತ್ರಿಕೆಯ ಪುಟ ೨೫೯ರ ಮೇಲಿನ "On some Sanskrit copper plates found in Belgaum collectorate" ಎಂಬ ಇವರ ಲೇಖನ ಗಮನಾರ್ಹವಾಗಿದೆ. ಈ ಪತ್ರಿಕೆಯ ಹತ್ತನೆಯ ಸಂಪುಟದಲ್ಲಿ ಸಂಸ್ಕೃತ ಮತ್ತು ಕನ್ನಡ ಭಾಷೆಯ ಎಂಟು ಶಾಸನಗಳನ್ನು ವೆಂಕಟರಂಗೋ ಕಟ್ಟಿ ಗಂಗಾಧರ ಮಡಿವಾಳೇಶ್ವರ ತೂರಮರಿಯವರ ಸಹಾಯ ಪಡೆದು ಪ್ರಕಟಿಸಿದ್ದಾರೆ.

೧೮೭೨ರಲ್ಲಿ ಡಾ.ಬರ್ಗೇಸರ ಸಂಪಾದಕತ್ವದಲ್ಲಿ 'Indian Antiquary' ಎಂಬ ಪತ್ರಿಕೆ ಅಸ್ತಿತ್ವದಲ್ಲಿ ಬಂದಿತು. ಇದರ ಒಂದನೇ ಸಂಪುಟದಿಂದಲೇ ರೈಸ್, ಫ್ಲೀಟ್, ಕಿಟೆಲ್‌ರ ಲೇಖನಗಳು ಪ್ರಾರಂಭವಾಗಿವೆ. ಇಲ್ಲಿ ರೈಸಗಿಂತ ಕಿಟೆಲ್, ಕಿಟೆಲ್‌ಗಿಂತ ಫ್ಲೀಟ್ ಹೆಚ್ಚು ಲೇಖನ ನೀಡಿರುವರು. ಫ್ಲೀಟ್‌ರಂತೂ ನಾಲ್ಕನೆಯ ಸಂಪುಟದಿಂದ 'Sanskrit and Old Canarese Inscription' ಎಂಬ ಶಿರ್ಷಿಕೆಯಲ್ಲಿ ಶಾಸನಗಳನ್ನು ಪ್ರಕಟಿಸಲು ಪ್ರಾರಂಭಿಸಿ, ಒಟ್ಟು ೧೯೬ ಶಾಸನಗಳನ್ನು ಬೆಳಕಿಗೆ ತಂದಿದ್ದಾರೆ. ಈ ಧಾರವಾಹಿಯು ಉತ್ತರ ಕರ್ನಾಟಕದ ಇತಿಹಾಸ ಬರೆಯುವವರಿಗೆ ಬೆಲೆಯುಳ್ಳ ಸಂಗ್ರಹವಾಗಿದೆ. ಈವರೆಗೆ ವಿದ್ವಾಂಸರಿಂದ ಅಲ್ಲಲ್ಲಿ ಪ್ರಕಟವಾದ ಶಾಸನಗಳನ್ನು ಸಕ್ರಮವಾಗಿ ಜೋಡಿಸಿ, ಕೆಲವು ಹೊಸ ಶಾಸನಗಳನ್ನು ಸೇರಿಸಿ ಡಾ.ಫ್ಲೀಟರು ಹೊಸದೊಂದು ಸಂಪುಟವನ್ನು ಹೊರತಂದರು. ೧೯೭೮ರಲ್ಲಿ. ಅದರ ಹೆಸರು "Pali Sanskrit and old canarese inscriptions from Bombay presidency and part of Madras presidency and Mysore" ಇಂಡಿಯಾ ಆಫೀಸಿನವರ ಅಲ್ಪ ಧನಸಹಾಯ ಕಾರಣವಾಗಿ ಇದರ ಒಂಭತ್ತು ಸಂಪುಟಗಳು ಮಾತ್ರ ಸಿದ್ಧವಾದವು. ಇವು: ೧) ಇಂಡಿಯಾ ಆಫೀಸ್ ಲಂಡನ್ ೨) ಬ್ರಿಟಿಷ್ ಮ್ಯೂಸಿಯಂ ಲಂಡನ್ ೩) ರಾಯಲ್ ಏಷಿಯಾಟಿಕ್ ಸೊಸೈಟಿ

ಲಂಡನ್ ೪) ಮುಂಬೈ ಸೆಕ್ರೆಟರಿಯೆಟ್ ೫) ರಾಯಲ್ ಏಷಿಯಾಟಿಕ್ ಸೊಸೈಟಿಯ ಮುಂಬೈ ಶಾಖೆ, ೬) ಮಿ.ಗಿಬ್ತ ೭) ಡಾ.ಬರ್ಗೆಸ್ ೮) ಡಾ.ಫ್ಲೀಟ್ ೯) ಬಾಡ್ಲಿಯನ್ ಲೈಬ್ರರಿ ಹೀಗೆ ಒಂಭತ್ತು ಕಡೆಗೆ ಉಳಿದವು.

1888ರಲ್ಲಿ "Ephigraphia Indica" ಎಂಬ ಪತ್ರಿಕೆ ಆರಂಭವಾಯಿತು. ಮಹತ್ವಪೂರ್ಣ ಪತ್ರಿಕೆಯಾದ ಇದರಲ್ಲಿ ರೈಸ್ ಕಿಟೆಲ್, ಒಂದೊಂದು ಶಾಸನಗಳನ್ನು ಪ್ರಕಟಿಸಿದ್ದಾರೆ. ಫ್ಲೀಟರು ಮಾತ್ರ "Some records of the Rastrakuta kings of Malkhed" ಎಂಬ ಶಿರೋನಾಮೆಯಲ್ಲಿ ಸುಮಾರು ೨೦ ಶಾಸನಗಳನ್ನು ಸಂಪಾದಿಸಿದ್ದಾರೆ.

ಇದೇ ಸಮಯದಲ್ಲಿ ನೆನೆಯಬೇಕಾದ ಇನ್ನೊಬ್ಬ ವ್ಯಕ್ತಿ ಬಿ.ಎಲ್. ರೈಸ್ ಇವರಿಂದ ೧೮೭೯ ರಲ್ಲಿ "Mysore Inscription" ಬೆಳಕು ಕಂಡಿತು. ಇದರಲ್ಲಿ ಮೇಜರ್ ಡಿಕ್ಸನ್ ಅವರ ಸಂಗ್ರಹವೂ ಸೇರಿಕೊಂಡಿದೆ. ೧೮೮೬ ರಲ್ಲಿ ಇವರು ಪ್ರಕಟಿಸಿದ "Coorg Inscription" ಎಂಬುದು ಬೆಳಕು ಕಂಡಿತು. ಇದರಲ್ಲಿ ಮೇಜರ್ ಡಿಕ್ಸನ್ ಅವರ ಸಂಗ್ರಹವೂ 1886ರಲ್ಲಿ ಇವರು ಪ್ರಕಟಿಸಿದ "Coorg Inscription" ಎಂಬುದು 'Epigraphia Carnatica'ದ ಪ್ರಥಮ ಸಂಪುಟ (ಇದರ ಪರಿಷ್ಕೃತ ಆವೃತ್ತಿ ೧೯೧೪ರಲ್ಲಿ ಪ್ರಕಟವಾಯಿತು) ಇದರಿಂದ

EC II - ಶ್ರವಣಬೆಳಗೊಳ (೧೮೮೯)
EC III-i - ಮೈಸೂರು ಜಿಲ್ಲೆ (೧೮೯೪)
EC IV-ii - ಮೈಸೂರು ಜಿಲ್ಲೆ (೧೮೯೮)
EC V-i - ಹಾಸನ ಜಿಲ್ಲೆ ಪ್ರಸ್ತಾವನೆ, ರೋಮನ್ ಲಿಪಿಪಾಠ, ಭಾಷಾಂತರ (೧೯೦೨)
EC V-ii - ಹಾಸನ ಜಿಲ್ಲೆ ಶಾಸನಗಳ ಕನ್ನಡ ಪಾಠ (೧೯೦೨)
EC VI - ಕಡೂರು ಜಿಲ್ಲೆ (೧೯೦೧)
EC VII-i - ಶಿವಮೊಗ್ಗ ಜಿಲ್ಲೆ (೧೯೦೨)
EC VII-ii - ಶಿವಮೊಗ್ಗ ಜಿಲ್ಲೆ (೧೯೦೪)
EC IX - ಬೆಂಗಳೂರು ಜಿಲ್ಲೆ (೧೯೦೫)
EC X-i - ಕೋಲಾರ ಜಿಲ್ಲೆ–ಪ್ರಸ್ತಾವನೆ, ರೋಮನ್ ಲಿಪಿಪಾಠ, ಭಾಷಾಂತರ (೧೯೦೫)

EC XI-ii - ಕೋಲಾರ ಜಿಲ್ಲೆ–ಶಾಸನಗಳ ಕನ್ನಡ ಪಾಠ (೧೯೦೫)

EC XI - ಚಿತ್ರದುರ್ಗ ಜಿಲ್ಲೆ (೧೯೦೩)

EC XII - ತುಮಕುರು ಜಿಲ್ಲೆ (೧೯೦೪)

ಸಂಪುಟಗಳು ಬೆಳಕು ಕಂಡವು. ಈ ಸಂಪುಟಗಳ ಪುನರ್ಮುದ್ರಣ ಕಾರ್ಯವನ್ನು ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆ ಕೈಗೊಂಡಿದೆ. ಮೈಸೂರಿನ ಪುರಾತತ್ವ ಇಲಾಖೆಯ ಪ್ರಥಮ ಡೈರೆಕ್ಟರ್‌ರಾಗಿ ಹೊರತಂದ ಈ ಎಲ್ಲ ಸಂಪುಟಗಳ ಒಟ್ಟು ಶಾಸನ ಹೆಚ್ಚು ಕಡಿಮೆ ೮೮೬೯ ತುಂಗಭದ್ರೆಯ ದಕ್ಷಿಣದ ಸುಮಾರು ಎಲ್ಲ ಶಾಸನಗಳನ್ನು ಜಿಲ್ಲಾವಾರು ಹೊಂದಿಸಿದ ಇದೊಂದು ವ್ಯವಸ್ಥಿತ ಕಾರ್ಯ. ಪ್ರತಿಯೊಂದು ಸಂಪುಟಗಳು ದೀರ್ಘ ಪ್ರಸ್ತಾವನೆ, ಶಾಸನಗಳ ರೋಮನ್ ಲಿಪಿ, ಇಂಗ್ಲೀಷ್ ಭಾಷಾಂತರ ಮೂಲಪಾಠ ಹೀಗೆ ನಾಲ್ಕು ವಿಭಾಗಗಳನ್ನೊಳಗೊಂಡಿದೆ.

ಒಟ್ಟಿನಲ್ಲಿ ಶಾಸನ ಕ್ಷೇತ್ರದಲ್ಲಿ ಕಿಟೆಲ್‌ರ ಸೇವೆ ಇಲ್ಲವೆನ್ನುವಷ್ಟು ಕಡಿಮೆ. ಫ್ಲೀಟರದು ಬಿಡಿ ಲೇಖನ ಹೆಚ್ಚು, ಗ್ರಂಥ ಕಡಿಮೆ. ರೈಸರ ಸೇವೆಗಿಂತ ಫ್ಲೀಟರ ಸೇವೆ ವೈವಿಧ್ಯಮಯ; ಫ್ಲೀಟರ್ ಸೇವೆಗಿಂತ ರೈಸರದು ವಿಸ್ತಾರಮಯ ಫ್ಲೀಟರ ಕ್ಷೇತ್ರ ಹೆಚ್ಚಾಗಿ ತುಂಗಭದ್ರೆಯ ಉತ್ತರ; ರೈಸರು ಕೇವಲ ತುಂಗಭದ್ರೆಯ ದಕ್ಷಿಣ. ರೈಸರ ಅಭ್ಯಾಸದ ಫಲ "Mysore Gazetteer" ಫ್ಲೀಟರ್ ಅಭ್ಯಾಸದ ಫಲ "The dynasties of the Kanarese districts (Bombay Gazeteer-I-ii) ಮತ್ತು 'Epigraphy (Imperial Gazetteers of India-II) ಒಟ್ಟಿನಲ್ಲಿ ಫ್ಲೀಟ್ ಮತ್ತು ರೈಸರು ಕನ್ನಡ ಶಾಸನ ಪ್ರಪಂಚವನ್ನು ಬೆಳಗಿಸಿದ ಸೂರ್ಯಚಂದ್ರರು. ಇವರಲ್ಲದೆ ಮೋರೆಸ್, ಬಾರ್ನೆಟ್, ಕೀಲನಾರ್ಹ ಮೊದಲಾದವರು. ಕೆಲವು ಶಾಸನಗಳನ್ನು ಪ್ರಕಟಿಸಿದ್ದರೂ ಈ ತರುವಾಯ ಕನ್ನಡ ಶಾಸನ ಪ್ರಪಂಚಕ್ಕೆ ಕ್ರೈಸ್ತ ವಿದ್ವಾಂಸರ ಸೇವೆ ಸಲ್ಲಲಿಲ್ಲವೆಂದು ಹೇಳಬೇಕು.

ಕನ್ನಡ ಶಾಸನಾಧ್ಯಯನದ ಕ್ಷೇತ್ರದಲ್ಲಿ ಈ ಕ್ರೈಸ್ತರಂತೆ ಹಿಂದೆ ಹೇಳಿದ ಭಾವುದಾಜ ತೆಲಂಗರಲ್ಲದೆ ಆರ್. ರಾಮಾರಾವ್, ಎಸ್.ಸಿ. ನಂದಿಮಠ ರಾಜಪುರೋಹಿತ, ಕೆ.ಜಿ. ಕುಂದಣಗಾರ, ಪಂಚಮುಖಿ, ಲಕ್ಷ್ಮೀನಾರಾಯಣರಾಯ, ಪಿ.ಬಿ. ದೇಸಾಯಿ ಮತ್ತು ಜಿ.ಎಸ್. ಗಾಯಿ ಮೊದಲಾದ ಭಾರತೀಯರನ್ನು ಹೆಸರಿಸಬೇಕಾಗುತ್ತದೆ. ಇವರಲ್ಲಿ ಎದ್ದುಕಾಣುವ ವ್ಯಕ್ತಿ ಆರ್. ನರಸಿಂಹಾಚಾರ್ ೧೮೮೯ರಂದು ಬಿ.ಎಲ್.ರೈಸ್‌ರ ಅಸಿಸ್ಟಂಟ್‌ರೆಂದು ನೇಮಕಗೊಂಡು ೭ ವರ್ಷ ಸೇವೆ ಸಲ್ಲಿಸಿದರು. ರೈಸರ ತರುವಾಯ ೧೯೦೬ರಲ್ಲಿ ಡೈರೆಕ್ಟರ್ ಪದವಿಗೇರಿ ೧೯೨೨

ರಂದು ನಿವೃತ್ತರಾದರು. ವ್ಯಾಕರಣ, ಕಾವ್ಯ, ಛಂದಸ್ಸು, ಶಾಸನ, ಇತಿಹಾಸಗಳಲ್ಲಿ ಬಲ್ಲಿದರಾದ ಇವರು "Mysore Archaelogical Report" ಹೆಸರಿನಲ್ಲಿ ೧೬ ವರ್ಷಗಳ ವರದಿಗಳನ್ನು ಪ್ರಕಟಿಸಿದರು. (೧೯೦೬–೧೯೨೨) ಬಿ.ಎಲ್. ರೈಸ್ ಪ್ರಕಟಿಸಿದ EC II ಇವರಿಂದ ಪರಿಷ್ಕರಣಗೊಂಡಿತು. ಶಾಸನ ಪದ್ಯಮಂಜರಿ' ಗಂಗರ ಚರಿತ್ರೆ, ಬೇಲೂರು ಸೋಮನಾಥಪುರ ಮತ್ತು ದೊಡ್ಡಗದ್ದೆವಳ್ಳಿಯ ಹೊಯ್ಸಳದೇವಸ್ಥಾನ ಇವು ಇವರ ಕೃತಿಗಳು.

ನರಸಿಂಹಾಚಾರ್ ಅವರ ತರುವಾಯ ಆ ಸ್ಥಾನಕ್ಕೆ ಬಂದವರು ಆರ್. ಶ್ಯಾಮಶಾಸ್ತ್ರಿಗಳು, ಬಳಿಕ ಬಂದವರು ಡಾ.ಎಂ.ಎಚ್.ಕೃಷ್ಣ 'ಎಪಿಗ್ರಾಫಿಯ ಕರ್ನಾಟಕ' ಸಂಪಾದನೆಯ ಕಾರ್ಯವನ್ನು ಮುಂದುವರೆಸಿದ ಇವರಿಂದ

EC XIII - A.K. ರವರೆಗೆ ಪದಸೂಚಿ (೧೯೩೪)
EC XIV - ಮೈಸೂರು ಜಿಲ್ಲೆಯ ಶಾಸನಗಳ ಅನುಬಂಧ (೧೯೪೩)
EC XV - ಹಾಸನ ಜಿಲ್ಲೆಯ ಶಾಸನಗಳ ಅನುಬಂಧ (೧೯೪೩)

ಸಂಪುಟಗಳು ಪ್ರಕಟಗೊಂಡವು. ಎಂ.ಎಚ್. ಕೃಷ್ಣರ ತರುವಾಯ ಡೈರೆಕ್ಟರ್‌ರಾಗಿ ಬಂದವರು ಶ್ರೀ ನೀಲಕಂಠಶಾಸ್ತ್ರಿಗಳು. ಇವರ ಕಾಲಾವಧಿಯಲ್ಲಿ EC XVI ತುಮಕೂರು ಜಿಲ್ಲೆಯ ಶಾಸನಗಳ ಅನುಬಂಧ (೧೯೫೬)ರಲ್ಲಿ ಪ್ರಕಟವಾಯಿತು. ಆಮೇಲೆ ಬಂದ ಶ್ರೀ ಶೇಷಾದ್ರಿಯವರಿಂದ EC VII & VIII (ಶಿವಮೊಗ್ಗ ಜಿಲ್ಲೆಯ ಶಾಸನಗಳ ಅನುಬಂಧ ೧೯೫೫) EC XVII (ಕೋಲಾರ ಜಿಲ್ಲೆಯ ಶಾಸನಗಳ ಅನುಬಂಧ–೧೯೬೫) ಪ್ರಕಟಗೊಂಡವು.

"Archaeological Survey of India" ಇಲಾಖೆಯವರು ದಕ್ಷಿಣ ಭಾರತದ ಶಾಸನಗಳನ್ನು "South Indian Inscriptions" ಹೆಸರಿನಿಂದ ೨೦ ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ. ಎಪಿಗ್ರಾಫಿಯಾ ಕರ್ನಾಟಿಕಾಗಳಲ್ಲಿ ಪ್ರಾದೇಶಿಕ ವರ್ಗೀಕರಣವಿದ್ದರೆ, ಕಾಲಕ್ರಮ ವರ್ಗೀಕರಣ ಇವುಗಳ ವೈಶಿಷ್ಟ್ಯ ದಕ್ಷಿಣ ಭಾರತದ ಎಲ್ಲ ಭಾಷೆಗಳ ಶಾಸನಗಳನ್ನೊಳಗೊಂಡ ಈ ಮಾಲೆಯ ಕೆಲವು ಸಂಪುಟಗಳಲ್ಲಿ ಒಂದಿಷ್ಟು ಕನ್ನಡ ಶಾಸನಗಳನ್ನು ಸೇರಿಸಿದ್ದಾರೆ. ಕೆಲವು ಸಂಪುಟಗಳು ಕೇವಲ ಕನ್ನಡಕ್ಕೆ ಮೀಸಲಾಗಿವೆ. ಅವು–

೧. SII IV (೧೯೨೩) ಎಚ್. ಕೃಷ್ಣಶಾಸ್ತ್ರಿ,

ಹೊಸಪೇಟ, ಚಂದ್ರಗಿರಿ, ತಾಡಪತ್ರಿ, ಗುಂಟೂರು, ತಾಲೂಕಿನ ೨೭ ಕನ್ನಡ ಶಾಸನಗಳಿವೆ.

೨. SII V (೧೯೨೬) ಎಚ್. ಕೃಷ್ಣಶಾಸ್ತ್ರಿ,

ಸವದತ್ತಿ ಮತ್ತು ಕಂಬತ್ತೂರ ತಾಲೂಕಿನ ೮ ಕನ್ನಡ ಶಾಸನಗಳಿವೆ.

೩. SII VI (೧೯೨೮) ಕೆ.ವ್ಹಿ. ಸುಬ್ರಹ್ಮಣ್ಯ ಅಯ್ಯರ್,

ಬಾಪಟ್ಲಾ, ಮಡಕಶಿರಾ, ಹರಪನಹಳ್ಳಿ ತಾಲೂಕಿನ ೧೭ ಕನ್ನಡ ಶಾಸನಗಳಿವೆ.

೪. SII VII (೧೯೩೩) ಕೆ.ವ್ಹಿ. ಸುಬ್ರಹ್ಮಣ್ಯ ಅಯ್ಯರ್,

ವಾಂಡಿವಾಶ, ಮಂಗಳೂರು ಕಾರ್ಕಳ, ಗೂಟ, ಉಡುಪಿ, ಧರ್ಮಪುರಿ, ಪೆನುಗೊಂಡ, ಹೈದರಾಬಾದ್, ಕುಡ್ಡಲೋರ ತಾಲೂಕುಗಳ, ೨೧೪ ಕನ್ನಡ ಶಾಸನಗಳಿವೆ.

೫. SII VIII (೧೯೩೭) ಕೆ.ವ್ಹಿ. ಸುಬ್ರಹ್ಮಣ್ಯ ಅಯ್ಯರ್,

ಗೂಟಿ ತಾಲೂಕಿನ ೧೪ ಕನ್ನಡ ಶಾಸನಗಳಿವೆ.

೬. SII IX-I (೧೯೩೯) ಆರ್.ಶಾಮಾಶಾಸ್ತ್ರಿ ಮತ್ತು ಎನ್. ಲಕ್ಷ್ಮೀನಾರಾಯಣರಾಯ,

SII XI-ii (೧೯೪೧) ಆರ್.ಶಾಮಾಶಾಸ್ತ್ರಿ

ಈ ಎರಡೂ ಬಳ್ಳಾರಿ ಜಿಲ್ಲೆಯ ಕನ್ನಡ ಶಾಸನಗಳನ್ನೊಳಗೊಂಡ ಸಂಪುಟಗಳು

7. SII XI-i (೧೯೪೦) ಪಂಚಮುಖಿ ಮತ್ತು ಲಕ್ಷ್ಮೀನಾರಾಯಣರಾಯ,

SII. XI-ii (೧೯೫೩) ಲಕ್ಷ್ಮೀನಾರಾಯಣರಾಯ

ಮುಂಬೈ ಕರ್ನಾಟಕ ಪ್ರದೇಶದ ಕನ್ನಡ ಶಾಸನಗಳನ್ನೊಳಗೊಂಡ ಈ ಎರಡೂ ಸಂಪುಟಗಳನ್ನು Bombay Karnataka Inscription Vol-I and II ಎಂದು ಕರೆದಿದ್ದಾರೆ.

8. SII XV (೧೯೬೪) ಪಿ.ಬಿ.ದೇಸಾಯಿ ಕೇವಲ ಕನ್ನಡ ಶಾಸನಗಳನ್ನೊಳಗೊಂಡ ಸಂಪುಟ

೯. SII XVII (೧೯೬೪) ಕೆ.ಜಿ. ಕೃಷ್ಣನ್,

ಹಡಗಲಿ ಬಳ್ಳಾರಿ, ಕುಡತಿನಿ, ಹರಪನಹಳ್ಳಿ, ಜಿಂಜಿ ತಾಲೂಕಿನ ೧೪ ಕನ್ನಡ ಶಾಸನಗಳು

10. SII XX (೧೯೬೫) ಜಿ.ಎಸ್. ಗಾಯಿ,

ಕೇವಲ ಕನ್ನಡ ಶಾಸನಗಳನ್ನೊಳಗೊಂಡ ಸಂಪುಟ. ಹೀಗೆ ಈವರೆಗೆ ಹೊರಬಂದ ಈ ಸಂಪುಟಗಳು ಉತ್ತರ ಕರ್ನಾಟಕದ ಇತಿಹಾಸ ರಚನೆಗೆ ಹೆಚ್ಚು ಉಪಯುಕ್ತವೆನಿಸಿವೆ. ೧೯೩೯

ರಂದು ಧಾರವಾಡದಲ್ಲಿ ಕನ್ನಡ ಸಂಶೋಧನ ಸಂಸ್ಥೆ (Kannada Research Institute) ಸ್ಥಾಪನೆಗೊಂಡಿತು. ಇದರ ಮೂಲಕ ಈವರೆಗೆ ಆರು ಸಂಪುಟಗಳು ಹೊರಬಂದಿವೆ. ಮೊದಲಿನ ನಾಲ್ಕು ಸಂಪುಟಗಳ ಸಂಪಾದಕರು, ಶ್ರೀ ಪಂಚಮುಖಿ, (ನಾಲ್ಕು ಸಂಪುಟಗಳಲ್ಲಿ ಅಚ್ಚಾದ ಶಾಸನಗಳು ೧೮೩ ಮಾತ್ರ) ಐದನೆಯ ಹಾಗೂ ಆರನೆಯ ಸಂಪುಟಗಳ ಸಂಪಾದಕರು ಡಾ.ಬಿ.ಆರ್. ಗೋಪಾಲ.

ಹೈದರಾಬಾದ ಪುರಾತತ್ವ ಇಲಾಖೆಯವರು ಆಗಾಗ ಕನ್ನಡ ಶಾಸನಗಳನ್ನು ಪ್ರಕಟಿಸುತ್ತಿದ್ದಾರೆ. ಇವು ಗಾತ್ರದಲ್ಲಿ ಸಣ್ಣ ಸಂಪುಟಗಳು, "ತೆಲಂಗಾಣ ಶಾಸನಮುಲು" ಹೆಸರಿನ ಎರಡು ಸಂಪುಟಗಳಲ್ಲಿ ಕನ್ನಡ ಶಾಸನಗಳಿವೆ. ವೈಯಕ್ತಿಕ ಸಂಪುಟಗಳಲ್ಲಿ ಪ್ರೊ. ಕುಂದಣಗಾರ "Inscriptions in Northern Karnataka and Kolhapur state" ಮತ್ತು ಪಿ.ಬಿ. ದೇಸಾಯಿ ಅವರ "ಶಾಸನ ಪರಿಚಯ" ಮತ್ತು ೫೩ ಶಾಸನಗಳನ್ನೊಳಗೊಂಡ "Jainism in South India some Laina and Epigraphs" ಮುಖ್ಯವಾದವು. ಇತ್ತೀಚೆಗೆ ಡಾ.ಶ್ರೀನಿವಾಸ ರಿತ್ತಿಯವರ "Inscription from Nanded District" ಪ್ರಕಟವಾಗಿದೆ. ಡಾ.ಶೆಟ್ಟರ್ ಅವರು ತಮ್ಮ "Sravanbelgol Monuments" ಪ್ರಬಂಧದ ಅನುಬಂಧದಲ್ಲಿ ಬೆಳ್ಗೊಳಕ್ಕೆ ಸಂಬಂಧಿಸಿದ ೩೬ ಹೊಸ ಶಾಸನಗಳನ್ನು ಶೋಧಿಸಿಕೊಟ್ಟಿದ್ದಾರೆ.

ಇದು ಕನ್ನಡ ಶಾಸನಗಳ ಪ್ರಕಟನ ಕಾರ್ಯ ನಡೆದುಬಂದ ದಾರಿ ಹಳೆಯ ಮೈಸೂರು ಪ್ರದೇಶದಲ್ಲಿ ಬಹುಮಟ್ಟಿಗೆ ತೃಪ್ತಿಕರವಾಗಿ ನಡೆದ ಈ ಶಾಸನ್ವೇಷಣಕಾರ್ಯ ಉತ್ತರ ಕರ್ನಾಟಕದಲ್ಲಿಯೂ ಇಂದು ಹಂಪಿ ವಿಶ್ವವಿದ್ಯಾಲಯದಿಂದ ೧೦ ಸಂಪುಟಗಳು ಹೊರಬಂದಿವೆ. ಉದಾ: ಆಂದ್ರಪ್ರದೇಶದ ಕನ್ನಡ ಶಾಸನಗಳು ತಮಿಳುನಾಡಿನ ಕನ್ನಡ ಶಾಸನಗಳು. ಬೀದರ್, ಗುಲಬರ್ಗಾ, ರಾಯಚೂರು, ಬಾಗಲಕೋಟ, ಬಿಜಾಪುರ ಹೀಗೆ ಹೊಸ ಸಂಪುಟಗಳು ಪ್ರಕಟಗೊಂಡಿವೆ. ಹಾಗೆಯೇ ಕರ್ನಾಟಕ ಇತಿಹಾಸ ಅಕಾಡೆಮಿಯಿಂದ ಹೊಸ ಶಾಸನಗಳು, ಇತಿಹಾಸ ದರ್ಶನ, ಪ್ರಕಟವಾಗುತ್ತಿವೆ. ಪ್ರಬುದ್ಧ ಕರ್ನಾಟಕ, ಮಾನವಿಕ ಕರ್ನಾಟಕ, ಸಾಧನೆ, ಕನ್ನಡ ನುಡಿ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಲೋಚನ, ಶಾಸನ ಅಧ್ಯಯನ ಎಫಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯಾ, ಕ್ವಾರ್ಟಲೀ ಜರ್ನಲ್ ಆಫ್ ಮಿಥಿಕ್ ಸೊಸೈಟಿ ಮುಂತಾದ ನಿಯತಕಾಲಿಕೆಗಳಲ್ಲಿಯೂ ಸಹ ಶಾಸನಗಳು ಸಂಪಾದಿತವಾಗಿ ಪ್ರಕಟವಾಗುತ್ತಿವೆ.

**ಅಡಿಟಿಪ್ಪಣಿಗಳು:**

೧. ಜಿ.ಎಸ್. ಭಟ್ಟ (ಸಂ): ಕನ್ನಡ ಶಾಸನ ಸಾಹಿತ್ಯ: ಚೇತನಾ ಬುಕ್ ಹೌಸ್, ೨೦೧೧, ಪು-೩-೪

೨. ಜಿ.ಎಸ್. ಭಟ್ಟ (ಸಂ): ಕನ್ನಡ ಶಾಸನ ಸಾಹಿತ್ಯ: ಚೇತನಾ ಬುಕ್ ಹೌಸ್, ೨೦೧೧, ಪು-೩

೩. ಎಸ್.ಎಸ್. ಭಗವತಿ: ಕನ್ನಡ ಶಾಸನಗಳ ಅಧ್ಯಯನ: ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೪, ಪುಟ-೦೧

೪. ಡಾ.ಕೆ.ರವೀಂದ್ರನಾಥ : ಕನ್ನಡ ದಾಖಲು ಸಾಹಿತ್ಯ, ಪ್ರಸಾರಾಂಗ, ಹಂಪಿ; ೨೦೦೦, ಪು-೩೧.

೫. ಅದೇ ಪುಟ-೩೨

೬. ಎಸ್.ಎಸ್. ಭಗವತಿ: ಕನ್ನಡ ಶಾಸನಗಳ ಅಧ್ಯಯನ: ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೪, ಪು-೪

೭. ಸಿ.ಪಿ. ಕೃಷ್ಣಕುಮಾರ: ಶಾಸನಶಾಸ್ತ್ರ ಪ್ರವೇಶ: ಚೇತನಾಬುಕ್ ಹೌಸ್, ಮೈಸೂರು, ೨೦೦೧, ಪು-೨೬

೮. ಆರ್.ಎಸ್. ಪಂಚಮುಖಿ: ಕರ್ನಾಟಕದ ಶಾಸನಗಳು: ಪ್ರಸಾರಾಂಗ, ಕ.ವಿ.ವಿ. ಧಾರವಾಡ, ೧೯೮೧, ಪು-೫

೯. ಸಿ.ಪಿ. ಕೃಷ್ಣಕುಮಾರ: ಶಾಸನಶಾಸ್ತ್ರ ಪ್ರವೇಶ: ಚೇತನಾಬುಕ್ ಹೌಸ್, ಮೈಸೂರು, ೨೦೦೧, ಪು-೧೬

೧೦. (ಸಂ.) ಜಿ.ಎಸ್.ಭಟ್ಟ: ಕನ್ನಡ ಶಾಸನ ಸಾಹಿತ್ಯ: ಚೇತನಾ ಬುಕ್ ಹೌಸ್, ಮೈಸೂರು, ೨೦೧೧, ಪು-೩

೧೧. (ಸಂ.) ಜಿ.ಎಸ್.ಭಟ್ಟ: ಕನ್ನಡ ಶಾಸನ ಸಾಹಿತ್ಯ: ಚೇತನಾ ಬುಕ್ ಹೌಸ್, ಮೈಸೂರು, ೨೦೧೧, ಪು-೩

೧೨. ಅದೇ ಪು-೬

೧೩. ಅದೇ ಪು-೨೨

೧೪. ಅದೇ ಪು-೨೩

೧೫. KI. Vol IV. No:೩೪ ಧಾರವಾಡ (ಜಿ) (ತಾ) ನೂಲಗೇರಿ (ಗ್ರಾ) ೧೧೧೯ AD ಪು–೨೩

೧೬. EC. Vol XI, No:೧೪೯ ದಾವಣಗೆರೆ (ಜಿ) (ತಾ) ಕೊಡಗನೂರು (ಗ್ರಾ) ೧೧೧೩ AD ಪು–೪೨

೧೭. EC. Vol V, ii, No:೧೨೭ ಶಿವಮೊಗ್ಗ (ಜಿ) ಅರಸಿಕೆರೆ (ತಾ) ತಳಲೂರು (ಗ್ರಾ) ೧೧೮೫ AD ಪು–೨೫

೧೮. (ಸಂ) ಜಿ.ಎಸ್.ಭಟ್ಟ: ಕನ್ನಡ ಶಾಸನ ಸಾಹಿತ್ಯ: ಚೇತನಾ ಬುಕ್ ಹೌಸ್, ಮೈಸೂರು, ೨೦೧೧, ಪು–೨೫

೧೯. ಅದೇ ಪುಟ–೩೨

೨೦. ಅದೇ ಪುಟ–೩೩

೨೧. ಎಸ್.ಎಂ. ಹಿರೇಮಠ: ಶಾಸನಾಧ್ಯಯನ: ವಿದ್ಯಾನಿಧಿ ಪ್ರಕಾಶನ, ಗದಗ, ೧೯೦೮, ಪು–೪

೨೨. ಎಂ.ಎಂ. ಕಲಬುರ್ಗಿ: ಶಾಸನ ವ್ಯಾಸಂಗ: ಸಂ–೧, ಕನ್ನಡ ಅಧ್ಯಯನ ಪೀಠ, ಕ.ವಿ.ವಿ. ಧಾರವಾಡ, ೧೯೭೪, ಪು–೧೩೧

# ಅಧ್ಯಾಯ–೨

## ವಿಜಯನಗರ ಪೂರ್ವದ ಶಾಸನಕವಿಗಳು

"ನಾಡಿನ ಇತಿಹಾಸ ರಚನೆಗೆ ಶಾಸನಗಳು ಆಧಾರ ಸ್ಥಂಭಗಳೆಂದು ಎಲ್ಲರಿಗೂ ತಿಳಿದ ಮಾತು. ಅವುಗಳನ್ನು ಕೂಲಂಕಷವಾಗಿ ಪರೀಕ್ಷಿಸಿದಾಗ ಕೇವಲ ರಾಜಕೀಯ ಇತಿಹಾಸವಷ್ಟೇ ಅಲ್ಲ. ಧರ್ಮ, ಶಿಕ್ಷಣ, ಭಾಷೆ, ಸಾಹಿತ್ಯ, ಸಮಾಜ ನೀತಿ, ಇವುಗಳ ದೃಷ್ಟಿಯಿಂದಲೂ ಅವು ಮಹತ್ವದವುಗಳಾಗಿರುವುವೆಂಬುದು ಕಂಡುಬರದಿರದು".[೧] ಶಾಸನಗಳನ್ನು ಸಾಮಾನ್ಯವಾಗಿ ಜನರಿಗೆ ತಿಳಿಯುವ ಭಾಷೆಯಲ್ಲಿ ಬರೆಯಲಾಗುತ್ತಿತ್ತು. ಅವುಗಳನ್ನು ಬರೆಯುವ ಮೂಲ ಉದ್ದೇಶ. ಜನರಿಗೆ ನಡೆದ ಸಂಗತಿಯನ್ನು ತಿಳಿಸಿಕೊಡುವುದಾಗಿತ್ತು. ರಾಜನ ಆಜ್ಞೆ, ನೀತಿ, ನಿಯಮಗಳನ್ನು ಘೋಷಿಸುವುದಕ್ಕೂ ಕೂಡಾ ಬಳಕೆಯಾಗುತ್ತಿದ್ದವು.

ಶಾಸನಗಳಲ್ಲಿ "ಪಾಂಡಿತ್ಯಕ್ಕೆ ಹೆಚ್ಚು ಪ್ರಾಶಸ್ತ್ಯ ದೊರೆತಂತೆ ಕವಿತ್ವವನ್ನು ಮತ್ತು ಕ್ಲಿಷ್ಟ ಗದ್ಯವನ್ನು ಶಾಸನಗಳಲ್ಲಿ ಬಳಸಹತ್ತಿದರು. ಆಗ ಶಾಸನಗಳು ಕಾವ್ಯ ಅಥವಾ ಚಂಪೂಕಾವ್ಯದ ರೂಪತಾಳಿದವು".[೨] ಹೀಗೆ "ಕನ್ನಡದಲ್ಲಿ ಶಾಸನಸಾಹಿತ್ಯ ಗ್ರಾಂಥಿಕ ಸಾಹಿತ್ಯಗಳು ಹಲವು ಶತಮಾನಗಳ ಕಾಲ ಜೊತೆಜೊತೆಯಾಗಿ ಬೆಳೆದುಕೊಂಡು ಬಂದುದರಿಂದ ಭಾಷೆಯ ಬೆಳವಣಿಗೆಗೆ ಹಾಗೂ ಸಂಸ್ಕೃತಿಯ ವಿಕಾಸಕ್ಕೆ ದ್ವಿಮುಖವಾಗಿ ಒತ್ತಾಸೆ ಸಿಕ್ಕಿತು. ಕನ್ನಡ ನುಡಿಯಲ್ಲಿ ಗ್ರಾಂಥಿಕ ಸಾಹಿತ್ಯ ಕಣ್ಣುತೆರೆದ ಕಾಲಕ್ಕೆ, ಇದು ಗರಿಗೊಂಡು ಹಾರಲು ಕಲಿತ ಕಾಲಕ್ಕೆ, ಅದಕ್ಕೆ ನೇರವಾದ ಕೆಲವು ಪ್ರಚೋದಕ ಶಕ್ತಿಗಳಲ್ಲಿ ಶಾಸನ ಸಾಹಿತ್ಯವೂ ಒಂದು ಎಂದು ತೋರುತ್ತದೆ. ಅದು ಯಾವುದಾದರೂ ಒಂದು ಬಗೆಯಲ್ಲಿ ತನ್ನ ಪಾಲಿನ ಸತ್ವವನ್ನು ಗ್ರಾಂಥಿಕ ಸಾಹಿತ್ಯದ ಪುಷ್ಠಿಗಾಗಿ ಬೆಳೆಸಿರುವುದು ಸಾಧ್ಯ. ಆರಂಭದಲ್ಲಿ ಅವ್ಯವಸ್ಥಿತ ರೂಕ್ಷ ಎನ್ನಬಹುದಾದ ಭಾಷಾ ಶೈಲಿಗಳಿದ್ದ ಶಾಸನಸಾಹಿತ್ಯ; ತನ್ನ ಒಡನಾಡಿಯಾಗಿ ಬೆಳೆದ ಗ್ರಾಂಥಿಕ ಸಾಹಿತ್ಯದೊಡನೆ ಕೂಡಿದಾಗ ಪರಸ್ಪರವಾಗಿ ಭಾಷಾಸಾಹಿತ್ಯದ ಪ್ರಭಾವಗಳು ಉಂಟಾಗಿರಬೇಕು."[೩]

ಸಮಂತಭದ್ರ, ಕವಿಪರಮೇಷ್ಠಿ ಮತ್ತು ಪೂಜ್ಯಪಾದ ಈ ಮೂವರು ಕವಿಗಳನ್ನು ಪಂಪ,ಪೊನ್ನ, ಅಭಿನವ ಪಂಪ, ಅಗ್ಗಳ, ನಯಸೇನ ಮೊದಲಾದ ಕವಿಗಳು ಹೊಗಳಿದ್ದಾರೆ."[೪] ಸಮಂತಭದ್ರನ ಕಾಲವನ್ನು ಕ್ರಿ.ಶ. ೪೦೦ ಎಂದು ಆರ್. ನರಸಿಂಹಚಾರ್ ಹೇಳಿದ್ದಾರೆ........ ಕವಿ ಪರಮೇಷ್ಠಿಯ ಕಾಲವನ್ನು ಕ್ರಿ.ಶ. ೫೫೦ ಎಂದಿದ್ದಾರೆ. "ಸಂಸ್ಕೃತ ಶಾಸನಕವಿ ಕುಬ್ಜಕವಿಯ ಕಾಲ ಸುಮಾರು ೫ನೇ ಶತಮಾನದ ಉತ್ತರಾರ್ಧವೆಂದಿದ್ದಾರೆ."[೫]

“ಪೂಜ್ಯಪಾದನ ಕಾಲವನ್ನು ಕ್ರಿ.ಶ.೬೦೦ ಎಂದು ಕವಿಚರಿತೆಕಾರರು ನಿರ್ಧರಿಸಿದ್ದಾರೆ.”[೬] “ಶ್ಯಾಮಕುಂದಾಚಾರ್ಯನು, ತುಂಬಲೂರಾಚಾರ್ಯ ಅಥವಾ ಶ್ರೀವರ್ಧದೇವನ ಸಮಕಾಲೀನ ಅಥವಾ ಹಿಂದಿನವನೆಂದು ಹೇಳಿ ಅವನ ಕಾಲವನ್ನು ಕ್ರಿ.ಶ. ೬೫೦ ಎಂದು ನಿರ್ಧರಿಸಿದ್ದಾರೆ. ಕ್ರಿ.ಶ. ಏಳನೇ ಶತಮಾನಕ್ಕೆ ಮುಂಚೆ ಕನ್ನಡದಲ್ಲಿ ವಿಫುಲವಾದ ಸಾಹಿತ್ಯವಿತ್ತು ಎಂಬುದು ಇದರಿಂದ ವೇದ್ಯವಾಗುವುದು. ಕುಮುದೇಂದು (ಕ್ರಿ.ಶ.೮೦೦)ರ ಕಾಲದವನೆಂದೂ; ಅಸಗ ಕವಿರಾಜಮಾರ್ಗಕಾರನಿಗೆ ಸಮಕಾಲೀನ ಕವಿಯೆಂದೂ; ಈತನ ಕಾಲ ಕ್ರಿ.ಶ.೮೫೦ ಎಂದು ನಿರ್ಧರಿಸಿದ್ದಾರೆ.”[೭] ಈ ಎಲ್ಲ ಪೂರ್ವಕವಿಗಳ ಸಾಹಿತ್ಯ ಕೃಷಿಯು ಶಾಸನ ಸಾಹಿತ್ಯದ ಮೇಲೆ ಪ್ರಭಾವ ಉಂಟಾಗಿರಬೇಕು.

“ಕನ್ನಡ ಕವಿಗಳಾಗಿರುವ ರನ್ನ, ಜನ್ನ, ನಾಗಚಂದ್ರ, ಶಾಂತಿನಾಥ, ಮಧುರ ಮೊದಲಾದ ಕವಿಗಳು ಶಾಸನಗಳನ್ನು ರಚಿಸಿರುವುದಾಗಿ ಪಂಡಿತರು ಗುರುತಿಸಿದ್ದಾರೆ. ‘ಶೂದ್ರಕ ಮತ್ತು ಹರಿವಂಶಾಭ್ಯುದಯ’ ಕೃತಿಗಳ ರಚಯಿತ ಗುಣವರ್ಮನು ಪಂಪ ಪೂರ್ವಜರ ವರ್ಗಕ್ಕೆ ಸೇರಿದ ಕವಿ.”[೮] ಇವರೆಲ್ಲರೂ “ಶ್ರೇಷ್ಠರಾದ ಗ್ರಂಥ ಕರ್ತೃಗಳು ರಾಜಕೀಯ, ಸಾಂಸ್ಕೃತಿಕ, ಮೊದಲಾದ ಉದ್ದೇಶಗಳು ಹೇತುವಾಗಿ ಶಾಸನ ರಚನೆಗೆ, ಶಾಸನಕರ್ತೃಗಳು ಗ್ರಂಥರಚನೆಗೆ ತೊಡಗಿರಬಹುದು. ೮–೯ನೇ ಶತಮಾನಗಳಿಂದ ಮುಂದಿನ ಕಾಲಘಟ್ಟದಲ್ಲಿ ಹೆಚ್ಚು ಹೆಚ್ಚು ಪರಿಷ್ಕೃತವಾದ ಶಾಸನಗದ್ಯ ಮತ್ತು ಪದ್ಯಗಳು ರಚನೆಯಾಗತೊಡಗಿ, ಅವುಗಳ ಭಾಷಾ ಸಾಹಿತ್ಯ ಮೌಲ್ಯಗಳು ಹೆಚ್ಚುತ್ತ ಮುನ್ನಡೆದ ಹಾಗೆ, ಅವು ವಸ್ತು ರೀತಿಗಳಲ್ಲಿ, ಭಾಷಾ ಶೈಲಿಗಳಲ್ಲಿ, ಸಣ್ಣಪುಟ್ಟ ಕಾವ್ಯಗಳಂತೆಯೇ ರೂಪಗೊಂಡು, ಭಾಷೆ, ವ್ಯಾಕರಣ, ಛಂದಸ್ಸು, ಅಲಂಕಾರಗಳ ಲಾಕ್ಷಣಿಕ ಮರ್ಯಾದೆಯನ್ನು ತಾವೂ ಬೇಡಿದುವೆನ್ನಬಹುದು. ಹುಟ್ಟು ಬಂಡೆಯ ಮೇಲೆ, ಕಲ್ಲಿನ ಚಪ್ಪಡಿಗಳ ಮೇಲೆ, ಕಂಬಗಳ ಮೇಲೆ ತಾಮ್ರದ ರೇಕುಗಳಲ್ಲಿ ಕೆತ್ತಲು ಸಾಧ್ಯವಾದಷ್ಟು ಪ್ರಮಾಣಕ್ಕೆ ಅವು ಬೆಳೆದವು. ತಮ್ಮ ಸಂತತಿಯನ್ನು ಬೆಳೆಸಿದುವು.”[೯]

“ಕ್ರಿ.ಶ. ೫೦೦ ರರಿಂದಲೇ ಕನ್ನಡ ಶಾಸನ ಪದ್ಯಗಳು ದೊರೆತರೂ ಕ್ರಿ.ಶ.೮ನೇ ಶತಮಾನದವರೆಗಿನ ಯಾವ ಶಾಸನ ಪದ್ಯಗಳಲ್ಲಿಯೂ ಶಾಸನಕವಿಯ ಉಲ್ಲೇಖವಿಲ್ಲ. ಪಟ್ಟದಕಲ್ಲಿನ ದೇವಾಲಯದಲ್ಲಿರುವ ಶಾಸನದಿಂದ ‘ಅಚಲನ್’ ಎಂಬ ಕವಿಯು ಈ ಶಾಸನವನ್ನು ರಚಿಸಿದನೆಂದು ತಿಳಿದುಬರುತ್ತದೆ. ಈ ಶಾಸನದ ಕಾಲ ಕ್ರಿ.ಶ. ೮ನೇ ಶತಮಾನವೆಂದು ವಿದ್ವಾಂಸರು ಗುರುತಿಸಿದ್ದಾರೆ. ೮ನೇ ಶತಮಾನದ ‘ಅಚಲನ್’ ಕವಿಯೇ ಕನ್ನಡ ಸಾಹಿತ್ಯ ಚರಿತ್ರೆಯ ಮತ್ತು ಶಾಸನಸಾಹಿತ್ಯ ಚರಿತ್ರೆಯ ಮೊಟ್ಟಮೊದಲ ಉಪಲಬ್ಧ ಕನ್ನಡ ಕವಿಯೆಂದು

ಕರೆಯಬಹುದು."[೧೦] ಕಾವ್ಯಾಂಶರಹಿತವಾದ ಶಾಸನಗಳನ್ನು ವರ್ಜಿಸಿ ಉಳಿದುವನ್ನೆಲ್ಲಾ ನೋಡಿದಾಗ ಶಾಸನಕವಿಗಳದೇ ಒಂದು ವಿಶಿಷ್ಟ ವರ್ಗವೆಂಬುದು ಕಂಡುಬರುವುದು. ಇವರೆಲ್ಲ ಯಾರೂ ಪ್ರಥಮ ವರ್ಗದ ಕವಿಗಳಾಗಿ ಕಂಡುಬರುವುದಿಲ್ಲ. (ರನ್ನ, ಜನ್ನ, ನಾಗಚಂದ್ರ, ಶಾಂತಿನಾಥ, ಮಧುರ ಹೊರತುಪಡಿಸಿ) ಅದಕ್ಕೆ ಕಾರಣವೂ ಇಲ್ಲದಿಲ್ಲ. ಏಕೆಂದರೆ ಶಾಸನಗಳ ಉದ್ದೇಶ ಮಹಾಕಾವ್ಯಗಳನ್ನು ಬರೆಯುವುದಲ್ಲ; ದಾಖಲೆಗಳನ್ನು ಬರೆಯುವುದು. ಇಂಥ ಅವಕಾಶಗಳಲ್ಲಿ ಶಾಸನಕವಿಗಳು ತಮ್ಮ ಪ್ರತಿಭೆ ಪಾಂಡಿತ್ಯವನ್ನು ಮೆರೆದಿದ್ದಾರೆ. ಕಾವ್ಯಕವಿಗಳಂತೆ ಶಾಸನಕವಿಗಳು ಬರೆದಂಥ ಇತರ ಸಾಹಿತ್ಯ ಕೃತಿಗಳೂ ದೊರೆತರೆ, ಶಾಸನ ಕವಿಗಳ ಬಗ್ಗೆ ಇದ್ದಂಥ ನಮ್ಮ ದೃಷ್ಟಿಕೋನ ಬದಲಾಗುವುದು. ದೊರೆಯಬೇಕಷ್ಟೆ. "ಆದ್ದರಿಂದಲೇ ಶಾಸನಕವಿಗಳಲ್ಲಿ ನಮಗೆ ದ್ವಿತೀಯ ವರ್ಗದ ಸಾಮಾನ್ಯ ಶಕ್ತಿಯ ಕವಿಗಳು ಕಂಡುಬರುತ್ತಾರೆ. ಅದೇ ರೀತಿ 'ಅನುಕರಣ ಪ್ರವೃತ್ತಿ ಅಧಿಕವಾಗಿರುತ್ತದೆ' ಎಂಬ ಮಾತನ್ನು ಗಮನಿಸಿದರೆ ಕ್ರಿ.ಶ. ೭೦೦ರಲ್ಲಿ ರಚಿತವಾಗಿರುವ ನಂದಿಸೇನ ಮುನಿಯ ನಿಸಿದಿ ಶಾಸನ ಪದ್ಯವು ಕ್ರಿ.ಶ. ೯೪೧ರಲ್ಲಿ ಕಾಣಿಸಿಕೊಳ್ಳುವ ಪಂಪನ ಆದಿಪುರಾಣದ **'ಅಮರೇಂದ್ರೋನ್ನತಿ ಖೇಚರೇಂದ್ರ ವಿಭವಂ'** ಎಂಬ ಪದ್ಯವನ್ನು ನೆನಪಿಗೆ ತರಿಸುವುದರಿಂದ ಪಂಪ ಖಂಡಿತ ಈ ಶಾಸನ ಪದ್ಯದಿಂದ ಪ್ರೇರಣೆ ಪಡೆದು ಆದಿಪುರಾಣದ ಕೆಲವು ಪದ್ಯಗಳನ್ನು ರಚಿಸಿದನೆಂದು ಹೇಳಬಹುದು. ಈ ವ್ಯತ್ಯಾಸದಿಂದ ಶಾಸನಕವಿಗಳಿಗೂ ಸಾಹಿತ್ಯದ ಕವಿಗಳಿಗೂ ವ್ಯತ್ಯಾಸ ಕಂಡುಬರುವುದಿಲ್ಲ...... ಶಾಸನಕವಿಗಳಲ್ಲಿ ಕೆಲವರು ದ್ವಿಭಾಷಾ, ತ್ರಿಭಾಷಾ, ಬಹುಭಾಷಾ ಕವಿಗಳಾಗಿರುವುದು ಕಂಡುಬರುತ್ತದೆ."[೧೧] ಕ್ರಿ.ಶ. ೮ನೇ ಶತಮಾನದಿಂದ ಕ್ರಿ.ಶ.೧೩೩೬ ನಡುವಿನ ಕಾಲಾವಧಿಯಲ್ಲಿ ಕಂಡುಬರುವ ಅಂದರೆ ವಿಜಯನಗರ ಪೂರ್ವದ ಶಾಸನ ಕವಿಗಳನ್ನು ಕುರಿತು ಅಧ್ಯಯನಕ್ಕೊಳಪಡಿಸಲಾಗಿದೆ. ಪ್ರತಿ ಶತಮಾನದಲ್ಲಿ ಶಾಸನ ಕವಿಗಳ ಪ್ರತಿಭೆ ಪಾಂಡಿತ್ಯ ವಿಭಿನ್ನ ಸ್ವರೂಪದಲ್ಲಿ ವ್ಯಕ್ತಗೊಂಡ ಬಗ್ಗೆ ಪ್ರತಿ ಶತಮಾನದ ಶಾಸನಕವಿಗಳ ಅಧ್ಯಾಯದಲ್ಲಿ ವಿವರಿಸಲಾಗಿದೆ. "ಮೊದಲು ವಾಮನನಂತೆ ಕಾಣಿಸಿಕೊಂಡ ಶಾಸನ ಸಾಹಿತ್ಯವು ತ್ರಿವಿಕ್ರಮವಾಗಿ ಬೆಳೆದು ತನ್ನೆಲ್ಲ ಪ್ರಕಾರಗಳಿಂದಲೂ ಅತ್ಯುನ್ನತ ಮಟ್ಟವನ್ನು ಮುಟ್ಟುತ್ತದೆ"[೧೨] ಇವರೆಲ್ಲ ಜೈನ, ಶೈವ, ವೈಷ್ಣವ ಕವಿಗಳಾಗಿದ್ದು; ಗಂಗ, ಚಾಳುಕ್ಯ, ಹೊಯ್ಸಳ, ಕಳಚೂರಿ ಮುಂತಾದ ರಾಜಮನೆತನಗಳು ಹಾಗೂ ಸಾಮಂತರು ಮಾಂಡಳಿಕರು ಮಹಾಪ್ರಧಾನಿಗಳು, ಹೀಗೆ ಹಲವಾರು ಜನರ ಆಳ್ವಿಕೆಯ ಕಾಲಾವಧಿಯಲ್ಲಿ ಶಾಸನ ಕಾವ್ಯಗಳನ್ನು ಶಾಸನಕವಿಗಳು ರಚನೆ ಮಾಡಿರುವುದುಂಟು. ಶಾಸನಗಳಲ್ಲಿಯೇ ಕಾವ್ಯಾಂಶಗಳನ್ನು ಹಿಡಿದಿಡುವ ಪ್ರಯತ್ನ ನಮ್ಮದಾಗಿದೆ. ಹಾಗೂ ವಿಶಿಷ್ಟ ಬಗೆಯ ಗದ್ಯವನ್ನು ಗುರುತಿಸುವುದಾಗಿದೆ.

## ೨.೧: ಕ್ರಿ.ಶ. ೮ನೇ ಶತಮಾನದ ಶಾಸನಕವಿಗಳು

### ಅಚಲನ್ (ಕ್ರಿ.ಶ. ೮ನೇ ಶತಮಾನ)

“೮ನೇ ಶತಮಾನದಲ್ಲಿ ಶಾಸನ ಕವಿಯ ಉಲ್ಲೇಖ ದೊರೆಯುತ್ತದೆ. ಅವನೇ ಅಚಲನ್ ಈತ ಕನ್ನಡ ಶಾಸನ ಸಾಹಿತ್ಯ ಚರಿತ್ರೆಯ ಮೊಟ್ಟಮೊದಲ ಉಪಲಬ್ದ ಕವಿ ಈತನು ತನ್ನ ವಿದ್ವತ್ತನ್ನು ಒಂದೇ ಒಂದು ಉತ್ಪಲಮಾಲೆಯಲ್ಲಿ ವ್ಯಕ್ತಪಡಿಸಿದ್ದಾನೆ.[೧೩]

ಬಾಗಲಕೋಟೆ ಜಿಲ್ಲೆಯ, ಬಾದಾಮಿ ತಾಲೂಕಿನ, ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ಪೂರ್ವದ ಅರ್ಧಮಂಟಪದಲ್ಲಿರುವ ಪದ್ಮನಿಧಿ ವಿಗ್ರಹದ ಸಮೀಪದಲ್ಲಿರುವ ಶಾಸನವನ್ನು[೧೪] ದೇವಯ್ಯ ಎಂಬುವನ ಮಗ ‘ಅಚಲನ್’ ರಚಿಸಿದನೆಂದು ತಿಳಿದುಬರುತ್ತದೆ. ಅಚಲನ್ ದ್ವಿಭಾಷಾ ವಿಶಾರದನಾಗಿದ್ದು ನಮಗೆ ಉಪಲಬ್ಧ ಶಾಸನ ಕವಿಗಳಲ್ಲಿ ಮೊದಲಿಗ. ಮೇವುಂಡಿಯವರು ತಮ್ಮ ಊಹೆಯಲ್ಲಿ ಈತನನ್ನು ಕುರಿತು ‘ನಟಸೇವ್ಯ’ ಮತ್ತು ‘ಅಚಲನ್’ ಅಂಕಿತಗಳು ಒಬ್ಬನಿಗೆ ಸೇರಿದುವು ಎಂದು ಊಹಿಸಿದ್ದಾರೆ.[೧೫] ಆದರೆ ಇಬ್ಬರೂ ಬೇರೆ ಎಂಬುದು ಶಾಸನದಲ್ಲಿ ಸ್ಪಷ್ಟವಾಗಿದೆ. “ಕಲಬುರ್ಗಿಯವರು ಅಚಲನ್ ಕನ್ನಡದ ಕವಿಯಾಗಿದ್ದು ಭಾವದೀಪ್ತಿ ಭಾಷಾಶುದ್ಧಿಗಳಲ್ಲಿ ವಿಶೇಷಸಿದ್ದಿಯನ್ನು ಸಾಧಿಸಿದ್ದಾನೆ. ಈ ಶಾಸನವು ಪಂಪ ಪೂರ್ವಯುಗದ ವಿಶಿಷ್ಟ ಶಾಸನ ಎಂದಿದ್ದಾರೆ.”[೧೬]

ಈ ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ. ಮಧುರಚೆನ್ನರು ಈ ಶಾಸನದ ಕಾಲವನ್ನು ಕ್ರಿ.ಶ. ೮ನೇ ಶತಮಾನವೆಂದು ಊಹಿಸಿದ್ದಾರೆ.[೧೭] ಮೇವುಂಡಿ ಮಲ್ಲಾರಿಯರು. ಈ ಶಾಸನಕ್ಕೆ ಕಾಲೋಲ್ಲೇಖವಿಲ್ಲದಿದ್ದರೂ ವೀರೂಪಾಕ್ಷದೇವಾಲಯದ ನಿರ್ಮಾಣ ಕಾಲದಿಂದ, ಅಚಲನ್ ಕ್ರಿ.ಶ. ಸುಮಾರು ೭೪೪ರೊಳಗೆ ಈ ಪದ್ಯವನ್ನು ರಚಿಸಿರಬಹುದಾಗಿದೆ. ಕ್ರಿ.ಶ. ಸುಮಾರು ೭೩೩–೭೪೪ರ ಅವಧಿಯಲ್ಲಿ ಆಳಿದ ಬಾದಾಮಿ ಚಾಲುಕ್ಯ ವಂಶದ ಇಮ್ಮಡಿ ವಿಕ್ರಮಾದಿತ್ಯನು ಕಂಚಿಯನ್ನು ಮೂರು ಬಾರಿ ಗೆದ್ದ ಸ್ಮರಣೆಗಾಗಿ, ಆತನ ಮಡದಿ ವಿರುಪಾಕ್ಷದೇವಾಲಯ ಕಟ್ಟಿಸಿದಳೆಂದು, ಈ ಗುಡಿಯಲ್ಲಿರುವ ಶಾಸನ ಹೇಳುತ್ತದೆ. ಆ ಕಾರಣದಿಂದ ಆಚಲನ್ ಕವಿ ಈ ಕಾಲದವನಾಗಿರಬೇಕು[೧೮] ಎಂದಿದ್ದಾರೆ. ಆದರೆ ಕ್ರಿ.ಶ.೭೩೩–೭೪೪ರಲ್ಲಿ ದೇವಾಲಯ ನಿರ್ಮಾಣವಾದ ಮಾತ್ರಕ್ಕೆ ಕವಿ ಈ ಕಾಲದವನೆಂದು ಹೇಳಲಾಗದು ಎಂದು ‘ವಿ.ಜಯರಾಮ್’[೧೯] ಅಭಿಪ್ರಾಯ ಪಡುತ್ತಾರೆ. ಅವರ ವಾದ ಸರಿಯಾಗಿದೆ. ಲಿಪಿ ದೃಷ್ಟಿಯಿಂದ ಈ ಶಾಸನ ಮಧುರ ಚೆನ್ನರು ಗುರ್ತಿಸಿರುವ ಕ್ರಿ.ಶ. ೮ನೇ ಶತಮಾನದ್ದೇ ಸರಿಯಾದುದು.

ಈ ಶಾಸನದಲ್ಲಿ ನಟಸೇವ್ಯನನ್ನು ಬಣ್ಣಿಸಿರುವ ಪದ್ಯ ಹೀಗಿದೆ. –

**ಖ್ಯಾತ ಮಹಾಪ್ರಭಾವ ಭರತಾಗಮಯುಕ್ತಿ ಬಹುಪ್ರಕಾರದಾ**
**ಮಾತಿನೊಳೆಲ್ಲಮೇನೋ ನಟಸೇವ್ಯನ ಮುನ್ತೆ ಯಥೋಕ್ತಮಾರ್ಗದಿ**
**ನ್ದೀ ತೆಟ್ಟುದಿಮ್ಬಿದಗ್ರತಲ ಸಞ್ಚರಮೆಮ್ಬುದಿದೆನ್ದು ಪೇಱಿಕ್ಕೋಡಿ**
**ನ್ನಾತನೆ ನರ್ತ್ತಕಂ ನಟರೊಳಗ್ಗಳಮೀ ಭುವನಾನ್ತರಾಳದೊಳ್ ॥**
**– ದೇವಯ್ಯಗಳಾ ಮಗ ಅಚಲನ್**

ಬಹುಭಾಷಾ ವಿಶಾರದನಾದ ನಟಸೇವ್ಯನನ್ನು ಕುರಿತು ಸಂಸ್ಕೃತ ಪದ್ಯವೊಂದು ಈ ರೀತಿಯಾಗಿದೆ–

**ಭರತನುತವಚನ ರಚನಾ**
**ವಿರಚಿತನಟಸೇವ್ಯ ಸಿಂಘನಾದೇನ**
**ಪರನಟ ಮದಾಂಧ ಹಸ್ತಿ ಃ ।**
**ಪರಿಹೀನ ಮದೋ ಭವತ್ಯೇವ ।**
**ನಟಸೇವ್ಯ ಭರತಮತಯುತ**
**ಪಟುತರ ವಚನಾಶನಿ ಪ್ರಪಾತೇನ**
**ಕುಟಿಲೋನ್ನತ ನಟಶೈಲ**
**ಸ್ಫುಟಿತಾನತ ಮಸ್ತಕಃ ಪತತಿ ॥**
**ಅಚಲನ್**

**ಧರಂ (ಕ್ರಿ.ಶ. ೮೦೦):**

ಮೈಸೂರು ಜಿಲ್ಲೆಯ, ಚಾಮರಾಜನಗರ ತಾಲೂಕಿನ, ಅಂಚವಾಡಿಯ ಶಾಸನವನ್ನು ಸಂಪಾದಕರು ಲಿಪಿಯನ್ನು ಆಧರಿಸಿ ೮ ಅಥವಾ ೯ನೇ ಶತಮಾನದ್ದೆಂದು ಗುರುತಿಸಿದ್ದಾರೆ[೨೦] ಈ ಶಾಸನವು ಗಂಗರ ಕಾಲಕ್ಕೆ ಸೇರಿದುದಾಗಿದೆ. 'ನೀತಿಮಾರ್ಗ ಪೆರ್ಮಾನಡಿ' ಆಡಳಿತಾವಧಿಯ ಮೊದಲ ವರ್ಷದಲ್ಲಿ 'ಮಳೆಯ ಪುಣಸುಗ' ಮಡಿದ ವಿವರ ನೀಡಿದೆ. ಇನ್ನು ಶಾಸನದ ಕೊನೆಗೆ 'ಇದ ಬರೆದಂ ಶವಳಿಸೆಟ್ಟಿಯ ಮಗ ಧರಂ' ಎಂದಿದೆ.

**"ಸ್ವಸ್ತಿ ಶ್ರೀ ಕೊಂಗುಣಿವರ್ಮ ಧರ್ಮ್ಮ**
**ಮಹಾರಾಜಾಧಿರಾಜ ಕೊವಳಾಲಪುರವರೇಶ್ವರ**
**ನನ್ದಗಿರಿನಾಥಂ ಶ್ರೀಮತ್ ನೀತಿಮಾರ್ಗ್ಗ**
**ಪೆರ್ಮ್ಮನಡಿಗಳ ಪಟ್ಟಂಗಟ್ಟಿದ**
**ಪ್ರಥಮವರಿಷ ಆ ಮಾಚವಾಡಿಯ ಪೆ**
**ರ್ಮ್ಮಗಾವುಂಡ್ಡನ ಲ ಕೊಳ ಆದಿತ್ತ ನ**
**ಪುಣಸುಗ ಸತ್ತಂ ಇದ**
**ಬರೆದಂ ಗವಟಿಸೆಟ್ಟಿಯ**
**ಮಗ ಧರಂ**

ಎಂದು ಶಾಸನ ಕವಿಯನ್ನು ಹೆಸರಿಸಿದೆ.

**ಬಲದೇವ (ಕ್ರಿ.ಶ. ೮೦೦)**

ಬಾಗಲಕೋಟೆ ಜಿಲ್ಲೆಯ, ಹುನಗುಂದ ತಾಲೂಕಿನ, ಐಹೊಳೆ ಗ್ರಾಮದ ಶಾಸನವೊಂದರಲ್ಲಿ[೨೧] ಬಲದೇವನ ಲಿಖಿತಂ ಎಂದಿದೆ. ಈ ಶಾಸನವು ಆರ್ಯಪುರದ ಚಾತುರ್ವಿದ್ಯ ಸಮುದಾಯದ ಆಯ್ಯೂರ್ವರು ತಾವು ಕ್ರಯಕ್ಕೆ ಪಡೆದ ಭೂಮಿಯನ್ನು ಸಾಗುವಳಿಗೆ ಸಂಬಂಧಿಸಿದಂತೆ ಕೆಲವು ನಿಬಂಧನೆಗಳನ್ನು ವಿಧಿಸಿದಂತೆ ತಿಳಿಯಬಹುದು. ಪಾರ್ವನಿಗೆ (ಕೇಣಿ) ಗೇಣಿ ಇಲ್ಲ ಎಂಬುದೂ ಒಂದು ನಿಬಂಧನೆ.

ಇದಲ್ಲದೆ ಊರಿನಲ್ಲಿ ಯಾರಾದರೂ ಹೊಡೆದರೆ ಇರಿದರೆ ಇಂತಿಷ್ಟು ದಂಡ ವಿಧಿಸಬೇಕೆಂದು ಕಟ್ಟಳೆಯನ್ನು ಹೇಳಲಾಗಿದೆ. ಈ ದಂಡ ದೋಷಗಳನ್ನು ತಳಾರನು ಕೊಳ್ಳಬೇಕೆಂದು ಹೇಳಿದೆ.

**"ಇ ಸಮಯನ್ನಾಕದೋಜ್ಗೆ**
**ಅಶ್ವಮೇಧದ ಫಲಮಕ್ಕು ಈ**
**ಸಮಯಮನಟಿದೊಮ್ಬಾರಣಾಶಿಯೊಳ್ಸಾಸಿರ್ವ್ವ**
**ಪ್ರಾರ್ವರು ಸಾಸಿರ ಕವಿಲೆಯುಮನ್ನೊಕ್ಕನ್ದ ಲೋ**
**ಕಕ್ಕೆ ಸನ್ದೋನಕ್ಕುಂ"**

ಎಂದು 'ಬಲದೇವನ ಲಿಖಿತಂ' ಎಂದಿದೆ. ಇದೇ ಕವಿಯ ಹಾಸನ ಜಿಲ್ಲೆಯ ಹೊಳೆನರಸಿಪುರ ತಾಲೂಕಿನ ಅಂಕನಾಥಪುರದ ಶಾಸನವೊಂದರಲ್ಲಿ[೨೨] ಸುಬ್ರಹ್ಮಣ್ಯ ದೇವಸ್ಥಾನದ ಮಧ್ಯದ ತೊಲೆಯ ಮೇಲೆ ಒಂದು ಪದ್ಯ ಹೀಗಿದೆ.

**ತೊಱದುಱೆ ಮೋಹಪಾಶಮನಸುಂಗೊಳೆಯೊತ್ತಿದರುತ್ತಮಾಧಮಿ**
**ನ್ನುಱುಗುಱೆ ಬಾಱಲೀಯದಿದು ನಿಕ್ಕುವಮೆಂಬುದನೊಪ್ಪೆ ನಂಬಿತಾಂ**
**ನೆಱೆದ ಕದಂಬನಗ್ಗಳದ ಬಾಸಬೆಗಾದಮೆ ಪುತ್ರನುತ್ತಮ**
**ನ್ನೆಱೆದಿಕೆ ನೋಂತು ಮೂರು ದಿನಮಂಸುರನಾಗಿದನಿಂತು ರಾಚಯಂ ॥**

**ಬಲದೇವ ಬರೆದಂ ಎಂದಿದೆ.**

**ಕುಂದಾಚಾರ್ಯ (ಕ್ರಿ.ಶ. ೮೦೧):**

ಮೈಸೂರು ಜಿಲ್ಲೆಯ, ಹೆಗ್ಗಡೆದೇವನ ಕೋಟೆಯ ಸಗರೂರಿನ[೨೩] ಶಾಸನವು ಗಂಗ ದೊರೆ ಶ್ರೀಪುರುಷನ ಆಳ್ವಿಕೆಯ ಕಾಲಾವಧಿಯಲ್ಲಿ ಪೃಥ್ವಿರಾಜ್ಯಂಗೆಯ್ವಾಗ ಕೊಂಗಣಿ ಮಹಾರಾಜನು ನೀಡಿದ ಕೊಡುಗೆಯನ್ನು ವಿವರಿಸಿದೆ. ಬ್ರಾಹ್ಮಣರಿಗೆ ದನ್ನಗವಾಡಿಯನ್ನು ಬ್ರಹ್ಮಾದೇಯ ಕೊಟ್ಟ ಬಗ್ಗೆ ಹೀಗೆ ಹೇಳಿದೆ.

> **“ಸ್ವಸ್ತಿ ಕೊಙ್ಗಣಿ ವರ್ಮ್ಮ‍ಧರ್ಮ ಮಹಾರಾಜಾಧಿರಾಜ ಪರಮೇ**
> **ಶ್ವರ ಶ್ರೀಮತ್ ಶ್ರೀಪುರುಷ ಮಹಾರಾಜರ್ ಪೃಥುವಿರಾಜ್ಯಂಗೆ**
> **ಯೆ ಕೆಸುಗೋಳಮೊಡೆಯ ಬಿಣಾಮ್ಮಜ್ಗೆ ಧಣ್ಣಗವಾಡಿಯಂ**
> **ಬ್ರಹ್ಮಾದೇಯಂಗೊಟ್ಟಮ್ ಶ್ರೀಪುರುಷಮಹಾರಾಜಮ್ ಭಟಾರರ**
> **ಶ್ರೀನಕ್ಷತ್ರದೊಳ್ಪನ್ನಿರ್ವ ಪಾವನರುಣ್ಪೋರ್ ತಿಂಗಳ್ಗೆ ಏಕಭೋಗಂ”** ಎಂದಿದೆ.

**ಶಿವಮಾರದೇವ (ಕ್ರಿ.ಶ. ೮೨೫)**

ಶಿವಮೊಗ್ಗ ಜಿಲ್ಲೆಯ, ನಗರ ತಾಲೂಕಿನ, ಹುಂಚ ಗ್ರಾಮದ ಶಾಸನವೊಂದು[೨೪] ಪೆರ್ಮಾನಡಿ ಶ್ರಿಪುರುಷನೆಂಬಾತನ ಮಗನಾದ ಶಿವಮಾರದೇವನು ಗಂಗರಾಜ ವಂಶದ ದೊರೆಯ ಬಗ್ಗೆ ಹೇಳುತ್ತದೆ. ಈತ ‘ಗಜಶಾಸ್ತ್ರ’ ಪ್ರವೀಣನಾಗಿದ್ದು ‘ಗಜಾಷ್ಟಕ’ವೆಂಬ ಶಾಸ್ತ್ರಕೃತಿ ರಚನೆ ಮಾಡಿದ್ದನು. ಇದು ‘ಶಿವಮಾರಮತ’ವೆಂದು ‘ಒನಕೆವಾಡಾಗಿ’ ಬಹಳ ಪ್ರಸಿದ್ಧವಾಗಿತ್ತು. ಕ್ರಿ.ಶ. ೧೦೭೭ರ ಒಂದು ಶಾಸನದಿಂದ ತಿಳಿದು ಬರುವುದು. ಶಿವಮಾರನಿಗಿಂತ ಹಿಂದೆ ಧರ್ಮಕಾರ್ಯವೆಸಗಿದ ಚಟ್ಟಲೆಯವರೆಗೆ ಅವಿಚ್ಛಿನ್ನ ವಂಶಾವಳಿಯನ್ನು ಈ ಶಾಸನವೊದಗಿಸುತ್ತದೆ. ಮೇವುಂಡಿ ಮಲ್ಲಾರಿಯವರು ಶಿವಮಾರನ ಕಾಲಾವಧಿಯು ಕ್ರಿ.ಶ.೮೨೫ ಇರಬಹುದೆಂದು ಊಹಿಸಿದ್ದಾರೆ[೨೫] ಈ ಶಾಸನ ಕವಿಯ ವಿಷಯವಾಗಿ ಹೀಗೆ ಹೇಳಿದೆ. ಅಂತು ವೀರಮಾರ್ತಂಡನೆನಿಸಿದಾತನ ಮಗಂ ಶಿವಮಾರದೇವಂ ಸೈಗೊಟ್ಟನೆಂಬೆರಡನೆಯ ಪೆಸರಂ ತಾಳ್ದಿ ಶಿವಮಾರ ಮತವೆಂದು ಗಜಶಾಸ್ತ್ರಮಂ ಮಾಡಿ, ಮತ್ತಂ

> **ಏವೆಳ್ವುದೊ ಶಿವಮಾರ ಮ**
> **ಹೀವಳಯಾಧಿಪನ ಸುಭಗಕವಿತಾಗುಣಮಂ**
> **ಭೂವಳಯದೊಳ್ಗಜಾಷ್ಟಕ**
> **ಮೋವನಿಗೆಯೆಮೊನಕೆವಾಡು ಮಾದುದೆ ಪೇಳ್ಗು ॥**

ಈತನ ಒನಕೆವಾಡಿನ ಸುಭಗತೆಯು ಹನ್ನೊಂದನೇ ಶತಮಾನದ ಅಂತ್ಯದವರೆಗೂ ಮುಂದುವರೆಯುತ್ತದೆ.

**ನಾಮಯ್ಯ (ಕ್ರಿ.ಶ.೮೯೦):**

ಕೋಲಾರ ಜಿಲ್ಲೆಯ, ಮುಳಬಾಗಿಲು ತಾಲೂಕಿನ, ಆವನಿ ಗ್ರಾಮದ ರಾಮೇಶ್ವರ ದೇವಾಲಯದ ಶಾಸನದಲ್ಲಿ ‘ಬರೆದನ್ನಾಮಯ್ಯಂ’ ಎಂದು ಮುಕ್ತಾಯಗೊಳ್ಳುತ್ತದೆ. ಇದು ಕವಿಯ ಹೆಸರೆಂದು ಪಂಡಿತರ ಅಭಿಪ್ರಾಯ[೨೬] ನೊಳಂಬರ ಪೊಳಲ್ಚೋರನ ಪಟ್ಟಮಹಿಷಿ ದೀವಾಂಬಿಕೆಯ ಪುಣ್ಯಕಾರ್ಯಗಳನ್ನು ಉಲ್ಲೇಖಿಸುವ ಈ ಶಾಸನದ ಕಾಲ ಕ್ರಿ.ಶ. ೮೯೦.

ಶ್ರೀವಧು ಧರೆ ಪೇಳಲ್ಕೇ
ರಾವನಿಪಂಗಗ್ರಮಹಿಷಿ ಭುವನಾಂಬಿಕೆ ವಾ ।
ಗ್ದೇವಿಯರ ದೊರೆಯೆನಿಸಿದ
ದೀವಬ್ಬರಸಿಯರ ದೊರೆಗೆಟ್ಟರ ಪೆಱರೊಳರೇ ॥

ವಿದಿತಂ ಲೋಕಕ್ಕೆ ಮುನ್ನ ರಘುಕುಳದಹನೋಗೇಷುವಿಂ ಕಾಯ್ದು ತಿಣ್ಣಂ
ಕುದಿಗೊಣ್ಡಟ್ಕೆತ್ತಗಸ್ತ್ಯಂ ಕುಡಿಯುತುಗುಳ್ದ ನಿಂ ಕಟ್ಟು ಪಟ್ಟಟ್ಟುದಿನ್ತ ।
ಪ್ಪದು ಪೆಂಪನ್ತಾಳ್ದಿತೆನ್ದನ್ದಱಿಯರೆ ಲವಣಾಂಭೋಗಿಯಂ ಪೋಲಿಸಲ್ವೇ
ಡಿದುವೇತ್ತಾನೆತ್ತಲೆಂಬನ್ತತಿ ಬಹುಳ ಜಳನ್ದೀವಳಬ್ಬಾ ಸಮುದ್ರಂ ॥

ಮನುಚರಿತಂಮ್ಮಹೇನ್ದ್ರ ನೃಪನಿನ್ದೆ ಪರೋಕ್ಷದೊಳಾ ಮಹಾತ್ಮ್ಯನಾ
ಜನನಿಮಹೇನ್ದ್ರ ನಾಮದೆ ಕೊಳಂ ನಿಜನಾಮದೊಳಿನ್ತಟಾಕಮಿೞ ।
ಶನ ಭವನಮ್ಮುಕುಂದ ಭವನಂಗಳನಿಂಬಿನಿ ಮಾಡಿ ಧರ್ಮ್ಮವ
ರ್ದ್ಧನದೆ ಕನೀಯನನ್ದನನ ರಾಜ್ಯಮನೀಕ್ಷಿಸುಗಾವ ಕಾಲಮುಂ ॥

ನೆಟ್ಟನೆ ಕದಂಬವಂಶಂ
ಪುಟ್ಟಿದ ಮನೆ ಪಲ್ಲವೇನ್ದ್ರನಿಱುವನೊಳಂ ಬಂ ।
ಪುಟ್ಟಿದ ಮಗನಿಗೆ ಮುಗಿಲಂ
ಮುಟ್ಟಿಪುದುಂ ಪೆಂಪು ದೀವಳಬ್ಬರಸಿಯರ ॥

ದಿವಾಂಬಿಕೆಯ ಕೊಳ, ತಟಾಕ, ಶಿವದೇವಾಲಯ, ವಿಷ್ಣುಗೃಹ ನಿರ್ಮಾಣ ಕಾರ್ಯಗಳನ್ನು ವಿವರಿಸುವ ಈ ಶಾಸನ ಅತ್ತಿಮಬ್ಬೆಯ ಮಹಾಕಾರ್ಯಗಳನ್ನು ನೆನಪಿಗೆ ತರುತ್ತದೆ. ಇಲ್ಲಿಯ ತಟಾಕ ವರ್ಣನೆ ಮುಂದಿನ ಕವಿಗಳ ತಟಾಕ ವರ್ಣನೆಗೆ ಮಾದರಿಯಾಗಿದೆ.

**ಅಡಿಟಿಪ್ಪಣಿಗಳು:**

೧. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ : ಸಂಪುಟ–೪೧, ಸಂಚಿಕೆ–೧–೨, ಜೂನ್, ಡಿಸೆಂಬರ್ – ೧೯೫೬ ಪುಟ–೬೭.

೨. ಸಂ: ಡಾ.ಜಿ.ಎಸ್. ಶಿವರುದ್ರಪ್ಪ: ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ: ಸಂ: ೩ ಬೆಂಗಳುರು ವಿ.ವಿ.–೧೯೭೬ ಪುಟ– ೪೯೨.

೩. ಸಂ: ಹಾ.ಮಾ.ನಾ: ಕನ್ನಡ ಅಧ್ಯಯನ ಸಂಸ್ಥೆಯ: ಕನ್ನಡ ಸಾಹಿತ್ಯ ಚರಿತ್ರೆ ಸಂ–೩, ಮೈಸೂರು – ೧೯೭೬ ಪುಟ– ೨೦೭.

೪. ಸಂ: ಡಾ.ಜಿ.ಎಸ್. ಶಿವರುದ್ರಪ್ಪ: ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ: ಸಂ– ೧ ಬೆಂಗಳೂರು ವಿ.ವಿ.೧೯೭೪, ಪುಟ–೭೧.

೫. ಮೇವುಂಡಿ ಮಲ್ಲಾರಿ : ಕನ್ನಡ ನಾಡಿನ ಶಾಸನಕವಿಗಳು, ಕ.ಸಾ.ಪ. ೨೦೧೩, ಪು– ೨.

೬. ಪೂರ್ವೋಕ್ತ –ಪುಟ–೭೧

೭. ಅದೇ –ಪುಟ–೭೨.

೮. ಎಸ್.ಎಮ್. ಹಿರೇಮಠ: ಶಾಸನಾಧ್ಯಯನ, ವಿದ್ಯಾನಿಧಿ ಪ್ರಕಾಶನ – ೧೯೯೮, ಪುಟ– ೮೧–೮೨.

೯. ಹಾ.ಮಾ.ನಾ : ಕನ್ನಡ ಸಾಹಿತ್ಯ ಚರಿತ್ರೆ: ಮೈಸೂರು ವಿ.ವಿ. ಸಂಪುಟ–೩, ಪುಟ–೨೦೮.

೧೦. ವಿ.ಜಯರಾಮ್: ಕನ್ನಡ ಶಾಸನ ಸಾಹಿತ್ಯ : ಮೈಸೂರು ೨೦೧೧, ಪುಟ–೧೦೯.

೧೧. ಅದೇ ಪುಟ–೧೦೯–೧೧೦.

೧೨. ಅದೇ ಪುಟ– ೧೦.

೧೩. ವಿ.ಜಯರಾಮ್ : ಕನ್ನಡ ಶಾಸನ ಸಾಹಿತ್ಯ ಪುಟ–೧೧೦.

೧೪. ದೇವರಕೊಂಡಾರೆಡ್ಡಿ (ಸಂ) ಬಾಗಲಕೋಟ (ಜಿ)ಬಾದಾಮಿ (ತಾ) ಪಟ್ಟದಕಲ್ಲು, ಶಾ.ಸಂ– ೮೨, ಪುಟ–೨೦೬.

೧೫. ಮೇವುಂಡಿ ಮಲ್ಲಾರಿ: ಕನ್ನಡ ನಾಡಿನ ಕೆಲವು ಶಾಸನಕವಿಗಳು : ಪುಟ–೪.

೧೬. ಎಂ.ಎಂ.ಕಲಬುರ್ಗಿ : ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ ಪುಟ– ೧೪೩.

೧೭. ಅದೇ ಪುಟ– ೧೪೩.

೧೮. ಮೇವುಂಡಿ ಮಲ್ಲಾರಿ : ಕನ್ನಡ ನಾಡಿನ ಕೆಲವು ಶಾಸನ ಕವಿಗಳು ಪುಟ–೫.

೧೯. ವಿ.ಜಯರಾಮ್ : ಕನ್ನಡ ಶಾಸನ ಸಾಹಿತ್ಯ, ಪುಟ–೧೧೧.

೨೦.ಹಾ.ಮಾ.ನಾ. (ಸಂ) EC. Vol .IV. No-೨೫೬, ಮೈಸೂರು (ಜಿ) ಚಾಮರಾಜನಗರ ಅಂಚವಾಡಿ ಪುಟ-೧೫೭.

೨೧.ದೇವರಕೊಂಡಾರೆಡ್ಡಿ EC. Vol .IX. No-೩೪, ಬಾಗಲಕೋಟೆ (ಜಿ) ಹುನಗುಂದ (ತಾ) ಐಹೊಳೆ ಪುಟ-೩೭೦-೭೧.

೨೨.EC.Vol .IV. No-೬೬, ಹಾಸನ (ಜಿ) ಹೊಳೆನರಸಿಂಹಪುರ (ತಾ) ಅಂಕನಾಥಪುರ, ೯೫೦

೨೩.ಹಾ.ಮಾ.ನಾ. (ಸಂ) EC. Vol .III. No-೯೦, ಮೈಸೂರು (ಜಿ) ಹೆಗ್ಗಡದೇವನಕೋಟೆ (ತಾ) ಸಗರೂರು ಪುಟ- ೪೯೭.

೨೪.EC. Vol .III. No-೬೬, ಶಿವಮೊಗ್ಗ (ಜಿ)ನಗರ (ತಾ) ಹುಂಚ (ಗ್ರಾ) ೮೨೫

೨೫.ಮೇವುಂಡಿ ಮಲ್ಲಾರಿ : ಕನ್ನಡ ನಾಡಿನ ಶಾಸನಕವಿಗಳು : ಪುಟ-೬.

೨೬.ಎಂ.ಎಂ.ಕಲಬುರ್ಗಿ ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ ಪುಟ-೧೪೪.

## ಅಧ್ಯಾಯ-೩

## ಕ್ರಿ.ಶ.೯ನೇ ಶತಮಾನದ ಶಾಸನಕವಿಗಳು

**ದಿವಾಕರ (ಕ್ರಿ.ಶ.೯ನೇ ಶತಮಾನ)**

ತಮಿಳುನಾಡಿನ ತಿರುವಳ್ಳಂ ಜಿಲ್ಲೆಯ, (ತಿರುವಳ್ಳೂರ್ ಜಿಲ್ಲೆ) ಧರ್ಮಪುರಿ ಊರಿನ ಶಾಸನವನ್ನು ದಿವಾಕರ ಶಾಸನಕವಿ ರಚಿಸಿರುವನು.[೧] ಕಾಲದ ಉಲ್ಲೇಖವಿಲ್ಲದ ಈ ಶಾಸನವನ್ನು ಶಾಸನ ಸಂಪಾದಕರು ಲಿಪಿಯ ಸ್ವರೂಪದಿಂದ ಕ್ರಿ.ಶ.೯ನೇ ಶತಮಾನದ್ದೆಂದು ನಿರ್ಧರಿಸಿದ್ದಾರೆ. ದಿವಾಕರ ಕವಿಯು ತನ್ನ ಗುರು ವಿದ್ದೇರಾಶೀಂದ್ರರ ಮಹಿಮೆಯನ್ನು ವರ್ಣಿಸಿದ್ದಾನೆ. "ಡಾ.ಎಂ.ಎಂ. ಕಲಬುರ್ಗಿಯವರು ವಿದ್ದೇರಾಶೀಂದ್ರರನ್ನು ವಿದ್ಯಾರಾಶಿ ಎಂದು ಗುರುತಿಸಿದ್ದಾರೆ.[೨] ಶೈವ ಮತೀಯನಾದ ಈತನು ತನ್ನ ಗುರುವಿನ ಮಹಿಮೋನ್ನತಿಯನ್ನು ಹೀಗೆ ಹೇಳಿದ್ದಾನೆ.

**ಕಲಿಚೋರೇಶ್ವರ ಪಲ್ಲವೇಶ್ವರ ಮಹಾಭೋಗೇಶ್ವರೋತ್ತುಂಗ  ನಿ**
**ರ್ಮಲ ನನ್ನೇಶ್ವರ ಕೀರ್ತಿಶಾಸನ ಲಪತ್ಕಾಳ್ಟೇ ಭುಜಂಗೇಶ್ವರಾ।**
**ವಲಿ ಕಣ್ಣೀರವ ಕೂಪ ನಂದನವನ ಪ್ರಾಕಾರ ಸಂಸ್ಥಾನದಿ**
**ನ್ನೆಲಕ್ಕೆಲ್ಲಂ ಗಡಿ ಚನ್ದಮಾಯ್ತು ತಗಡೂರಿ ವಿದ್ದೇರಾಶೀನ್ದ್ರರಿಂ ॥**

**ಅಕ್ಕರಿಗಂಗೆ ಬೇಡಿದ ನರಂಗೆ ತಪಸ್ವಿಗೆ ದೇಸಿಗಂಗೆ ಕ**
**ಟ್ಟೊಕ್ಕಲಿಗಂಗೆ ದೀನ ನಟ ಪಾಠಕ ವನ್ದಿಜನಕ್ಕೆ ರಾಗದಿ**
**ನ್ನಕ್ಕೊಡೆ ನಿನ್ದು ನೋಡಿದೊಡೆ ಮೆಚ್ಚಿದೊಡೋತೊಡೆ ಕೂರ್ತೊಡಿಗಳ್ಕ ।**
**ಮ್ಮಿಕ್ಕೆದನ್ಗೀವೆನೆಂಬುದಿದು .  . . . ವಗುಣ ಸಲೆ ವಿದ್ದೆರಾಶಿಯ ॥**

**ಗುರುಗಳ್ರುದ್ರಬೋಜಂಗದ . . .  ಗೃಹನ್ತುಂಬೇಶ್ವರನ್ತದ್ಭುಜಂ**
**ಗರ ಶಿಷ್ಯರ್ವ್ವರ ಲಾಕುಳಾಗಮಿಕ ವಿದ್ಯಾರಾಶಿಗಳ್ಶಾಸನಂ**
**ಬರೆದೊಂ ಸನ್ದದಿವಾಕರನ್ನೆಗಳ್ದುದೀ ಭೋಗೇಶ್ವರ ಸ್ಥಾನಮು**
**ರ್ವ್ವರೆಗಿನ್ನೊನ್ದಜೆನೊನ್ದಪೂಜ . . . . ವಿದನಿನ್ನೇ ವಣ್ನಿಪೋಂ ಬಣಿಪೋಂ ॥**

**ಶ್ರೀ ಶಿವಪೂಜೆಯೊಳೊಂದು ಸ ।**
**ದಾಶಿವ ಯೋಗದೊಳೊಂದು ರೂಪಮರೇ ವಾ ।**
**ರಾಶಿವ್ಯೆತರೆನೆ . . . ವಿದ್ಯಾ ।**
**ರಾಶಿ ಶಿವಜ್ಞಾನ ಕರ್ಮ ನಿಮ್ಮಿತರಾದರ್ ॥**

ಎಂದು ವಿವರಿಸಿದ್ದಾನೆ.

**ಪಣ್ಡಸ್ವಾಮಿ (ಕ್ರಿ.ಶ.೯೦೦)**

ಚಿಕ್ಕಮಗಳೂರು ಜಿಲ್ಲೆಯ, ಚಿಕ್ಕಮಗಳೂರು ತಾಲೂಕಿನ, ಕೋಟೆವೂರು ಗ್ರಾಮದ ಶಾಸನವು[೩] ಸಂಸ್ಕೃತದಲ್ಲಿದ್ದು ಬ್ರಾಹ್ಮಣರಿಗೆ ಹಾಗೂ ದೇವರಿಗೆ ದಾನ ನೀಡಿದ ವಿವರವಿದೆ. ದಾನ

ನೀಡಿದ ವ್ಯಕ್ತಿ ಹೆಸರು ನಾಶವಾಗಿದೆ. ಸಂಗಮನ ಮಗ ಯಾರು? ಎಂಬುದು ಪ್ರಶ್ನೆಯಾಗಿದೆ. ತರ್ಯಲ್ಲ ಕುಟುಂಬದ ಒಬ್ಬ ಎನ್ನಬಹುದು. ಇಲ್ಲಿ ಶಾಸನದ ಕೊನೆಯ ಭಾಗದಲ್ಲಿ:

**"ಶಬ್ದ ವಿತ್ಕಶ್ಯಪೋ ವಾಗ್ಮೀತ್ತರ್ಯ್ಯಲ್ಲಣ ಪುರೋಹಿತಃ**
**ಪಣ್ಡಸ್ವಾಮಿ ಪುರಾಣಜ್ಞಃ ಕೃತವಾನ್ಯಾಸನಂತ್ವಿದಂ ॥**

ಎಂದು ಪಂಡಸ್ವಾಮಿಯು ಪುರೋಹಿತ, ವೈಯಾಕರಣಿ ಪುರಾಣ ನಿಷ್ಣಾತ ಎಂದು ಗುರುತಿಸಿದ್ದಾಗಿದೆ. ಈತನ ಕೆಲವು ಸಂಸ್ಕೃತ ಪಾದಗಳನ್ನು ಹೀಗೆ ನೋಡಬಹುದು.

**ಸಿದ್ಧಂ ನಮಃ**
**ಸ್ವಸ್ತಿ ಜಯತೀನ್ದ್ವರ್ಕನಯನಃ ಕ್ಷಿತಿದ್ಯುವಿಯ**
**ದೀಶ್ವರಃ ಲೋಕೋತ್ಪತ್ತಿತಿರೋಭಾವ  ಪಾಲ**
**ನವ್ಯಾಪೃತೋ ಹರಿಃ**

ಎಂದಿದೆ.

**ಬೆಳ್ದೇವ (ಕ್ರಿ.ಶ. ೯೧೦)**

ಮೈಸೂರು ಜಿಲ್ಲೆಯ, ಎಡೆತೊರೆ ತಾಲೂಕಿನ, ಚಿಕ್ಕಹನಸೋಗೆ[೪] ಗ್ರಾಮದಲ್ಲಿ 'ಬೆಳ್ದೇವಂ ಬರೆದಂ' ಎಂದು ಕೊನೆಗೊಳ್ಳುವ ಶಾಸನವಿದೆ. ಏಳಾಚಾರ್ಯನೆಂಬವನ ಸಮಾಧಿಮರಣ ಇತ್ಯಾದಿ ವಿಷಯಗಳನ್ನು ಈ ಶಾಸನ ಕಥಿಸುತ್ತದೆ.

**ಬಾಳೋ ಕಾಳುರಿ ಮೇಣ್ವೆಯುದ್ವ ಶಕರುಂ ಕನ್ದರ್ಪ್ಪರೂಪ ಪ್ರಭಾ**
**ಜಾಳಾಳಂಕೃತರಾಗೆಯುನ್ನತಿ ವಿದೂರಂ ಭೀಷ್ಮರುಂ ಸದ್ದಯಾ**
**ಭೂಲೋಕೋದರ ದಾನಿಯುದ್ಧ ತಥನುಂ ನೆಣ್ನೇಕುಲಂ ನೆಟ್ಟನಿ**
**ನ್ತೇಳಾಚಾರ್ಯ ಮುನೀನ್ದ್ರರಾದರದಜೆಂನ್ದಾಶ್ಚರ್ಯಮೇರುಂ ಜಗಂ ॥**

**ಒಂದು ತಿಂಗಳ್ವಾನಮಂ ಭಾವಿಸಿ ಸಮಾಧಿ ಮರಣ ದಿನ್ದಮಾಯ್ದನೋನ್ತು**
**ಸಗತಿಗೆ ಸನ್ದರ್ ಅಷ್ಟೋಪಾಸದೆ ಕಲ್ನೆಲೆಯ ದೇವರ್ ತಮ್ಮ**
**ಗುರುಗಳೇಳಾಚಾರ್ಯ್ಯದೇವರ್ಗೆ ಪರೋಕ್ಷ ವಿನಯ ನಿಸಿಧಿಗೆಯಂ ನಿಜೆಸಿದರ್**

**ಎಱಿಯ ಸಮುದ್ರವೇಷ್ಟಿತ ಧರಾತಳಮಂ ಪ್ರತಿಪಾಳಿಸುತ್ತುಮಿ**
**ತ್ತೆರೆಗಮಹಾರಿ ಮಣ್ಡಳಿಕರಿಂ ಬೆಸಕೆಯ್ಯೆ ವಿಳಾಸಯೋಱಿಗ್ಗೆ ಯಿಂ ।**
**ಮೆಱೆವ ಕರೋರನೆನ್ದೆನಿಸಲಾಳಿಪೊರೀಸ್ತಿತ್ ಸನ್ದ್ಯರಿನ್ದು ವ**
**ನ್ದೆರಗ ಸಮನ್ತು ಕಲ್ನೆಲೆಯ ದೇವರ ಪಾದಪಯೋರುಹಂಗಳೊಳ್ ॥**

**ಸ್ಥಾವರ ಜಙ್ಗಮ ತೀರ್ಥಂ**
**ಭಾವಿಸಿ ಪೇಱಿದ್ದಾಗಳೊರದೆ ಗೊಮ್ಮಟದೇವ**
**ಸ್ಥಾವರ ತೀರ್ಥಂ ಕಲ್ನೇಲೆ**
**ದೇವಬ್ಬೂವಳಯದೊಳಗೆ ಜಙ್ಗಮತೀರ್ಥಂ ॥**

ಒಂದು ತಿಂಗಳ ಉಪವಾಸದಿಂದ ಸಮಾಧಿಮರಣವನ್ನಪಿದ ನೆಣ್ಣೆಕುಲ ಏಳಾಚಾರ್ಯ ಯತಿಗಳ ಹೆಸರಿನಲ್ಲಿ ಅವರ ಶಿಷ್ಯ ಕಲ್ನೆಲೆಯದೇವರು ನಿಸದಿಗೆಯನ್ನು ಸಲ್ಲಿಸಿದುದು ಇದರ ವಸ್ತು. ಈ ಶಾಸನದ ಆದಿ ಪದ್ಯದಲ್ಲಿ ಗುರು ವರ್ಣನೆ ಕೊನೆಯ ಪದ್ಯದಲ್ಲಿ ಶಿಷ್ಯ ವರ್ಣನೆ ಮಾಡಲಾಗಿದೆ.

**ಗುಣವರ್ಮ (ಕ್ರಿ.ಶ. ೯೧೫):**

ಆಂದ್ರಪ್ರದೇಶದ ಕಡಪ ಜಿಲ್ಲೆಯ ದಾನವುಲಪಾಡ[೨] ಶಾಸನದ ಕೊನೆಗೆ "ಅನುಪಮ ಕವಿಯ ಸೇನಬೋವಂ ಗುಣವರ್ಮ್ಮಂ ಬರೆದಂ" ಎಂದು ಮಾತು ಬರುತ್ತದೆ. ಇದು ರಾಷ್ಟ್ರಕೂಟ ದೊರೆ ಮೂರನೇ ಇಂದ್ರನ ಆಳ್ವಿಕೆಯ ಕಾಲದ್ದು (ಕ್ರಿ.ಶ. ೯೧೫-೧೭) ಇದರಲ್ಲಿ ದೊರೆಯ ದಂಡನಾಯಕನಾಗಿದ್ದ ಶ್ರೀವಿಜಯ ಎಂಬುವವನನ್ನು ಇಂದ್ರಶಾಪನಾತ್ ಸಂರಕ್ಷನ್ ಅಜಿವಿಂಗೋಜ, ಅನುಪಮಕವಿ, ಆಶ್ರಿತಜನ ಕಲ್ಪವೃಕ್ಷ ಎಂದು ಅತೀಶಯವಾಗಿ ಹೊಗಳಿದೆ. ಶ್ರೀವಿಜಯನು ಮಾನವ ಬಾಳನ್ನು ದಿಕ್ಕರಿಸಿ, ಸನ್ಯಸನದ ಮೂಲಕ ಮುಕ್ತಿ ಸಾಧಿಸಿದನೆಂದು ಇದರಲ್ಲಿ ಹೇಳಿದೆ. ಇದರಲ್ಲಿ ಹನ್ನೊಂದು ಪದ್ಯಗಳಿವೆ. (ಮೂರು-ಸಂಸ್ಕೃತ, ಎಂಟು ಕನ್ನಡ ಕಂದಪದ್ಯಗಳು) ಈ ಶಾಸನವನ್ನು ರಚಿಸಿರುವವನು ಶ್ರೀವಿಜಯನ ಸೇನಬೋವ ಗುಣವರ್ಮ, ಈ ಗುಣವರ್ಮನನ್ನು ಪಂಪ ಪೂರ್ವಯುಗದಲ್ಲಿ ಹರಿವಂಶ, ಶೂದ್ರಕ, ಭುವನೈಕವೀರ ಎಂಬ ಮೂರು ಕಾವ್ಯಗಳನ್ನು ರಚಿಸಿದ್ದ ಮೊದಲನೇ ಗುಣವರ್ಮನೊಂದಿಗೆ ಸಮೀಕರಿಸಬಹುದು ಎಂದು ಸಂಪಾದಕರು ಅಭಿಪ್ರಾಯಪಡುತ್ತಾರೆ.

ಶಾಸನಕವಿಯ ಕಾವ್ಯ ಸಾಮರ್ಥ್ಯ ಈ ಕಂದಗಳಲ್ಲಿ ವ್ಯಕ್ತವಾಗಿದೆ:

**ಪತಿಯ ಬೆಸದಿಂದಮಹಿತರ**<br>**ನತಿಕೋಪದಿನಿಕ್ಕಿಗೆಲ್ದು ಪ್ರತಿಪಾಳಿಸಿದಂ ।**<br>**ಚತುರುದಧಿ ವಲಯಮೆಲ್ಲಮ**<br>**ನತಿರಥನೀ ದಣ್ಣನಾಯಕಂ ಶ್ರೀವಿಜಯಂ ॥**

**ತುರಗ ದಳಂಗಳನೊಡ್ಡಿದ**<br>**ಕರಿಘಟೆಯಂ ಪಿರಿಯ ನೆರವಿಯಂ ಬಲ್ಲಣೆಯಂ**<br>**ಧುರದೆಡೆಯೊಳಿಜಿದು ಗೆಲ್ಲುಂ**<br>**ಕರದಸಿ ಕರಮುರಿದು ರಣದೊಳನುಪಮಕವಿಯೂ ॥**

**ವಸುಮತಿಯೊಳಗಿಜಿಂತುಂ**<br>**ದೆಸೆಗಳ ಕುಸುಕುರುಮನೆಯ್ದಿ ಮಾಣದೆ ಮತ್ತಂ ।**<br>**ಬಿಸರುಹ ಗರ್ಬ್ಭಾಣ್ಡಕ್ಕಂ**<br>**ಪಸರಿಸಿದುದು ಕೀರ್ತಿ ನೆಚ್ಚಿನನುಪಮಕವಿಯ ॥**

ಅಟ್ಟವಿಧ ಕರ್ಮ್ಮಮೆಲ್ಲಮ
ನಟ್ಟುಂಬರಿಗೊಂಡು ಕೊಡಿಪೆನೆಂಬುದೆ ಬಗೆಯಿಂ ।
ಪುಟ್ಟಿದನುದಾತ್ತ ಸತ್ವಂ
ನೆಟ್ಟನೆ ವಿಬುಧೇನ್ದ್ರವನ್ದ್ಯನಱಿವಿಂಗೋಜಂ ॥

ತಾನಱಿದು ತೋಟಿಱಾದು ನೆಟ್ಟನೆ
ಮಾನಿಸವಾಟಿಱಾವುದೆಂದು ಸಂಸ್ಯಾಸನದೊಳ್ ।
ಮಾನಸಿಕೆಗಿಡದೆ ಕೊಣ್ಡೊನ
ನೂನ ಸುಖಾಸ್ಪದಮನಟ್ಟೆಯೊಳ್ ಶ್ರೀವಿಜಯಂ ॥

ನಿರ್ಗ್ಗತ ಭಯನೀನರಸಂ
ಸರ್ಗ್ಗಮನಾನೊಲ್ಲೆನೆಂದು ಪೇಸಿ ಬಿಸುರ್ವ್ವಂ ।
ಸ್ವರ್ಗದ ಭೋಗಮನುಂಡಪ
ವರ್ಗಕ್ಕಡಿಯಿಟ್ಟೋನಱಿದೊನನುಪಮ ಕವಿಯಂ ॥

ದಣ್ಡಿನ ಸಾಮಗ್ರಿಗೆ ಪರ
ಮಣ್ಡಳಮಳ್ಕಾಡೆ ಸರ್ವ ವಿಕ್ರಮತುಂಗಂ ।
ದಂಡಿನ ವೀರಶ್ರೀಗೊ
ಳ್ಗಣ್ಡಂ ಶ್ರೀ ದಣ್ಡನಾಯಕಂ ಶ್ರೀವಿಜಯಂ ॥

ಚಣ್ಡಪರಾಕ್ರಮನುಱದರಿ
ಮಣ್ಡಲಿಕರನಟ್ಟಿ ಪಿಡಿದು ಪತಿಗೊಪ್ಪಿಸುವೊ ।
ಳ್ಗಣ್ಡಂ ಪ್ರಚಣ್ಡನೀ ಭೂ
ಮಣ್ಡಲದೊಳ್ದಣ್ಡನಾಯಕಂ ಶ್ರೀವಿಜಯಂ ॥

'ಅಱಿವಿಂಗೋಜ' 'ಅನುಪಮ ಕವಿ' ಎಂಬ ಬಿರುದುಗಳನ್ನು ಲಕ್ಷಿಸಿ ಈತನು ಕವಿರಾಜಮಾರ್ಗದ ಶ್ರೀವಿಜಯನೆನ್ನಬೇಕೆಂದರೆ ಕ್ರಿ.ಶ. ೯೧೫ ಎಂಬ ಮಿತಿ ಅಡ್ಡಬರುತ್ತದೆ. ಅದೇನೇ ಇದ್ದರೂ ಈ ಶ್ರೀವಿಜಯನು ಚಾವುಂಡರಾಯನಂತೆ ಕವಿ, ಕಲಿ ಮತ್ತು ಪರಮ ಧಾರ್ಮಿಕ ಎಂಬುದು ಸುಳ್ಳಲ್ಲ. ಇಂಥ ಪರಿಪೂರ್ಣ ವ್ಯಕ್ತಿತ್ವವನ್ನು ಎಂಟು ಪದ್ಯಗಳಲ್ಲಿ ಹಿಡಿದಿಟ್ಟ ಗುಣವರ್ಮನ ಕಾವ್ಯಶಕ್ತಿ ಮೆಚ್ಚುವಂತಹದು. ಹಿತಮಿತ ಪದಪ್ರಯೋಗ, ದೇಸಿಮಾರ್ಗ ಸಮನ್ವಯವನ್ನೊಳಗೊಂಡ ಈ ಪದ್ಯಗಳಿಗೆ ಕನ್ನಡದ ಕಂದಸಾಹಿತ್ಯದಲ್ಲಿ ಉನ್ನತ ಸ್ಥಾನವಿದೆ. ಒಂದೊಂದು ಅರಿಕೇಸರಿಯ ಪೂರ್ವಜರನ್ನು ಕುರಿತ 'ವಿಕ್ರಮಾರ್ಜುನ ವಿಜಯದ' ಕಂದಪದ್ಯಗಳನ್ನು ನೆನಪಿಗೆ ತರುತ್ತವೆ."[೬]

**ರವಿನಾಗಭಟ್ಟ (ಕ್ರಿ.ಶ.೯೧೮)**

ಹಿಂದಿನ ಅಖಂಡ ಧಾರವಾಡ, (ಅವಿಭಜಿತ) ಇಂದಿನ ಗದಗ ಜಿಲ್ಲೆಗೆ ಸೇರಿದ ನರಗುಂದ ತಾಲೂಕಿನ, 'ದಂಡಾಪುರ'ದ[೭] ಶಾಸನವನ್ನು ರವಿನಾಗಭಟ್ಟ ಕವಿಯು ರಚಿಸಿದ್ದಾನೆ. ರಾಷ್ಟ್ರಕೂಟರ ಅರಸ ಪ್ರಭೂತವರ್ಷನ (೪ನೇ ಗೋವಿಂದ) ಆಳ್ವಿಕೆಯನ್ನು ಉಲ್ಲೇಖಿಸಿರುವ ಈ ಶಾಸನದ ಕಾಲ ಕ್ರಿ.ಶ. ೯೧೮ ಇನ್ನೂರಿಪ್ಪತ್ತು ಮಹಾಜನರ ಅಪ್ಪಣೆಯಂತೆ ರವಿನಾಗಭಟ್ಟನು ಈ ಶಾಸನ ಪದ್ಯವನ್ನು ರಚಿಸಿದ್ದಾನೆ. ಇದು ನಾಲ್ಕನೇ ಗೋವಿಂದನ ಆಳ್ವಿಕೆಯಲ್ಲಿ ದಾನದತ್ತಿಗಳನ್ನು ನೀಡಿದ್ದನ್ನು ಹಾಗೂ ಅರಸರ ಆಳ್ವಿಕೆ ಕಾಲ ಇತ್ಯಾದಿ ಸಂಗತಿಗಳನ್ನು ಕಂದಪದ್ಯದಲ್ಲಿ ಶಾಸನಕವಿ ವರ್ಣಿಸಿದ್ದಾನೆ. ರವಿನಾಗಭಟ್ಟ ಎಂಬ ಹೆಸರನ್ನು ನೋಡಿದರೆ ಈತನು ಬ್ರಾಹ್ಮಣನಾಗಿರಬಹುದೆಂದು ತೋರುತ್ತದೆ. ಹಾಗಿದ್ದ ಪಕ್ಷದಲ್ಲಿ ಈತನು ನಮಗೆ ತಿಳಿದು ಬಂದಿರುವ ಬ್ರಾಹ್ಮಣ ಕವಿಗಳಲ್ಲಿ ಆದಿಕವಿ ಎಂಬುದಾಗಿ ಕವಿಚರಿತೆಕಾರರು ಅಭಿಪ್ರಾಯಪಡುತ್ತಾರೆ.[೮] ಇಲ್ಲಿಯ ಕಂದಪದ್ಯಗಳನ್ನು ಗಮನಿಸಿದರೆ ಈತನು ಮಧ್ಯಮವರ್ಗದ ಪ್ರೌಢ ಕವಿಯಾಗಿದ್ದನೆಂದು ತಿಳಿಯುತ್ತದೆ. ಕವಿಯ ಕಾವ್ಯಕೌಶಲ್ಯಕ್ಕೆ ಉದಾಹರಣೆ. ಹೀಗೆ

**ಬರೆದೊನಿದಂ ಶ್ರೀವಿಜಾಯಂ**
**ನೆರೆದಿನ್ನೂಱಿರ್ಪ್ಪದಿಂಬರುಂ ಪೇೞಿನೆ ತಾಂ ।**
**ಪರಿಣತನೀ ಕಂದಂಗಳ**
**ನೊರೆದಂ ರವಿನಾಗಭಟ್ಟನತ್ಯಾದರದಿಂ ॥**

ಎಂಬ ಪದ್ಯದಿಂದ ರವಿನಾಗಭಟ್ಟ ಕಂದಪದ್ಯದ ರಚನಾಕಾರನೆಂದೂ 'ಶ್ರೀವಿಜಯ' ಎಂಬುವನು ಶಿಲಾಫಲಕದ ಮೇಲೆ ಅಕ್ಷರ ಬರೆದ ಲಿಪಿಕಾರನಾಗಿರಬೇಕು. ಕಂಠಮಗೆರೆಗೆ ಜನತೆ ಸಲ್ಲಿಸಬೇಕಾದ ತೆರಿಗೆಯನ್ನು ನಿರ್ಧರಿಸಿ ಹೇಳುವ ರಾಷ್ಟ್ರಕೂಟ ಗೋವಿಂದನ ಕಾಲದ ಪೂರ್ಣ ಪಾಠ ಹೀಗಿದೆ.

**ಸ್ವಸ್ತಿ ಪ್ರಭೂತ ವರ್ಷಂ**
**ವಿಸ್ತೃತ ಕುವರಯಮನುತ್ತರೋತ್ತರ ವಿಭವ ।**
**ಪ್ರಸ್ತುತತೆಯಿಂ ರಕ್ಷಿಪ**
**ವಿಸ್ತರದುದೆಂಟುನೂಱನಾಲ್ವತ್ತವು ತಾಂ ॥**

**ಶಕ್ ಕಾಲಂಗಳ್ ವರ್ಷಂ**
**ಪ್ರಕಟಂ ಪೆಸರಿಂ ಪ್ರಮಾಥಿವರ್ತಿಸೆ ದಿನಪಂ**
**ಮಕರಕ್ಕೆ ವರ್ಷ ಸಂಕ್ರಮ**
**ಣಕಾಲದೊಳ್ ಕೂಡೆಬಂದ ಪೌಷಧ ತಿಥಿಯೊಳ್ ॥**

ಪನ್ನಿರ್ಮ್ಮತ್ತರ್ ಕೆಯ್ಯಂ
ಮಾನ್ಯಂಗುಡುಗೆಂದು ಪೇೞ್ದಿ ಡೋರನಬೆಸದೊಳ್ ।
ನನ್ನಿವೆಡಂಗಂ ಲಿ(ಂಗಮ್
ತನ್ನಟ್ಟಿಕೊಟ್ಟು ಕೆಱೆಗೆ ಯಶಮಂ ಪಡೆದಂ ॥

ವಿಪ್ರರ ವಿವಾಹಮುಮಾ
ಗಪ್ಪನಿತಱಿಕೊಳೆಲ್ಲಮೊಸಗೆ ದ್ರಮ್ಮಂ ಮೂಱಿಂ ।
ತಪ್ಪದೆ ಮಾಣಿಯೊಳೆರಡಂ
ಕೆಪ್ಪದರೀ ಶೂದ್ರಗಣದ ಮದುವೆಯೊಳೊನ್ದಂ ॥

ಪ್ರಾಯಶ್ಚಿತ್ತ ನಿಮಿತ್ತದೊ
ಳಾಯತ ಪಣಮೆನಿತನಿತ್ತುಮೂರೊಳ್ ಸಹಿರ ।
ಣಾಯದ ವಣಮುಂ ಪೆರ್ಗ್ಗೆಱೆ
ಗಾಯಮಿದೆಂದೊಸೆದು ಕೊಟ್ಟರೀ ದ್ವಿಜಮುಖ್ಯರ್ ॥

ನೆಱೆಯೆ ಗುಣಾಢ್ಯರ್ ಕಂಠಮ
ಗೆಱೆಗಿನುತು ದ್ರವ್ಯದಾಯಮಂ ಕೊಟ್ಟವರ್ಗಳ್
ತರಿಸಂದೀ ಶಾಸನಮಂ
ನಿರಿಸಿದರಾಚಂದ್ರ ತಾರಕಾಂತಂ ಬರೆಗಂ ॥

ಮಾತಿನೊಳೇನೀ ಸ್ಥಿತಿಯಂ
ಘಾತಿಸಿ ಕಿಡಿಸಿದ ನರಂ ಚಿರಂ ಪಂಚಮಹಾ
ಪಾತಕನ ಪೋದ ಲೋಕ
ಕ್ಕಾತಂ ತಾಂ ಪೋಕುಮೆಂದೊಡದುವೇಂ ಪಿರಿದೇ ॥

ಮೊರಡಿಯ ಮೊದಲೊಳ್ಕೊಟ್ಟೊ
ರ್ತ್ತೆಱೆವರಿಯರ ಮೊಟ್ಟುವೆಂದು ಕೇರಿ ಸಮಸ್ತಂ ।
ಕೆಱೆಗೆ ಪದಿನೆಂಟು ಮತ್ತ
ರ್ತ್ತೆಱುವುದು ಕೇಸಬ್ಬೆಯಿತ್ತ, ಕೆಯ್ಯಿರ್ಮ್ಮತ್ತರ್ ॥

"ಈ ಶಾಸನದಲ್ಲಿ ಸಾಹಿತ್ಯ ಗುಣವಿಲ್ಲದಿದ್ದರೂ ಗದ್ಯದಲ್ಲಿ ಹೇಳಬಹುದಾದ ಶಕ, ಆಯಗಳನ್ನು ಪದ್ಯಗಳಲ್ಲಿ ಲೀಲಾಜಾಲವಾಗಿ ಹೆಣೆದಿದ್ದಾನೆ. ಕಂದಗಳನ್ನು ಕಟ್ಟುವಲ್ಲಿ ಪರಿಣತಹಸ್ತನಾಗಿದ್ದಾನೆ.[೯]

**ನಾಗವರ್ಮ (ಕ್ರಿ.ಶ.೯೧೮):**

ಶಿವಮೊಗ್ಗ ಜಿಲ್ಲೆಯ, ಶಿಕಾರಿಪುರ ತಾಲೂಕಿನ, ಬಂದಳಿಕೆ[೧೦] ಗ್ರಾಮದ ಶಿಲಾಶಾಸನದ ಕೊನೆಗೆ 'ಬರೆದೊಂ ನಾಗವರ್ಮಂ' ಎಂದು ಕವಿ ಸೂಚನೆ ಕಂಡುಬರುತ್ತದೆ. ರಾಷ್ಟ್ರಕೂಟ

ಅಕಾಲವರ್ಷ (ಕೃಷ್ಣ II) ಸಾಮಂತ ಕಲಿವಿಟ್ಟರಸ ಈತನ ಕೈಕೆಳಗೆ ನಾಗರಖಂಡವನ್ನಾಳುವ ನಾಳ್ಗಾವುಂಡ ನಾಗಾರ್ಜುನನು ಯುದ್ಧದಲ್ಲಿ ಮಡಿದನು. ಆತನ ಪತ್ನಿ, ಜಕ್ಕಿಯಬ್ಬೆಯು ನಾಳ್ಗಾವುಂಡಿಯಾಗಿ ಪ್ರಜಾಸ್ತೋಮವನ್ನು ಸಲಹಿದಳು. ಈಕೆಯ ಜೀವನದ ಕೊನೆಯ ದಿನಗಳನ್ನು ವರ್ಣಿಸುವ ಕ್ರಿ.ಶ.ಸು. ೯೧೮ರ ಶಾಸನದ ಮುಖ್ಯಭಾಗ ಹೀಗಿದೆ.

**ಉತ್ತಮ ಪ್ರಭುಶಕ್ತಿಯುಕ್ತೆ ಜಿನೇಂದ್ರ ಶಾಸನಭಕ್ತೆ ಕಾ**
**ನ್ತ್ಯಾತ್ತ ವಿಭ್ರಮೆ ಜಕ್ಕಿಯಬ್ಬೆ ಸಮನ್ತು ನಾಗರಖಣ್ಡಮೆ**
**ಳ್ಚಿತ್ತುಮಂ ವಧುವಾಗಿಯುಂ ನಿಜ ವೀರವಿಕ್ರಮ ಗರ್ಬ್ಬದಿಂ**
**ಪೆತ್ತವಂ ಪ್ರತಿಪಾಲಿಸುತ್ತೊಸದಿವ್ದಿಳಿಟ್ಟಿ ವಸಾನದೊಳ್ ॥**

**ತನು ರುಜೆಯಂ ಪುದುಂಜ್ವುಳಿಸೆ ಸಂಸ್ಕೃತಿಭೋಗಸಾರಮೆನ್ದು ನೀ**
**ಚ್ಚನಿಸಿ ನಿಜಪ್ರಿಯಾತ್ಮಜೆಗೆ ಸನ್ಮತಿಯಂ ಕರೆದಿತ್ತು ಮೋಹಬ**
**ನ್ಧನದ ತೊಡರ್ಪ್ಪಿನೊಳ್ತೊದಟ್ಟು ಮೋಹಿಸಿ ನಿ ....ಬಲ್ಲೆಬನ್ದು ಬ**
**ನ್ದನಿಕೆಯ ತೀರ್ಥದೊಳ್ತೊರದುವಚ್ಚರಿಯಂ.... ಜಕ್ಕಿಯಬ್ಬೆಯಾ ॥**

**ವಸುಜಲರಾಶಿ ವಾಂದಪಂಥಂ ಶಕ ಭು....ತಾಬ್ದ ಸಂಕ್ಯೆ ವ**
**ರ್ತ್ತಿಸೆ ಬಹುಧಾನ್ಯವೆಂಬ ವರಿಷಂ ತ್ರಿಕಮಾಸದ ಕಾಳಪಕ್ಷದೊಳ್ ।**
**ದಸಮಿಯೊಳಾರ್ಕ್ಯವಾರದುದಿತೋದಿತ ವೇಳೆಯೊಳಣ್ಮೆ ಭಕ್ತಿಯಿಂ**
**ಬಸದಿಗೆವನ್ದು ನೋನ್ತಳಮಪೂರ್ಬ್ಬ ತರಙ್ಗದ ಜಕ್ಕಿಯಬ್ಬೆಯಾ ॥**

ಈ ಮೂರು ಪದ್ಯಗಳು 'ವಧುವಾಗಿಯುಂ ನಿಜವೀರವಿಕ್ರಮಗರ್ಬ್ಬದಿಂ' ನಾಡನ್ನು ಪಾಲಿಸಿ ಪ್ರಜೆಗಳನ್ನು ಪೋಷಿಸಿದ ನಾಳ್ಗಾವುಂಡಿ ಜಕ್ಕಿಯಬ್ಬೆಯ ದೈವಭಕ್ತಿಯನ್ನು ಬಣ್ಣಿಸುತ್ತದೆ. ಕರ್ನಾಟಕದ ಆದರ್ಶ ಮಹಿಳೆಯರ ಸಾಲಿನಲ್ಲಿ ನಿಲ್ಲುವ ಈಕೆಯ ವರ್ಣನೆ ಮನೋಹರವಾಗಿದೆ."[೧೧]

**ಕವಿರಾಜ (ಕ್ರಿ.ಶ. ೯೩೦):**

ಧಾರವಾಡ ಜಿಲ್ಲೆಯ, ಶಿಗ್ಗಾವಿ ತಾಲೂಕಿನ, ಕಳಸ ಗ್ರಾಮಕ್ಕೆ ಸಂಬಂಧಿಸಿದ ಒಂದು ಶಿಲಾಶಾಸನದ ಕೊನೆಗೆ[೧೨]

**ಕವಿರಾಜ ವಿಬುಧ**
**ಪ್ರವರಂ ಶ್ರೀ ಕಾಡಿಯೂರಿನಲ್ಲಿಯೇ ಕಮಳೋ ।**
**ದ್ಭವವಂಶಪ್ರೋತ್ತಮರಂ**
**ನವೀನ ವರ್ಣ್ಣನೆಯಿನೆಸೆಯಲಭಿವರ್ಣಿಸಿದಂ ॥**

ಎಂಬ ಪದ್ಯವಿದ್ದು, ಇದರಿಂದ ಶಾಸನಕ್ಕೆ ಸಾಹಿತ್ಯವನ್ನು ಪೂರೈಸಿದವನು ಕವಿರಾಜನೆಂದು ತಿಳಿದುಬರುತ್ತದೆ. ಈ ಕವಿರಾಜನೆಂಬುದು ಬಿರುದಾಗಿದ್ದ ಪಕ್ಷದಲ್ಲಿ, ಈತನಿಗೆ ಪ್ರಾಚೀನನಾಗಿ ಒಬ್ಬ 'ಕವಿರಾಜ'ನೆಂಬ ಕವಿಯಿದ್ದನೆಂದು ಆತನಿಗಿಂತ ತಾನು ಮೇಲು ಎಂದು ಶಾಸನಕವಿ ಹೇಳಿಕೊಂಡಿರುವುದು, ಶಾಸನದಲ್ಲಿ ಕಂಡುಬರುವುದು. ಈತ ಬ್ರಾಹ್ಮಣರನ್ನು ಭಕ್ತಿಯಿಂದ ಭಜಿಸುವುದರಿಂದ ಈತನು ಬ್ರಾಹ್ಮಣ ಕವಿಯಾಗಿರಬೇಕು.

೪ನೇ ಗೋವಿಂದ (ರಾಷ್ಟ್ರಕೂಟ)ನು ರೇವರಾಸ ದೀಕ್ಷಿತ, ವೀಸೋತ್ತರ ದೀಕ್ಷಿತ ಎಂಬ ದಂಡನಾಯಕನಿಗೆ ಕಾಡಿಯೂರನ್ನು ದತ್ತಿಯಾಗಿ ನೀಡಿದುದು ಇದರ ವಸ್ತು. 'ವಿಬುಧಪ್ರವರಂ' 'ನವೀನ ವರ್ಣನೆಯಿನೆಸೆಯಲಭಿವರ್ಣ್ಣಿಸಿದಂ' ಕವಿರಾಜವಚಃ ಪ್ರಭಾವದನ್ತಳಂಕಾರಮುಮ ನೊಳಕೊಣ್ಡ ಜನಗಳಿಂ' ಎಂಬ ಮಾತುಗಳು ಈತನ ಪಾಂಡಿತ್ಯ, ಪ್ರತಿಭೆಗೆ ಸಾಕ್ಷಿಯಾಗಿವೆ.

ಗೊಜ್ಜಿಗದೇವ, ಕಾಡಿಯೂರು, ಕೊಣ್ಡಲಿಗೆರೆ, ಕಾಡಿಯೂರ ಪ್ರಜೆಗಳು, ಕಾಡಿಯೂರ ಇನ್ನೂರ್ವರು, ೪೦ ಪದ್ಯ ಕೆಲ ಗದ್ಯ ತುಣುಕುಗಳಲ್ಲಿ ಬಣ್ಣಿಸುವ ಈ ಶಾಸನವು ಪುಟ್ಟ ಚಂಪೂ ಕಾವ್ಯವೆನಿಸಿದೆ. ಇದಕ್ಕೆ ನಿದರ್ಶನವೆನಿಸುವ ಕೆಲ ಪದ್ಯಗಳು ಹೀಗಿವೆ.

**ಗೊಜ್ಜಿಗದೇವನ ಕುರಿತಾದ ವರ್ಣನೆ :**

**ಪಗೆಗೊಣ್ಡಾಡುವ ಶತ್ರುಭೂಪತಿಗಳಂ ದೊರ್ಗ್ಗರ್ವ್ವದಿಂದೆಱೆದು**
**ಗ್ರಗಜೇಂದ್ರ ಬೆರಸೋವದನ್ತಕನ ಬಾಯೊಳ್ ತೂನ್ತಿ ಮತ್ತಂ ಶರ ।**
**ಣ್ಬುಗಲೆಂದಿರ್ಪ್ಪವನೀಶ್ವರ ಪ್ರತತಿಯಂ ಕೈಕೊಣ್ಡು ಕಾದೆಯ್ದೆ ಗೊ**
**ಜ್ಜಿಗದೇವಂ ನೃಪತುಂಗನೆಂಬಳವನೊಲ್ದಂಗೀಕೃತಂ ಮಾಡಿದಂ ॥**

**ಕಾಡಿಯೂರ ವರ್ಣನೆ :**

**ತುಱುಗಿ ಕವಟ್ತು ಕತ್ತಲಿಪ ಚೂತಕುಜಂಗಳೊಳೊಂದಿ ಕಲಪಿನೊ**
**ಳ್ನೆಱೆದು ರಸಂಗಳಂ ತಳೆದ ಪಣ್ಗೊಲೆಯಂ ಗಿಳಿವಿಣ್ದು ಚುಂಚುವಿಂ ।**
**ದಿಱಿದಡೆ ಸೋರೆ ಸೋನೆಯೊಳೆ ದಾಂಗುಡಿಮಿನ್ದೆಸೆದಿರ್ಪ್ಪುವೊಳ್ಪಿನಿ**
**ನ್ದೆರೆಯನ ಕಾಡಿಯೂರ ಲತೆವಳ್ಳಿಯು ಮಲ್ಲಿಯ ನಾಗವಲ್ಲಿಯುಂ ॥**

**ಕೊಂಡಲಿ ಎಂಬ ಕೆರೆಯ ವರ್ಣನೆ :**

**ಕುಲಗಿರಿಬಿತ್ತಿ (ಭಿತಿ)ಯಿಂದ ಮಱೆವೊಕ್ಕಡೆ ಕೊಣ್ಡ ಸರೋರುಹಾಧರಂ**
**ನೆಲಸಿದವಬ್ಜವಾಹನನೆನಲ್ದಿ ನರಾಜನಿವಾಸಮೂದ ಭೂ ।**
**ತಳಸತಿಗೊಳ್ಪನಾಳ್ದು ನವಮೇಖಳೆಯೆಂಬ ಸಮುದ್ರದನ್ತೆ ಕೊ**
**ಣ್ಡಲಿಗೆಱೆಯೊಪ್ತಿ ತೋವ್ಪದೆನೆ ಬಿಣ್ತೆನೊಳಾವರಿಸಿರ್ದ್ದ ಪೆಂಪಿನೊಳ್ ॥**

**ಕಾಡಿಯೂರ ಪ್ರಜೆಗಳ ವರ್ಣನೆ**

ಮತ್ತ ಮಲ್ಲಿ ಬಡಿವುದುಂ ಬಿಡುವುದುಂ ಚಾಪವಿದ್ಯೆಯೊಳ್, ಕೃತ್ರಿಮಮುಮ
ನಿತ್ಯಮುಮಿನ್ದ್ರಜಾಲದೊಳ್ .... ಸರಳತಿಯುಂ ಬಡತನಮು ಮಬಳಾಮಧ್ಯದೊಳ್,
ನಡುಕಮುಂಮಾಱಿಡಿಯುಂ ಚೂತಮಂಜರಿಯೊಳ್ ಕುಂದುಂ ಕಳಂಕಮುಂ
ಹರಿಣಾಂಕನೊಳ್....ಸೆರೆಯು ಮೇಱುಂ ನೆತ್ತಮಾಡುವರೊಳ್.....
ನಿರೋಧಮುಂ ನಿಷ್ಪರಿಗ್ರಹಮುಂ ತಪೋವೃತ್ತಿಯೊಳ್ ಮಕರಕೇತದಂತೆ
ಮರ್ಯಾದೆಯುಮಂ ಪರ್ವತರಾಜನನ್ತೆ ಪ್ರತಿಪನ್ನತೆಯುಮನುರ್ವ್ವರೆ
ಯನ್ನೆ ಕ್ಷಾನ್ತಿಯುಮಂ ಕವಿರಾಜರಾಜವಚಃ ಪ್ರಭಾವದನ್ತ ಳಂಕಾರಮುಮ
ನೊಳಕೊಣ್ಡ ಜನಂಗಳಿಂ ಮನಂಗೊಳಿಸುತ್ತಮಿರ್ದಪುದು.

**ಕಾಡಿಯೂರ ಇನ್ನೂರ್ವರು :**

ನಿರವದ್ಯವೇದ  ವಿದ್ಯಾ । ಪರಿಣತರತಿ ವಿಷಮಶಬ್ದ ವಿದ್ಯಗಮ ಸ ।
ತ್ವರಿಣತರೆನಿಸಿರ್ದ್ದಿರ್ಣ್ಣೋ । ರ್ವ್ವರ ಚರಣ ವಿಪ್ರಕುಳಂ ವಿಚಿತ್ರಾಭರಣಂ ॥
ವ್ಯಾಕರಣಮರ್ಥಶಾಸ್ತ್ರಾ । ನೀಕಂ ಸಾಹಿತ್ಯವಿದ್ಯೆ ಇತಿಹಾಸಂ ಮಿ ।
ಕ್ಕೇಕಾಕ್ಷರಮಿನಿತರ್ಕ್ಕಂ । ಟೀಕಂ ಬರೆಯಲ್ತಮಗ್ರರಾಭ್ಯಾಸಿಸುವರ್ ॥

ಜಸಮಂತಾಳ್ದಿದಿಳಾಮರ ಪ್ರಚಯಮತ್ಯುತ್ಸಾಹದಿಂ ಗೆಯ್ದು ಬ
ಣ್ಣಿಸೆ ತಮ್ಮನ್ನತಿ ತಮ್ಮ ಸತ್ಯದೆಸಕಂ ತಮ್ಮೋಜೆ ತಮ್ಮಾರ್ಪ್ಪು ತ
ಮ್ಮ ಸದಾಚಾರತೆ ತಮ್ಮ ನಿರ್ಮಳತೆ ತಮ್ಮೌಚಿತ್ಯ ಸಂಪತ್ತಿ ತ ।
ಮ್ಮ ಸಮಗ್ರಾಸ್ಪದಮೊಪ್ಪೆ ವರ್ತಿಸುತಮಿರ್ದ್ದರ್ಣ್ಣೊರ್ಪ್ಪೊಡಿಣ್ಣೂರ್ವರುಂ ॥

"ವಿಷಯ ವಿನ್ಯಾಸದ ರೀತಿ, ವರ್ಣನೆಯ ವೈವಿಧ್ಯ, ಇವುಗಳಿಂದ ಈ ಶಾಸನ ಚಂಪೂವಿನ ಸಣ್ಣ ಮಾದರಿಯೆನಿಸಿದೆ. ಪಂಪನ ಕವಿತ್ವದೊಂದು ಮುಖವಾದ ಮಾರ್ಗಶೈಲಿಗೆ ಇಲ್ಲಿ ಗದ್ಯ ಪದ್ಯಗಳು ಯಾವ ವಿಧದಲ್ಲಿಯೂ ಕಡಿಮೆಯಿಲ್ಲ. ಕನ್ನಡ ಕಾವ್ಯಗಳಲ್ಲಿ ಬಳಸಲಾದ ಪರಿಸಂಖ್ಯಾಲಂಕಾರಕ್ಕೆ ಈ ಗದ್ಯ ಮಾತೃಕೆಯೆನಿಸಿದೆ. ಪಂಪಪೂರ್ವದ ಕನ್ನಡಸಾಹಿತ್ಯ ಸ್ವರೂಪಕ್ಕೆ ಈ ಶಾಸನವೊಂದು ಉತ್ತಮ ಉದಾಹರಣೆಯಾಗಿದೆ."[೧೩]

**ಬೀರಯ್ಯ (ಕ್ರಿ.ಶ. ೯೩೦):**

ಮೈಸೂರು ಜಿಲ್ಲೆಯ, ಹೆಗ್ಗಡದೇವನಕೋಟೆ ತಾಲೂಕಿನ, 'ಹಿರನಂದಿ'[೧೪] ಶಾಸನವು ಗಂಗಮನೆತನದ ಎರೆಯಪ್ಪನ ಮಕ್ಕಳಾದ ರಾಚಮಲ್ಲ ಮತ್ತು ಭುವನಾದಿತ್ಯ (ಭೂತುಗ)ರ ಯಾದವೀ ಕಲಹದಲ್ಲಿ ಮಡಿದ ವೀರರನ್ನು ಸ್ಮರಿಸುವ ಒಂದು ವೀರಗಲ್ಲು 'ಬರೆದೊಂ ಬೀರಯ್ಯ' ಎಂಬ ವಾಕ್ಯವನ್ನೊಳಗೊಂಡಿದೆ. ಶಾಸನದ ಪೂರ್ಣ ಪಾಠ ಹೀಗಿದೆ.

"ಸ್ವಸ್ತಿ ಶ್ರೀ ಎಱೆಯಪ್ಪ ವೆಡಙ್ಗಂ ಸರ್ಗ್ಗಮೇಱಿದೊಡೆ
ಡೆಙ್ಗನ ಕಿರೆಯ ರಾಚಮಲ್ಲಮನ್ನಿ ಬೇಡಿದೊಳರೆ ನೆಲನುಂ ಭಣ್ಡಾರವುಮಂ
ಕೊಟ್ಟಾನೆನ್ದು ಬನ್ದು ಭುವನಾದಿತ್ಯಂ ಬರೆ ಅಯ್ಯಾಸಮಂತರುಂ ಪೆರ್ಗ್ಗಡೆ
ಗಳುಂ ಬಯಲ್ನಾಡನು ರಾಚಮಲ್ಲಂಗಲ್ಲದೆ ರಾಜ್ಯಮಂ ಗೇಯಲಿಯಾ
ಮೆನ್ದು ಭುವನಾಯ್ತನ ಮಾಗುಣ್ಡಿಯೊಳ್ಕಾದಿದನ್ದು ನಿನ್ದಿಯ ಕೊರ
ನ್ತಿಯರಸರ ಮಕ್ಕಳ್ನಾಲ್ನಾಲ್ವರು ನೆಲದಱಿಬಿನೊಳ್ಕಾದಿಸ.... ಕಲಿಗೇಱ
ಯ್ಯ ಈ ಕಲ್ಲನಿಱಿನಿಸಿದೊ ಪಿರಿಯಮಗಂ ಸೆರಾಮ ಈ ಕಲ್ನಾಡ
ನಟಿದೊ ಕವಿಲೆಯುಂ ಬಾರಣಾಸಿಯುಮನಟಿದೊ ಬರೆದೊಂ ಬೀರಯ್ಯ
ಪಱಿದವು ಬಱಿಮುರಿದ ........... ನಿಟ್ಟೆ
ಲ್ವೆರಡು ತಱೆದವು ..........ಮಾಗೆ ಸೂಸಿದವು ।
ಕರುಳ್ಗೊಳೆ. ಟಿದವುರದಿರಾ
ಮಿಱಿದರಾ......................ವಿನಾಂ ॥

ಈ ಶಾಸನವು ಅರಸು ಮಕ್ಕಳ ಮುರಿದ ಮನಸ್ಸು ಅದರಿಂದ ಉದ್ಭವಿಸಿದ ಯುದ್ಧ ಪರಿಣಾಮಗಳನ್ನು ಹೇಳುತ್ತದೆ. ಕೊನೆಯ ತ್ರುಟಿತ ಪದ್ಯ ವೀರ ರಸಕ್ಕೆ ಉತ್ತಮ ಉದಾಹರಣೆಯಾಗಿದ್ದು ಘೋರ ಯುದ್ಧದ ನೈಜ ಚಿತ್ರವನ್ನು ಕಣ್ಣಿಗೆ ಕಟ್ಟುತ್ತದೆ.

**ಕಬ್ಬದ ನಾಗಮಯ್ಯ (ಕ್ರಿ.ಶ. ೯೩೧):**

ಕೋಲಾರ ಜಿಲ್ಲೆಯ, ಚಿಂತಾಮಣಿ ತಾಲೂಕಿನ, ಕುರಬೂರು[೧೫] ಗ್ರಾಮದ ಶಾಸನದ ಕೊನೆಗೆ 'ಬರೆದೊಂ ಕಬ್ಬದ ನಾಗಮಯ್ಯ' ಎಂಬ ವಾಕ್ಯವಿದೆ. ಇಲ್ಲಿ 'ಕಬ್ಬದ' ಎಂಬುದು ಈತನೊಬ್ಬ ಕವಿಯೆಂದು ಸೂಚಿಸುತ್ತದೆ. ಇದೇ ತಾಲೂಕಿನ ೪೪ನೇ ಶಾಸನದ ಕೊನೆಯ 'ಬರೆದೊಂ ನಾಗಮಯ್ಯ' ಎಂಬುವನು ಈತನೇ ಆಗಿರಬಹುದು ಎಂದು ಎಂ.ಎಂ. ಕಲಬುರ್ಗಿಯವರು ಊಹಿಸಿದ್ದಾರೆ.[೧೬] ನೊಳಲು ವಂಶದ ಬೀರನೊಳಂಬನ ಸಮಯದಲ್ಲಿ ಹುಟ್ಟಿದ ಈ ಎರಡೂ ಶಾಸನಗಳ ಕಾಲ ಕ್ರಿ.ಶ. ೯೩೧ ಪ್ರಸ್ತುತ ಶಾಸನ (ನಂ. ೪೩) ರ ಪೂರ್ಣಭಾಗ ಇಂತಿದೆ.

"ಸ್ವಸ್ತಿ ಶಕ ನೃಪಕಾಲಾತೀತ ಸಂವತ್ಸರಗಳ ಎಂಟನೂಱ ಐವತ್ತಮೂಱ
ನೇಯರೌದ್ರಿಯೆಂಬ ಸಂವತ್ಸರಂ ಪ್ರವರ್ತಿಸುತ್ತಿರೆ ಸ್ವಸ್ತಿ ಸಮಧಿಗತ ಪಂಚ
ಮಹಾಶಬ್ದ ಪಲ್ಲವಾನ್ವಯ ಶ್ರೀ ಪೃಥ್ವಿವೀ ವಲ್ಲಭ ಪಲ್ಲವಕುಲತೀಲಕ ಶ್ರೀ
ಮತ್‌ಬೀರನೊಟಿಂಬಾಧಿರಾಜರ್ ಸುಖಾನುರಾದಿಂದ ದುಷ್ಟ ನಿಗ್ರಹ ವಿಶಿಷ್ಟ
ಪರಿಪಾಲನಂಗೆಯ್ದು ಪ್ರಿಥಿವಿ ರಾಜ್ಯಂಗೆಯ್ಯುತ್ತಿರೆ ಕಾಣ್ವಾಯಾನ ಗೊತ್ತ್ರಾ
ಕೊಮಾರಮಂಗಳಮೊಡೆಯ ನಾಗಮಯ್ಯನ ಮಗಂ ಕಣ್ಣಯ್ಯನುಂ ಸಂಕರ
ಯ್ಯನುಂ ಕುಱುಂಬೂರ ಮಹಾಜನಂ ನೂಱುಣ್ಬರ್ಗ್ಗ ಪದಿನೈದು ಗದ್ಯಾಣ
ಪೊನ್ನ ಕೊಟ್ಟರ್ ನಿತ್ಯಸ್ತಿತಿ ಒಂದು ಪರಿವಿಡಿ ಕುರಬೂರ ಗುಟ್ಟೆಯೊಳ್

**ಆರ್ ಇಟಿಕ್ಕೊಡಂ ಚನ್ದ್ರಾದಿತ್ಯರ್ಕ್ಕಳುಳ್ಳಿನಂ ಸಲ್ವುದಾರಿತ್ತೋರ ಇಳುವಿದಕ್ಕೆ**
**ಸಾಕ್ಷಿ ನರಶಾಸನಂ ನೂಱಿೖಬ್ಬರೆ ಇವರ್ಗ್ಗಳ ಉಭಯ ಸಮ್ಮತದೆ ಬರೆದೊಂ**
**ಕಬ್ಬದ ನಾಗಮಯ್ಯ ಈ ದರ್ಮ್ಮಮನ್ ಅಟಿದೊಂ ವಾರಣಾಸಿಯ ನಟಿದೊಂ"**

ಇದು ಸಾಹಿತ್ಯಿಕ ಅಂಶವಿರುವ ಒಂದು ಸರಳಗದ್ಯ. ಹಿಂದೆ ಹೇಳಲಾದ ಕಿಗ್ಗಾವಿ ಶಾಸನದ ಗದ್ಯ ಸಮಾನವಾಗಿದ್ದು ಈ ಅವಧಿಯ ನಿತ್ಯೋಪಯೋಗಿ ಬರವಣಿಗೆಯ ಗದ್ಯಕ್ಕೆ ಇವು ನಿದರ್ಶನವೆನಿಸಿವೆ. 'ಕಬ್ಬದ ನಾಗಮಯ್ಯ' ಕವಿಯಾಗಿದ್ದರೂ ಶಾಸನದ ಬರವಣಿಗೆ ಸರಳ ಹಾಗೂ ಸಾಮಾನ್ಯವಾಗಿದೆ.

**ಕಾಚಯ್ಯ (ಕ್ರಿ.ಶ. ೯೩೭)**

ಚಿತ್ರದುರ್ಗ ಜಿಲ್ಲೆಯ, ಚಿತ್ರದುರ್ಗ ತಾಲೂಕಿನ, ಇಸಾಮುದ್ರದ[೧೭] ಕಲ್ಲೇಶ್ವರ ದೇವಾಲಯದ ಒಂದು ಶಾಸನದ ಕೊನೆಯಲ್ಲಿ ಕನ್ನರನಭಿಮತದೊಳೆ ಶಾಸನಮಂ ಬರದೊಂ ಸೇನಬೋವಂ ಕಾಚಯ್ಯ' ಎಂದಿರುವುದರಿಂದ ಮೂರನೇ ಕೃಷ್ಣನ ಅಭಿಮತದಂತೆ ಕಾಚಯ್ಯ ಶಾಸನಕವಿ ಇದನ್ನು ರಚಿಸಿದ್ದಾನೆ. ಕವಿಯ ವೈಯಕ್ತಿಕ ವಿವರಗಳಿಲ್ಲ. ಶಾಸನದ ಕಾಲ ಕ್ರಿ.ಶ.೯೩೭ ಈ ಕಾಲಾವಧಿಯಲ್ಲಿ ರಾಷ್ಟ್ರಕೂಟ ಅಮೋಘವರ್ಷ II ನ ಸಾಮಂತ ಕನ್ನರಯ್ಯ (ಕೃಷ್ಣ)ನು 'ಗೋಗ್ಗಿ ದೇಗುಲದ ಧರ್ಮರಾಶಿ ಭಟಾರರ ಕಾಲಂ ಕರ್ಚಿ'ದತ್ತಿ ಬಿಟ್ಟುದು ಇದರ ವಿಷಯ. ರಾಷ್ಟ್ರಕೂಟರ ವಂಶ ಚರಿತ್ರೆಯನ್ನು ಕನ್ನರಯ್ಯನ ಕೀರ್ತಿಯನ್ನು ಕೊಂಡಾಡುವ ಈ ಶಾಸನ ಪದ್ಯಗಳು ಹೀಗಿವೆ.

**ಅಜಸುತನತ್ರಿಯತ್ರಿಯ ಸುತಂ ಶಶಿಸೋಮಸುತಂ ಬುಧಂ ಬುಧಾ ।**
**ನ್ವಜನಜಿತಂ ಪುರೂರವನುದಾರ ಪುರೂರವನನ್ದನಂ ಜಗ ॥**
**ದ್ವಿಜಿತ ಮಹಾಬಳನ್ನಹುಷನಾ ನಹುಷಂಗೆ ಮಗಂ ಯಯಾತಿ ಭೂ ।**
**ಭೂಜನಮಳಂ ಯಯಾತಿಗೆ ಮಗಂ ಮಗಂ ಯದುಯಾದವರಾತನನ್ವಜರ್ ॥**

**ಯಾದವ ಕುಲದೊಳ್ಬಲರುಂ**
**ಮೇದಿನಿಯಂ ಸುಖದಿನಾಳ್ದರವರಿಂ ಬಟಿಯಂ ।**
**ಶ್ರೀದಯ್ತನ್ದನ್ತಿಗನುದಿ**
**ತೋದಿತಮಾತನಿನ್ದನಖಿಳ ರಾಜ್ಯ ಶ್ರೀಯೋಳ್ ॥**

**ದನ್ತಿಗನ ಪುತ್ರರಂ ರಾ**
**ಜ್ಯಾನ್ತರಮಾದನ್ದು ಕನ್ನರಂ ಕಿಱಿಯಮ್ಮಂ ।**
**ಸನ್ತಾನದೊಳಿಟ್ಟಿಬಟಿ**
**ಕನ್ತಾತನ ತನಯನೊಪ್ಪೆ ನಿರುಪಮದೇವಂ ॥**

ಆ ನಿರುಪಮಂಗೆ ಪುಟ್ಟಿದ
ನಾನತರಿಪು ನೃಪಕದಂಬಕಂ ಜಗತುಂಗಂ ।
ತಾನಾ ಜಗತುಂಗನ ಮಗ
ನೀ ನೆಲದೊಳ್ನೆಗಟ್ದಿ ಮೋಘವರ್ಷಮಹಿಶಂ ॥

ನೆಗಟ್ದಿಟ್ದಿ ಮೋಘವರ್ಷನ
ಮಗನೆನ್ತುಂ ದೇವನೆನಿಸಿದಾ ದೇವನ ಪೆ
ರ್ಮಗನಿದ್ದರನಾತಂ ಕಲಿ
ಯುಗದೊಳ್ಕಲಿ ಚಾಗಿಯೆನಿಸಿದಂ ವಿಕ್ರಮದಿಂ ॥

ಇನ್ದರನ ಮಗನ್ದೇವ
ನ್ತನ್ದೆಯವೋಲ್ನೆಗಟ್ದಿ ದೇವರಾಜ ಸುತಂಗ ।
ಭೀನ್ಧರನಾತಂನ ಮಗನಭಿ
ವನ್ದಿತಪಾದನಿಜೆವ ಕನ್ನರಂ ಧರ್ಮಪರಂ ॥

ಕನ್ನರನನ್ನು ವರ್ಣಿಸುವ ಪದ್ಯ

ಮನುಮಾರ್ಗಂ ಚರಿತಂ ದ್ವಿಷತ್ಕುಳಹರಂ ಶೌರ್ಯಂ ಜಗದ್ವ್ಯಾಪಿ ಶಾ
ಸನಬದ್ಧಂ ನುಡಿಕಲ್ಪವೃಕ್ಷಮೆನಿಕುಂ ಸನ್ಮಾನದಾನಂ ಶಶಾಂ ।
ಕನಿಭಿಂ ಕೀರ್ತಿ ಸಮನ್ತನನ್ತ ಗುಣದಿನ್ದಿಂ ಕನ್ನರಂನ್ದವರ್ಮನ
ನ್ದನನಿಂ ರಾಘವನಿನ್ದಿಳೀಪನೃಪನಿಜಮ್ಮಾಂಧಾತನಿನ್ದಗ್ಗಳಂ ॥

ರಾಷ್ಟ್ರಕೂಟರ ಸುದೀರ್ಘ ವಂಶಾವಳಿ:

ಪಳಯಾಜಿಶೊಳ್ದೇವನಾಟನ್ದಿಜೆದು ಮಡಿಪಿದೊ ಪಾಣ್ಡ್ಯ ನನ್ದೇವ ಪುತ್ರಂ
ಗಳಕೊನ್ದಂ ವೀರನಂ ಶ್ರೀಪುರದೊಳಿಜೆದೊನಿನ್ದ್ರಾತ್ಮಜಂ ಪಲ್ಲವೇಶ ।
ರ್ಕ್ಗಳನಿನ್ದ್ರಂ ಗೆಲ್ದನೀ ಕನ್ನರನಧಿಕ ಬಳಂ ಗಂಗಪೆರ್ಮಾಳಿಯಂ ಕೊ
ನ್ದಳೆಯಂ ಭೂವಲ್ಲಭಂಗಿತ್ತಿಜೆದು ನೆಗಟ್ದರೀ ರಾಷ್ಟ್ರಕೂಟಾನ್ವಯರ್ಕ್ಗಳ್ ॥

ಇದು ಕವಿಯು ವಂಶಾವಳಿಯನ್ನು ಅಡಕಗೊಳಿಸಿ ಹೇಳಬಹುದಾದ ಪಂಪನಂತೆ ಸಂಗ್ರಹಶೀಲ ಗುಣವುಳ್ಳದ್ದಾಗಿದೆ.

**ಪೊನ್ನ (ಕ್ರಿ.ಶ. ೯೫೦)**

ಮಂಡ್ಯ ಜಿಲ್ಲೆ, ಮದ್ದೂರು ತಾಲೂಕಿನ, ಆತಕೂರು ಗ್ರಾಮದ ಚಲ್ಲೇಶ್ವರ ದೇವಾಲಯದ ಮುಂದಿರುವ ಶಾಸನವನ್ನು[೧೮] ಕವಿಚಕ್ರವರ್ತಿ ಪೊನ್ನ ರಚಿಸಿದನೆಂದು ತಿಳಿದುಬರುತ್ತದೆ. ಇದಕ್ಕೆ ಆಧಾರವೆಂದರೆ ಈ ಶಾಸನದಲ್ಲಿರುವ ಎರಡು ಚಂಪಕ ಮಾಲಾವೃತ್ತಗಳು. ಇವು ಪೊನ್ನನ ಅನುಪಲಬ್ಧ ಕೃತಿ. 'ಭುವನೈಕ ರಾಮಾಭ್ಯುದಯ' ಮಹಾಕಾವ್ಯದಲ್ಲಿವೆಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೧೯]

ಪೊನ್ನನು ಪಂಪ, ರನ್ನರಂತೆ ಒಂದು ಲೌಕಿಕ ಒಂದು ಆಗಮಿಕ ಕೃತಿಯನ್ನು ರಚಿಸಿದ್ದು ಆಗಮಿಕ ಕೃತಿ ಶಾಂತಿಪುರಾಣದಲ್ಲಿ ಶಾಂತಿನಾಥ ತೀರ್ಥಂಕರನ ಚರಿತ್ರೆಯನ್ನು ರಚಿಸಿದ್ದಾನೆ. ಲೌಕಿಕ ಕೃತಿಯಾದ "ಭುವನೈಕ ರಾಮಾಭ್ಯುದಯ'ದಲ್ಲಿ ತನ್ನ ಆಶ್ರಯದಾತ ೩ನೇ ಕೃಷ್ಣನನ್ನು ರಾಮಾಯಣದ ಶ್ರೀ ರಾಮಚಂದ್ರನೊಂದಿಗೆ ಸಮೀಕರಿಸಲಾಗಿದೆ. ಟಿ.ವಿ. ವೆಂಕಟಾಚಲ ಶಾಸ್ತ್ರೀಯವರು ೩ ನೇ ಕೃಷ್ಣನಿಗೆ 'ಭುವನೈಕರಾಮ' ಎಂಬ ಬಿರುದಿತ್ತೆಂದು 'ತಿಸಟ್ಟಿ ಮಹಾಪುರಿಸ ಗುಲಾಲಂಕಾರ' ಎಂದು ಅಪಭ್ರಂಶ ಭಾಷೆಯ ಜೈನ ಪುರಾಣವನ್ನು ರಚಿಸಿದ ಪುಷ್ಪದಂತನೆಂಬ ಕವಿಯ ಮಾತಿನಿಂದ ತಿಳಿಯುತ್ತದೆ ಎಂದು ಹೇಳುತ್ತಾರೆ.

ಪೊನ್ನ ೩ ನೇ ಕೃಷ್ಣನ ಆಸ್ಥಾನ ಕವಿಯಾಗಿದ್ದು, ಸು.ಕ್ರಿ.ಶ. ೯೫೦ ರಲ್ಲಿದ್ದನೆಂದು ತಿಳಿದುಬರುತ್ತದೆ. ಈ ಶಾಸನದಲ್ಲಿ ಗಂಗವಂಶದ ದೊರೆ ಇಮ್ಮಡಿ ಭೂತುಗನ ಬಳಿ ಅಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದ ಮಣಲೆರನು ತಮಿಳುನಾಡಿನ 'ತಕ್ಕೋಲಂ' ಎಂಬಲ್ಲಿ ನಡೆದ ಯುದ್ಧದಲ್ಲಿ ರಾಷ್ಟ್ರಕೂಟ ಚಕ್ರವರ್ತಿ ೩ ನೇ ಕೃಷ್ಣನ ಪರವಾಗಿ ಶೌರ್ಯದಿಂದ ಹೋರಾಡಿ ಅವನ ಮೆಚ್ಚುಗೆ ಗಳಿಸುತ್ತಾನೆ. ಮೆಚ್ಚುಗೆಯ ಗುರುತಾಗಿ ಚಕ್ರವರ್ತಿ ಕೃಷ್ಣನಿಂದ 'ಕಾಳಿ' ಎಂಬ ನಾಯಿಯನ್ನು ಕೇಳಿ ಪಡೆಯುತ್ತಾನೆ. ಮುಂದೆ ಬೇಟೆಯ ಒಂದು ಸಂದರ್ಭದಲ್ಲಿ ಆ ನಾಯಿಯು ಹಂದಿಯೊಂದರೊಡನೆ ಹೋರಾಡಿ ಮಡಿಯುತ್ತದೆ. ಇದರ ಜ್ಞಾಪಕಾರ್ಥವಾಗಿ ಆತಕೂರಿನ ಚಲ್ಲೇಶ್ವರ ದೇವಾಲಯದ ಮುಂದೆ ಸ್ಮಾರಕದ ಕಲ್ಲನ್ನು ನೆಡಿಸಿ ಭೂಮಿಯನ್ನು ದಾನ ನೀಡಿದ್ದನ್ನು ವಿವರಿಸಲಾಗಿದೆ.

ಈ ಸಂದರ್ಭದಲ್ಲಿ ಮಣಲೆರನ ಶೌರ್ಯ ಪ್ರದರ್ಶನವನ್ನು ಎರಡು ಚಂಪಕ ಮಾಲೆಯಲ್ಲಿ ಕಣ್ಣಿಗೆ ಕಟ್ಟುವಂತೆ ಕವಿ ಚಿತ್ರಿಸಿದ್ದಾನೆ.

**ಉರದಿದಿರಾನ್ತ ಚೋೞ ಚತುರಙ್ಗಬಲಙ್ಗಳನಟ್ಟಿಮುಟ್ಟಿತ**
**ೞ್ತಿರೆವೆಡೆ ಗೋರ್ವ್ವರಪ್ಪೊಡ ಮಿದಿರ್ಚ್ಚುವ ಗಣ್ಡರನಾಮ್ಪೆವೆನ್ದುಪೊ**
**ಚ್ಚರಿಸುವ ಬೀರರಂ ನೆಱೆಯ ಕಾಣೆಮೆ ಚೋೞನೆ ಸಕ್ಕಿಯಾಗೆ ತ**
**ೞ್ತಿರಿದುದನಾಮ ಕಣ್ಡೆವೆನೆ ಮೆಚ್ಚದೊರಾರ್ರ್ಸಗರ ತ್ರಿನೇತ್ರನಂ**

**ನರಪತಿ ಬೆನ್ನೊೞಿರ್ದನಿಧಿ ರಾಸ್ತುದು ವೈರಿ ಸಮೂಹಮಿಲ್ಲಿಮ**
**ಚ್ಚರಿಸುವರೆಲ್ಲರುಂ ಸೆರಗುವಾರ್ದ ಪೊರಿನ್ತಿರೆನೆನ್ದುಸಿಙ್ಗದ**
**ನ್ತಿರೆ ಹರಿ ಬೀರಲಕ್ಷ್ಮಿ ನೆವಾಗಿರೇ ಚೋೞನ ಕೋಟೆ ಯಮ್ಬುಸಿ**
**ನ್ಫುರದ ಶಿರಾಗ್ರಮಂ ಬಿರಿಯೆ ಪೊಯ್ದನೆಲೇ ಕದನೈಕಶೂದ್ರಕಂ**

ಕುದುರೆ ವೀರಲಕ್ಷ್ಮೀ ಸಹಾಯಕ್ಕಿರಲು ಕದನೈಕ ಶೂದ್ರಕನೆನಿಸಿದ ಮಣಲೆರನು ಚೋಳರ ಕೋಟೆ ಎಂಬ ಆನೆಯ ಕುಂಬ ಸ್ಥಳವನ್ನು ಸಿಂಹದ ಹಾಗೆ ಹಾರಿ ಹೊಡೆದನೆಂದು ಹೇಳಲಾಗಿದೆ.

ಮುಮ್ಮಡಿ ಕೃಷ್ಣನ ಜೂರಾ ಪ್ರಶಸ್ತಿ ಶಾಸನವನ್ನು ಪೊನ್ನ ಕವಿ ರಚಿಸಿದ್ದಾನೆಂದು ತಿಳಿದುಬರುತ್ತದೆ. ಮುಮ್ಮಡಿ ಕೃಷ್ಣನು ಪೊನ್ನನಿಗೆ ಕವಿಚಕ್ರವರ್ತಿ ಎಂಬು ಬಿರುದು ನೀಡಿ, ಆಶ್ರಯಕೊಟ್ಟಿದ್ದನು. ಪೊನ್ನ ತನ್ನ ಕೃತಿಗಳಲ್ಲಿ ೩ ನೇ ಕೃಷ್ಣನನ್ನು ಮನದುಂಬಿ ವರ್ಣಿಸಿದ್ದಾನೆ. ಜೂರಾ ಪ್ರಶಸ್ತಿ ಶಾಸನ[೨೦] ಮೂರನೇ ಕೃಷ್ಣನು ಉತ್ತರ ಭಾರತದ ಮೇಲೆ ದಂಡಯಾತ್ರೆ ಕೈಗೊಂಡಿದ್ದ ಸಂದರ್ಭದಲ್ಲಿ ಹಾಕಿಸಿದ ಒಂದು ವಿಶಿಷ್ಟ ದಾಖಲೆಯಾಗಿದೆ. ಈ ಶಾಸನದಲ್ಲಿರುವ ಪದ್ಯಗಳು ಬಹುಶಃ ಪೊನ್ನನ ಅನುಪಲಬ್ಧ ಕೃತಿ ಭುವನೈಕರಾಮಾಭ್ಯುದಯದ ಕೃತಿಯಲ್ಲಿರಬಹುದು. ಪೊನ್ನನು ಶಾಸನ ಕವಿ ಮಾತ್ರವಲ್ಲದೇ ಸಾಹಿತ್ಯ ಕವಿಯೂ ಆಗಿ ಕನ್ನಡದಲ್ಲಿ ಶಾಂತಿಪುರಾಣವನ್ನು ರಚಿಸಿದ್ದಾನೆ. ಪೊನ್ನನ್ನು ವೆಂಗಿಮಂಡಲದ ಪುಂಗನೂರಿನವನಾಗಿದ್ದು, ಈತನಿಗೆ 'ಕುರುಳ್ಗಳಸವಣ' ಎಂಬ ಬಿರುದಿತ್ತು. ಈತನ ಗುರು 'ದಿನಚಂದ್ರದೇವ ಶಾಂತಿಪುರಾಣವಲ್ಲದೆ ಜಿನಾಕ್ಷರಮಾಲೆ' ಎಂಬ ಜಿನನನ್ನು ಸ್ತುತಿ ಮಾಡಿರುವ ಕೃತಿಯನ್ನು ರಚಿಸಿದ್ದಾನೆ.

**ಜಿನವಲ್ಲಭ (ಕ್ರಿ.ಶ. ೯೫೦)**

ಆಂಧ್ರಪ್ರದೇಶದ, ಕರೀಂನಗರ ಜಿಲ್ಲೆಯ, ಕುರ್ಕ್ಯಾಲ ಗ್ರಾಮದ ಸಮೀಪದಲ್ಲಿರುವ ಬೊಮ್ಮಲಮ್ಮಗುಡ್ಡದ ಮೇಲಿನ ಬಂಡೆ ಶಾಸನದಲ್ಲಿ[೨೧] ಕನ್ನಡದ ಆದಿಕವಿ ಪಂಪನ ತಮ್ಮ ಜಿನವಲ್ಲಭನು ರಚಿಸಿದನೆಂದು ತಿಳಿದುಬರುತ್ತದೆ. ಈ ಶಾಸನವನ್ನು 'ಕುರ್ಕ್ಯಾಲ' ಶಾಸನವೆಂತಲೂ, 'ಗಂಗಾಧರಂ' ಶಾಸನವೆಂತಲೂ, ಬೊಮ್ಮಲಮ್ಮ ಗುಟ್ಟದ ಶಾಸನವೆಂತಲೂ ಪ್ರಸಿದ್ಧಯಾಗಿದೆ. ಈ ಶಾಸನದಲ್ಲಿ ಕನ್ನಡ, ಸಂಸ್ಕೃತ, ತೆಲುಗು, ಭಾಷೆಯ ಪದ್ಯಗಳಿದ್ದು ಇದರ ಕಾಲವನ್ನು ಕ್ರಿ.ಶ. ೯೫೦ ಎಂದು ವಿದ್ವಾಂಸರು ಗುರ್ತಿಸಿದ್ದಾರೆ. ಈ ಶಾಸನದಲ್ಲಿ 'ಬೋಧನದ' ರಾಜಧಾನಿಯಿಂದ ಆಳುತ್ತಿದ್ದ 'ವೇಮುಲವಾಡ'ದ ಚಾಲುಕ್ಯರ ಇಮ್ಮಡಿ ಅರಿಕೇಸರಿಯನ್ನು ಉಲ್ಲೇಖಿಸಿದೆ. ಪಂಪನ ನಿಸಿಧಿ ಶಾಸನವಾದ ಈ ಶಾಸನದಲ್ಲಿ ಪಂಪನ ವಿಕ್ರಮಾರ್ಜುನ ವಿಜಯದಲ್ಲಿ ದೊರೆಯದೇ ಇರುವ ಅನೇಕ ಅಂಶಗಳು ಇಲ್ಲಿ ದೊರೆಯುತ್ತವೆ. ಪಂಪ ತನ್ನ ಕೃತಿಗಳಲ್ಲಿ ಪಂಪ ತನಗೆ ಒಬ್ಬ ತಮ್ಮನಿದ್ದ ವಿಚಾರವನ್ನು ಹೇಳಿಲ್ಲ. ತಂದೆ ತಾಯಿಯರ ಬಗ್ಗೆಯೂ ಪ್ರಸ್ತಾಪವಿಲ್ಲ. ಈ ಶಾಸನದಿಂದ ಪಂಪನ

ತಮ್ಮ 'ಜಿನವಲ್ಲಭ'ನೆಂದೂ ತಾಯಿ 'ಅಬ್ಬಣಬ್ಬೆ' ತಂದೆ 'ಭೀಮಪ್ಪಯ್ಯ' ಎಂಬ ಮಹತ್ವದ ವಿಚಾರಗಳು ಹೊರಬಂದಿವೆ.

ಜಿನವಲ್ಲಭನು ತಾನು ಸುಕವಿಯಾಗಿದ್ದವನೆಂದು ಹೇಳಿಕೊಂಡಿದ್ದಾನೆ. ಇದರಂತೆ ಜಿನವಲ್ಲಭ ಕವಿಯಾಗಿದ್ದ ಎಂಬುದಕ್ಕೆ ಪೂರಕವಾಗಿ ಜಿನವಲ್ಲಭನ ತೆಲುಗು ಕೃತಿಯೊಂದು ಆಂಧ್ರಪ್ರದೇಶದಲ್ಲಿ ದೊರತಿದೆ. ಈ ಶಾಸನದಿಂದ ಜಿನವಲ್ಲಭನು ಕನ್ನಡ, ತೆಲುಗು, ಸಂಸ್ಕೃತ ತ್ರಿಭಾಷಾ ಕವಿಯಾಗಿದ್ದನೆಂಬುದು ತಿಳಿದುಬರುವುದು.

ಜಿನವಲ್ಲಭನು ಪಂಪನಂತೆ ತನ್ನ ಪೂರ್ವಜರ ಬಗ್ಗೆ ಹೀಗೆ ಹೇಳಿದ್ದಾನೆ. ಬೆಂಗಿನಾಡ ಸಪ್ತಗ್ರಾಮದೊಳಗಣ, ವೆಂಗಿಪಟು ಕಮ್ಮೆ ಬ್ರಾಹ್ಮಣನೂ; ಜಮದಗ್ನಿ ಪಂಚಾರ್ಷೇಯ ಶ್ರೀವತ್ಸಗೋತ್ರದವನೂ ಗುಣ್ಡಿಕರ ನಿಡುಂಗೋಣ್ಡೆಯ ಅಭಿಮಾನಚಂದ್ರನ ಮೊಮ್ಮಗ. ತನ್ನ ತಂದೆಯ ಊರು ಈಗಿನ ಆಂಧ್ರಪ್ರದೇಶದ ಗುಂಟೂರು. ತಾಯಿ ಅಬ್ಬಣಬ್ಬೆ ಈಕೆ ಧಾರವಾಡ ಜಿಲ್ಲೆಯ ಬೆಳ್ವಲದ ಅಣ್ಣೀಗೆರೆಯ 'ಜೋಯಿಸಸಿಂಘನ' ಮೊಮ್ಮಗಳು. 'ಜಿನವಲ್ಲಭ'ನ ಗುರು 'ಜಯಣಂದಿ ಸಿದ್ಧಾಂತ ಭಟಾರ' ಇವರು 'ಕೊಂಡಕುನ್ದೆಯ 'ದೇಸಿಗಣ'ದ 'ಪೊತ್ತಗೆಯ' ಬಳಿಯ ಪಂಡರಂಗವಲ್ಲಿ ಪರಂಪರೆಗೆ ಸೇರಿದವರು.

ವೆಂಗಿಪಳು ಅಗ್ರಹಾರದ ಮೂಲ ನಿವಾಸಿಯಾದ ಇವರ ಮನೆತನವು ಅಭಿಮಾನಚಂದ್ರನ ಕಾಲದಲ್ಲಿ ಈ ಸಪ್ತಗ್ರಾಮಗಳಲ್ಲಿ ಒಂದಾದ, ಗುಂಡೀ ನದಿ ತೀರದ ನಿಡುಗುಂಡಿಗೆ ಬಂದು ನೆಲೆಸಿದ್ದನ್ನು, ಈ ಶಾಸನವು ತಿಳಿಸುತ್ತದೆ. ಈ ವೆಂಗಿಪಟು ನಿಡುಂಗುಂಡೆಗಳು ಈಗಿನ ಆಂಧ್ರದ ಗುಂಟೂರು ಜಿಲ್ಲೆಯ ಬಾಪಟ್ಲ ತಾಲೂಕಿನಲ್ಲಿವೆ.

"ಜಿನವಲ್ಲಭ ಮತ್ತು ಪಂಪನ ತಂದೆ ಭೀಮಪ್ಪಯ್ಯನು ಬೆಳ್ವೊಲದ ಅಧಿಕಾರಿಯಾಗಿದ್ದು ಅಣ್ಣಿಗೇರಿಯಲ್ಲಿ ವಾಸವಾಗಿದ್ದಂತೆ ತೋರುತ್ತದೆ. ಅಂತೆಯೇ ಪಂಪನಿಗೆ ಬನವಾಸಿ ನಾಡಿನ ಅತ್ಯಂತ ನಿಕಟ ಸಂಬಂಧವು ಬೆಳೆದು ಯಾರು ಅಂಕುಶವಿಟ್ಟರೂ ನೆನೆಯುವಂಥ ಅಭಿಮಾನವನ್ನು ಹುಟ್ಟಿಸಿರಬೇಕು"[೨೨] ಎಂದು ಮೇವುಂಡಿ ಮಲ್ಲಾರಿ ಊಹಿಸಿದ್ದಾರೆ. ಈ ಊಹೆಗೆ ಆಧಾರಗಳಿಲ್ಲ.

ಈ ಶಾಸನದಲ್ಲಿ ತನ್ನ ಅಣ್ಣ ಪಂಪನಿಗೆ ಅರಿಕೇಸರಿಯಿಂದ ದೊರೆತ ಧರ್ಮಪುರದ ಉತ್ತರ ಭಾಗದಲ್ಲಿರುವ ವೃಷಭಗಿರಿಯ ಮೇಲೆ ಸಿದ್ಧಶಿಲೆಯಲ್ಲಿ ತಮ್ಮ ಕುಲದೈವವಾದ ೨೪

ತೀರ್ಥಂಕರರನ್ನೂ, ಚಕ್ರೇಶ್ವರಿಯ ಶಿಲ್ಪಗಳನ್ನು ನಿರ್ಮಿಸಿದ್ದನ್ನು ವಿವರಿಸಿದೆ. ಜೊತೆಗೆ ಪಂಪನ ಬಿರುದುಗಳಾದ 'ತ್ರಿಭುವನ ತಿಲಕ' ಎಂಬ ಬಸದಿಯನ್ನು 'ಕವಿತಾಗುಣಾರ್ಣವ' ಎಂಬ ಕೆರೆಯನ್ನು 'ಮದನವಿಲಾಸ'ವೆಂಬ ವನವನ್ನು ತನ್ನ ಅಣ್ಣನ ಹೆಸರಿನಲ್ಲಿ ಕೃತಜ್ಞತೆಯಿಂದ ನಿರ್ಮಿಸಿದ್ದಾನೆ. ಈ ವೃಷಭಗಿರಿಯಲ್ಲಿ ಜರುಗುವ ಜೈನಾಭಿಷೇಕೋತ್ಸವವನ್ನು ನೋಡಲು ಬರುತ್ತಿದ್ದ ಯಾತ್ರಾರ್ಥಿಗಳಲ್ಲಿ ದಾನ ಸಮ್ಮಾನಗಳನ್ನು ಮತ್ತು ಸತ್ಪುರುಷರಿಗೆ ವಿದ್ಯಾದಾನವನ್ನು ಮಾಡುತ್ತಿದ್ದನು ಎಂದು ಜಿನವಲ್ಲಭ ಹೇಳಿಕೊಂಡಿದ್ದಾನೆ. ವೃಷಭಗಿರಿಯಲ್ಲಿ ಉಚ್ಚ ಶಿಲಾತಲದಲ್ಲಿ ಅರಿಕೇಸರಿಯಿಂದ ಪಂಪನಿಗೆ ಧರ್ಮಪುರವನ್ನು ಕೊಟ್ಟ ದತ್ತಿ ಶಾಸನವುಂಟೆಂಬ ಹೊಸ ಮಾತನ್ನು ಈ ಶಾಸನದಲ್ಲಿ ಜಿನವಲ್ಲಭನು ಘೋಷಿಸಿದ್ದಾನೆ. ಈ ಶಾಸನ ದೊರೆತರೆ ಜಿನವಲ್ಲಭ ಪಂಪನ ಜೀವನದ ಚಾರಿತ್ರಿಕ ಅಂಶಗಳ ಮೇಲೆ ಇನ್ನೂ ಹೆಚ್ಚಿನ ಅಂಶಗಳು ಬೆಳಕಿಗೆ ಬರುತ್ತದೆ.[೨೩]

ಹೀಗೆ ಜಿನವಲ್ಲಭನು ಶಾಸನ ಕವಿಯಾಗಿ ಸಾಹಿತ್ಯ ಕೃತಿಯ ಕವಿಯಾಗಿ ತನ್ನ ಅಣ್ಣನ ನಿಸಿಧಿಯನ್ನು ಕಾವ್ಯಾತ್ಮಕವಾಗಿ ಮೂರು ಭಾಷೆಗಳಲ್ಲಿ ಬಣ್ಣಿಸಿದ್ದಾನೆ.

**ಕವಿಯ ಕಾವ್ಯಾಚಾತುರ್ಯಕ್ಕೆ ಒಂದು ಚಂಪಕಮಾಲೆ ಪದ್ಯ ಈ ರೀತಿಯಾಗಿದೆ.**

**"ಬರೆದುದೇ ತಾಂಬ್ರಶಾಸನಮದೇಯಮೇ । ಧರ್ಮಪುರಂ ನೆಗಟ್ತೆವೆ**
**ತ್ತರಿಗನ ಕೊಟ್ಟುದೇ ನೆಗಟ್ದಿ ಪಂಪನ ಪೆತ್ತುದೆ ಪೇಟಿಕೀಮೆನ್ದು ನೀ**
**ಮ್ಮರುಳೆ ಪಲರ್ಮ್ಮೆಯುಂ ಪಲಬರಂ ಬೆಸಗೊಳ್ವದೆ ಪೋಗಿ ನೋಡ ಸು**
**ನ್ದರ ವೃಷಭಾಚಳೋನ್ನತ ಶಿಳಾತಳದೊಳ್ಬರೆದಕ್ಕರಂಗಳಂ"[೨೪]**

**ಶ್ರೀಧರಯ್ಯ (ಕ್ರಿ.ಶ. ೯೫೩)**

ಹಾಸನ ಜಿಲ್ಲೆಯ, ಬೇಲೂರು ತಾಲೂಕಿನ, ಬಸ್ತಿಹಳ್ಳಿಯ ಪಾರ್ಶ್ವನಾಥ ಬಸದಿಯ ಬಳಿ ನೆಟ್ಟಿರುವ ಕಂಬದ ಶಾಸನವನ್ನು ಶ್ರೀಧರಯ್ಯ[೨೫] ಎಂಬ ಕವಿಯು ರಚಿಸಿದನೆಂದು ತಿಳಿದುಬರುತ್ತದೆ. ಗಂಗರ ದೊರೆ ಇಮ್ಮಡಿ ಬೂತುಗನನ್ನು ಉಲ್ಲೇಖಿಸುವ ಈ ಶಾಸನದ ಕಾಲ ಕ್ರಿ.ಶ.೯೫೩ ಈ ಶಾಸನದಲ್ಲಿ ಶ್ರೀಧರಯ್ಯನ ವೈಯಕ್ತಿಕ ವಿವರಗಳಿಲ್ಲ.

ಈ ಶಾಸನದಲ್ಲಿ ಕುಂದ ಕುಂದಾಚಾರ್ಯರ ಪರಂಪರೆಯಲ್ಲಿ ಬಂದ 'ಗುಣಸಾಗರ ಭಟಾರರ' ಶಿಷ್ಯ ಪರಂಪರೆಯ 'ಕಿರಿಯ ಮೋನಿ ಭಟಾರರು' ಸಲ್ಲೇಖನ ವ್ರತದಿಂದ ನಿಸಿಧಿಯಾದುದನ್ನು ಕವಿಯು ಒಂದು ಕಂದ, ಒಂದು ಉತ್ಪಲಮಾಲೆಯಲ್ಲಿ ಚಿತ್ರಿಸಿದ್ದಾನೆ. ಕವಿಯ ಕಾವ್ಯಶೈಲಿಗೆ ಒಂದು ಉದಾಹರಣೆ ಇಂತಿದೆ.

ತಾಙ್ಗಡ ಕೊಳ್ವೊನೆನ್ದು ಬಲಗರ್ವ್ವದೆ ಬಲ್ಲಪನಲ್ಲಿಗೋಗಿಕಾಯ್ವೊ
ಇಗ್ಗೆಡೆಯಾ ಗಾದಂನ್ತುಯಾ ನುಡಿದಾರ್ಪಿನಮೆಚಿಸಿಕೊಣ್ಡರಿನ್ತುಕೆಲ್ಲ
ಇಗ್ಗೆಱೆಯಮ್ವಲಪ್ವೊಗೞೆ ಮೋನಿಭಟಾರರನೆನುತ್ತ ಲೋಕಮೆಲ್ಲ
ಇಗ್ಗೆಡೆಗೊಣ್ಡುಗೊಣ್ಡು ಕೊನೆದಪ್ಪುದು ಸಾಹಸ ಮೆನೂನ ಮೋ

ಶಾಸನದ ಸರಳ ಶೈಲಿ ಮತ್ತು ನೇರ ನಿರೂಪಣೆಗೆ 'ಕಂದ'ದ ಇನ್ನೊಂದು ಸಾಕ್ಷಿ ಇಂತಿದೆ.

ಪೇನಿಗಳಂ ಪೊಗಳದಿರಭಿ
ಮಾನಿಗಳಂ ಗುಣದ ಖನಿಗಳಂ ವಸುಮತಿಯೊಳ್
ದಾನಿಗಳನೂನಮಿಲ್ಲದ
ಮೋನಿಗಳಂ ಪೋಗಿ ಪೊಗೞ ಕೆಲ್ಲಂಗೆಱೆಯೊಳ್ ॥

**ಆಯ್ಕೆವೆಮ್ಮ (ಕ್ರಿ.ಶ. ೯೬೫)**

ಆಂಧ್ರಪ್ರದೇಶದ, ಅನಂತಪುರ ಜಿಲ್ಲೆಯ, ಕಲ್ಯಾಣದುರ್ಗ ತಾಲೂಕಿನ, ಕಂಬದೂರು ಗ್ರಾಮದ ಶಾಸನ[೬]ವನ್ನು ಆಯ್ಕೆವೆಮ್ಮ ಎನ್ನುವ ಶಾಸನಕವಿ ಬರೆದಿದ್ದಾನೆ. ನೊಳಂಬ ಪಲ್ಲವ ದೊರೆ ಇಱೆವ ನೊೞಂಬಾದಿರಾಜನ ಆಳ್ವಿಕೆಯ ಶಾಸನ ಇದು. ದೊರೆಯ ಹಿರಿಯ ಮಗನಾದ 'ಪೊೞಲ್ಚೋರದೇವನು' ಬೆಟ್ಟುಗುಂಡೆಯ ಕೆರೆಯ ಬಿತ್ತುವಟವನ್ನು ಕೆರೆಗೆ ಬಿಟ್ಟುಕೊಟ್ಟದ್ದನ್ನು ಊರಿನ ೧೦೬ ಮಂದಿ ಗಾವುಂಡರು ಈ ದತ್ತಿಯನ್ನು ನಡೆಸುವರೆಂದು ಇಲ್ಲಿ ದಾಖಲಿಸಿದೆ. ಪೊೞಲ್ಚೋರದೇವನ ಶ್ರೀವತ್ಸಗೋತ್ರದ ಮಂತ್ರಿ ಚಾವುಂಡಯ್ಯ ಎಂಬುವವನು ಈ ಕಂಬವನ್ನು ನಿಲ್ಲಿಸಿದನು. ಇದನ್ನು ರಚಿಸಿದವನು ಆಯ್ಕೆವೆಮ್ಮ. ಕಂಡರಿಸಿದವನು ಮಣಿಯಮ್ಮೊಜ.
ಇದನ್ನು ಶಾಸನ ಹೀಗೆ ಹೇಳಿದೆ.

ಶ್ರೀಮದಿದಮ್ಮರೆದಾ ನಾಯ್ಕುವೆಮ್ಮ
ಬೆಸಂಗೆಯ್ದ ಮಣಿಯ ಮ್ಮೊಜರ್
ಸ್ವಸ್ತಿ ಸಮಧಿತ ಪಂಚಮಹಾಶಬ್ದ ಪಲ್ಲವಾನ್ವಯ
ಶ್ರೀ ಪೃಥುವೀವಲ್ಲಭ ಪಲ್ಲವಕುಲತಿಲಕೈಕವಾಕ್ಯ ಶ್ರೀಮದಿಱೆವ
ನೊಱಮ್ಬಾಧಿರಾಜಂ ಪೃಥುವೀ ರಾಜ್ಯಂಗೆಯ್ಯುತ್ತಿರೆ ತತ್ಪಾದಪದ್ಮೋಪಜೀವಿಯ
ಗ್ರಪುತ್ರ ಛಲದಙ್ಕಕಾರನಾತನಗ್ರತನೂಜಂ ಸಮಧಿಗತ ಪಂಚ
ಮಹಾಶಬ್ದ ಪಲ್ಲವಾನ್ವಯ ಶ್ರೀ ಪೃಥುವೀ ವಲ್ಲಭ ಪಲ್ಲವರಾಮ
ಚರಣ ಕಮಳಯುಗಳಾಮೋದ ಮುದಿತ ಮಧುಕರಾಯಮಾಣ
ಕಾಞ್ಚೀ ಪುರಾಧಿಪತಿ ವಿಕ್ರಮರಾಮಂ ತುರಗವಿದ್ಯಾಧರ ಧೞಯಂ
ಕಕಾಱಂ ರಾಜಮನೋಜಂ ದ್ರೋಹ ಚಟಕ್ಕಂ ಕೋಮರ ವಿಳಾಸಂ
ತಿಱಙ್ಕಾನೆ ಮಲ್ಲ ನೊಳಮ್ಬರಭೀಮಂ ಪುಸಿಗೆಗೊಯ್ವೊಂ
ರಾಜ ರಾಜಾಶ್ರಯಂ ಶ್ರೀಮತ್ಪೊೞಲ್ಚೋರದೇವಂ" ಎಂದು ವರ್ಣಿಸಿದ್ದಾನೆ.

**ಪೆದ್ದಣಭಟ್ಟ (ಕ್ರಿ.ಶ. ೯೬೬)**

ಮಹಾರಾಷ್ಟ್ರದ ಪರಭಣಿ ಜಿಲ್ಲೆಯ, ಪರಭಣಿ ತಾಲೂಕಿನ, ಪರಭಣಿಯ[೨೭] ತಾಮ್ರಪಟವೊಂದು ಆಂಧ್ರಪ್ರದೇಶದಿಂದ ವಲಸೆ ಬಂದ ಶಾಸನವಾಗಿದೆ. ಈ ಶಾಸನವು ರಾಷ್ಟ್ರಕೂಟ ದೊರೆ ಮೂರನೇ ಅರಿಕೇಸರಿಯ ಕಾಲಕ್ಕೆ ಸಂಬಂಧಿಸಿದ್ದಾಗಿದೆ. ಈ ಶಾಸನ ಸಂಸ್ಕೃತ ಭಾಷೆ ಹಾಗೂ ಕನ್ನಡ ಲಿಪಿಯಲ್ಲಿದೆ. ರಾಷ್ಟ್ರಕೂಟ, ಚಾಲುಕ್ಯ ವಂಶಗಳ ವಂಶಾವಳಿಯೂ ವಿಸ್ತಾರವಾಗಿ ಬಂದಿದೆ. ಅರಿಕೇಸರಿ ಕವಿ ಸೋಮದೇವನಿಗೆ ಲೆಂಬುಳಪಾಟಕದಲ್ಲಿ ಜೈನಮಂದಿರದ ಖರ್ಚುವೆಚ್ಚಕ್ಕೆ ದಾನ ನೀಡಿದ ವಿವರವಿದೆ.

ಅರಿಕೇಸರಿಗೆ ಗುಣಾರ್ಣವ, ಅಮ್ಮನ ಗಂಧವಾರಣ, ವಿಕ್ರಮಾರ್ಜುನ, ಗುಣನಿಧಿ ಮೊದಲಾದ ಬಿರುದುಗಳಿದ್ದುದನ್ನು ಈ ಶಾಸನ ಹೇಳುತ್ತದೆ. ಈತ ಕವಿ ಪಂಪನ ಆಶ್ರಯದಾತ ಪಂಪನ ಕಾವ್ಯದಲ್ಲಿಯೂ ಅರಿಕೇಸರಿಯನ್ನು ಇದೇ ಬಗೆಯಲ್ಲಿ ಕೊಂಡಾಡಲಾಗಿದೆ. 'ಸೋಮದೇವ' ಯಶೋಧರ ಚರಿತ್ರೆಯನ್ನು ಬರೆದ ವಿವರವೂ ಇಲ್ಲಿ ಬಂದಿದೆ. ಪಂಪನ ಆಶ್ರಯದಾತ ಅರಿಕೇಸರಿಯ ಕುರಿತು ಈ ಶಾಸನ ಹೇಳುತ್ತಿರುವುದರಿಂದ ಇದೊಂದು ಐತಿಹಾಸಿಕ ಮಹತ್ವವಿರುವ ಶಾಸನವಾಗಿದೆ.

**"ಅಸ್ತ್ಯಾದಿತ್ಯಭವೋ ವಂಶಾಶ್ಚಾಳುಕ್ಯಯಿತಿ ವಿಶ್ರುತಿ ತತ್ರಾಭೂಧ್ಯುದ್ಧಮಲ್ಲಾಖ್ಯೋ**
**ನೃಪತಿವಿಕ್ರಮಾರ್ಣ್ಣವಃ ಸಪಾದಲಕ್ಷ ಭುಭರ್ತ್ತಾ ತೈಳವಾಸ್ಯಾಂ ಸಪೋಧನೆ**
**ಅವಗಾಹೋತ್ರವಂ ಚಕ್ರೇಶಕ್ರಶ್ರೀರ್ಮ್ಮದ ದಂತಿನಾಮ್ ಸಕಳಿಂಗ ತ್ರಯಾಂ**
**ವೆಂಗಿಯೋವತಿಸ್ಮಪರಾಕ್ರಮಾತ್ ಪುತ್ರೋಜಯಶ್ರೀಯ........ ಪಾತ್ರಂತಸ್ಯಾಹಿದರಿಕೇಸರಿ"**

**"ಶ್ರೀಪೃಥ್ವಿವಿವಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ**
**ಶ್ರೀಮದಮೋಘವರ್ಷದೇವ ಪಾದಾನುಖ್ಯಾತಿ ಪ್ರವರ್ದ್ಧಮಾನ ವಿಜಯರಾಜ್ಯ**
**ಶ್ರೀ ಕೃಷ್ಣರಾಜದೇವಿ ಪಾದಪದ್ಮೋಪಜೀವಿನಾ ಸ್ವಸ್ತಿ ಸಮಧಿಗತ**
**ಪಂಚಮಹಾಶಬ್ದ ಮಹಾಸಾಮಂತಧಿಪತಿ ಸಮಸ್ತ ಭುವನ**
**ಸಂಸ್ತೂಯಮಾನ ಚಾಳುಕ್ಯವಂಶೋದ್ಧವ ವರ್ಷಾಮ್ಬುರಾಂಕುಶಾಮ್ಮನ ಗಂಧವಾರಣ**
**ಗಂಧೇಭ ವಿದ್ಯಾಧರ ಪ್ರೀಯಗಲ್ಲ ತ್ರಿಭುವನಮಲ್ಲೋದಾತ್ತನಾರಾಯಣ**
**ಪ್ರತ್ಯಕ್ಷವಾದ್ವಳಿ ವಿಕ್ರಮಾರ್ಜುನ ಗುಣನಿಧಿ ಗುಣಾರ್ಣವ ಸಾಮಂತ**
**ಚೂಡಾಮಣಿ ಪ್ರಮುಖಾನೇಕ ಪ್ರಶಸ್ತಿ ವಿಜಯಾಂಕ ಮಾಳಿಕಾಳಂಕೃತೇನಲೆಂ**
**ಬುಳಪಾಟಿಕ ನಾಮಧೇಯ ನಿಜರಾಜಧಾನ್ಯಾಂ ನಿಜಪಿತಃ ಶ್ರೀಮದ್ಬಧಗಸ್ಯ**
**ಶುಭದಾಮ ಜಿನಾಲಯಾಖ್ಯವಸತೇಃ"**

ಶಾಸನಕವಿ ಪೆದ್ದಣಭಟ್ಟನು ಕೊನೆಯ ಸಾಲಿನಲ್ಲಿ ಹೀಗೆ ಹೇಳಿದ್ದಾನೆ

**"ಅರಿಕೇಸರಿಣಾ ದತ್ತಂ ಕಥಿತಂ ಕವಿ ಪೆದ್ದಣೇನ ಭಟ್ಟೇನ"**
**ಶಾಸನಮಿದಮುತ್ಕೀರ್ಣಂ ಶುಭದಾಮ ಜಿನಾಳಯಸ್ಯ ರೇವೇಣ**

**ಸುಬಗ (ಕ್ರಿ.ಶ. ೯೬೮)**

ತುರುವನೂರಿನ ಬೇವಿನಹಳ್ಳಿ[೨೮] ಗ್ರಾಮದಲ್ಲಿರುವ ಆಂಜನೇಯ ದೇವಾಲಯವೊಂದರಲ್ಲಿ ಶಾಸನದ ಕೊನೆಯಲ್ಲಿ 'ಶ್ರೀ ಕುಮಾರಕೀರ್ತಿ ದೇವರ ಗುಡ್ಡಂ ಸುಬಗಂ ಬರೆದಂ' ಎಂದಿರುವುದನ್ನು ಗಮನಿಸಿ ತಿ.ತಾ.ಶರ್ಮ ಅವರು ಈತ ಶಾಸನಕವಿ ಇರಬಹುದೆಂದು ಊಹಿಸಿದ್ದಾರೆ.[೨೯] ಶಾಸನದಿಂದ ಇವನ ಬಗ್ಗೆ ಇತರ ವಿವರಗಳು ದೊರೆಯದಿದ್ದರೂ ಯತಿಯೊಬ್ಬನ ಶಿಷ್ಯನಾಗಿರುವುದರಿಂದ ಈ ಊಹೆ ಸಂಭವನೀಯವಾದುದೆನ್ನಬಹುದು. ಮಾನ್ಯಖೇಟದಲ್ಲಿ ಕೊಟ್ಟಿಗದೇವನ ಸಾಮಂತನಾದ ಮಂದಿಗ, ಕದಂಬಳಿಗೆ ಸಾವಿರವನ್ನಾಳುತ್ತಿದ್ದಾಗ ಆತನ ಪತ್ನಿ ಜಕ್ಕಿಯಬ್ಬೆ ಬಸದಿಯೊಂದನ್ನು ಕಟ್ಟಿಸಿದ್ದನ್ನು ದಾಖಲಿಸುವುದು ಶಾಸನದ ಪ್ರಮುಖ ಉದ್ದೇಶ. ಶಾಸನದಲ್ಲಿ 'ಕಂದ' ವೃತ್ತಗಳ ಬಳಕೆಯಿದ್ದು, ಶಾಸನಶೈಲಿ ಸುಬಗನದು ಸರಳವಾದ ಸ್ಪುಟಶೈಲಿ ಎಂಬುದಕ್ಕೆ ವಿಶದೀಕರಿಸುತ್ತದೆ. ಶಾಸನಾಂತ್ಯದಲ್ಲಿ ಫಲಶ್ರುತಿಯ ಸಂಸ್ಕೃತ ಶ್ಲೋಕಗಳಿವೆ.

**ಮಂದಿಗನ ವಂಶಾನ್ವಯ :**

**ಆ ವಿಭುಗಾತ್ಮಜಂ ನೇಱಃ ಪುಟ್ಟಡೆ ಪುಟ್ಟ ಪಿಳ್ಳಿಮಯ್ಯನ**
**ನ್ತಾ ವಸುಧಾಧಿಪಂಗೆ ತನಯಂ ಕಲಿಕೋಣದೇವ .... ಸುಹೃ**
**ದ್ಭಾವನವಂಗೆ ಕೀರ್ತಿಯುತನಗ್ರಜನಾತನ ಸೂನು ದಾನಿ ತಾಂ**
**ರೇವಣನಾತನ ಮಗಂ ನೆಗಟ್ದಿ ಸಲೆ ರಾಜಭೂಭುಜಂ ॥**

**ಆತಂಗೆ  ಬಿಕ್ಕಿಯಣ್ಣಂ**
**ಮಾತೆಗೆ ಸತ್ಪುತ್ರನಾ ಸುಪುತ್ರಂಗೆ ಸುತಂ**
**ನೂತಗುಣಂ ಗೊಗ್ಗಿಗ**
**ವೀತಂ ಶ್ರೀಸೂದ್ರಕಾಂಕನಾತಂಗೆ ಮಗಂ ॥**

**ಸನ್ದ ಮಹಾಸಾಮನ್ತಂ**
**ಮನ್ದಿಗನಾರ್ತಿತ್ತುಮಿಱಿದುವೀ ಜಗದೊಳ್ ಸಂ**
**ಕ್ರನ್ದನ ನನ್ದನ ಸದೃಶಂ**
**ನಿನ್ದಂ ನಿಜರಾಜ್ಯಪದವಿಯೊಳ್ಸುಖದಿಂದಂ ॥**

ಇದು 'ರನ್ನ'ನ ಪದ್ಯವನ್ನು ನೆನಪಿಗೆ ತರುತ್ತದೆ.

**ಸಾಮಿಯಣ್ಣ (ಕ್ರಿ.ಶ. ೯೭೯)**

ಅವಿಭಜಿತ ಧಾರವಾಡ ಜಿಲ್ಲೆಯ, ಗದಗ ತಾಲೂಕಿನ, ನಾಗಾವಿ[೩೦] ಗ್ರಾಮದಲ್ಲಿರುವ ನಾಗಾರ್ಜುನ ದೇವಸ್ಥಾನದ ಮುಂದೆ ಇರುವ ಶಾಸನವೊಂದರ ಕರ್ತೃ ಈತ 'ಮಾಧುರ್ಯ

ಸುಕರ ಚಾತುರ್ಯ'ಗಳಲ್ಲಿ ತನ್ನನ್ನು ಮೀರಿಸುವವರು ಬೇರಾರೂ ಇಲ್ಲವಂತೆ ಈ ಶಾಸನವನ್ನು 'ಚೆಲ್ವಾಗಿ' ರಚಿಸಿರುವುದಾಗಿ ಹೇಳಿಕೊಂಡಿರುವುದರಿಂದ ಈತನು ಆ ಕಾಲದಲ್ಲಿ ಉತ್ತಮ ಕವಿಯಾಗಿದ್ದಿರಬಹುದು.

ರಾಷ್ಟ್ರಕೂಟ ದೊರೆಯಾದ ಖೊಟ್ಟಿಗದೇವ (ನಿತ್ಯವರ್ಷದೇವ)ನ ಕಾಲಕ್ಕೆ ಸೇರಿದ ಈ ಶಾಸನವು ಖೊಟ್ಟಿಗದೇವನ ಸಾಮಂತನಾದ ಗಂಗ ಪೆರ್ಮಾಡಿಗಳ ಕೈಕೆಳಗಿನ ಅಧಿಕಾರಿಯಾದ 'ಪಾಪಕಲ್ಲಕುಲತಿಕ'ನೂ 'ಉಪಮಾತೀತಬಳನೂ' 'ಕಲಿಯುಗ ಭೀಮ' ಇತ್ಯಾದಿಯಾಗಿ ಕೀರ್ತಿಯೂ ಆದ ಬೊಟಿಗನವಂಶಾವಳಿಯನ್ನೂ ಆತನ ಪರಾಕ್ರಮ ವರ್ಣನೆಯಲ್ಲಿ ಆತನು ನಾಗಾವಿಯ ರಾಮೇಶ್ವರ ದೇವಾಲಯದಲ್ಲಿ ಸತ್ರ ನಿರ್ವಹಣೆಗೆ ಹಾಗ, ವಿದ್ಯಾದಾನಕ್ಕೆ ಬಿಟ್ಟ ದತ್ತಿಯನ್ನು ಈ ಶಾಸನವು ಒಳಗೊಂಡಿದೆ. ಶಾಸನಾಂತ್ಯದಲ್ಲಿ ಈ ಕಂದಪದ್ಯವೊಂದಿದೆ.

> **"ಮುನ್ನೀರ್ಬ್ಬಳಸಿರೆ ಧರಣಿಯೊ**
> **ಳಿನ್ನುಂ ಮಾಧುರ್ಯ ಸುಕರಗುಣ**
> **ಪೊನ್ನತರಿಲ್ಲೆನೆ ಸಾಸನ**
> **ಮನ್ನಿದೆ ಚೆಲ್ವಾಗೆ ಸಾಮಿಯಣ್ಣಂ ಬರೆದೋಂ"**

**ಖೊಟ್ಟಿಗದೇವನ ಶೌರ್ಯವರ್ಣನೆ:**

> **"ಭಾಗಿಯೊಳರಾತಿಬಳ ಚತು**
> **ರಂಗವಮುಲ್ಲಸಿತನಿಶಿತ ಮುದ್ಗರ ಧಾರಾ**
> **ಸಂಗಮ ಜಲದೊಳ್ ಮುಳುಗಿಸು**
> **ವಂಗಂ ಕೊಟ್ಟಿಗನುದಗ್ರನುಗ್ರನಾಜಿಯೊಳ್"**

ಕಂದ, ಗದ್ಯ, ಮತ್ತು ಮತ್ತೇಭವಿಕ್ರೀಡಿತ ವೃತ್ತವೊಂದನ್ನು ಬಳಸಿ ರಚಿಸಿರುವ ಈ ಶಾಸನದ ಬಹುಭಾಗ ಅಳಿಸಿ ಹೋಗಿದೆ. ಒಟ್ಟು ೫೮ ಸಾಲುಗಳಿವೆ.

**ಕವಿನಾರಣ (ಕ್ರಿ.ಶ. ೯೭೦)**

ಅವಿಭಜಿತ ಧಾರವಾಡ ಜಿಲ್ಲೆಯ, ರೋಣ ತಾಲೂಕಿನ, ಸವಡಿ[೩೧] ಗ್ರಾಮದ ಶಾಸನವನ್ನು ನಾರಣ ಕವಿ ರಚಿಸಿದನೆಂದು ತಿಳಿದುಬರುತ್ತದೆ. ಶಾಸನ ತ್ರುಟಿತವಾಗಿರುವುದರಿಂದ ಕವಿಯ ಬಗ್ಗೆ ಹೆಚ್ಚಿನ ವಿವರಗಳಿಲ್ಲ.

ರಾಷ್ಟ್ರಕೂಟ ದೊರೆ ಗೊಟ್ಟಿಗದೇವನನ್ನು ಉಲ್ಲೇಖಿಸುವ ಈ ಶಾಸನದ ಕಾಲ ಕ್ರಿ.ಶ. ೯೭೦. ಗಂಗರ ವತ್ಸಯ್ಯನೆಂಬಾತನು ಒಂದು ದೇವಾಲಯ ನಿರ್ಮಿಸಿ, ಅಲ್ಲಿ ಲಿಂಗಪ್ರತಿಷ್ಠೆಯನ್ನು

ಮತ್ತು ಭಗವತೀ ಪ್ರತಿಷ್ಠೆಗಳನ್ನು ಮಾಡಿಸಿದ ವಿವರ ಮತ್ತು ಸುಂಕದ ಬಲ್ಲಯ್ಯನು ದೇವಾಲಯಕ್ಕೆ ಹನ್ನೆರಡು ಮತ್ತರು ಗದ್ದೆಯನ್ನು, ಎರಡು ಮತ್ತರು ಭೂಮಿಯನ್ನು ಅದರ ಸ್ಥಾನಪತಿಗೆ ದತ್ತಿ ನೀಡಿದ ವಿವರ ಹೇಳಿದೆ.

'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್' ಎಂದು ಹೇಳಿರುವ ಮಾತಿನಂತೆ ಪಂಡಿತನಲ್ಲದಿದ್ದರೂ ಕಾವ್ಯ ಬರೆಯುವುದು, ಸಹಜವಾಗಿ ಬಂದಿದ್ದನ್ನು (ಆಶುಕವಿತ್ವ) ಸಹಜತೆಯ ಬಗ್ಗೆ ಹೆಮ್ಮೆ ವ್ಯಕ್ತಪಡಿಸಿದ್ದಾನೆ.

**ವೇದ ವೇದಾಂಗ ಮನೋದದೆ ಸಾಸ್ತ್ರಮ**
**ನಾದಿ ಮಧ್ಯಾಂತ ಮಱಿಯದೆ ನಾರಣಂ**
**ಗಾದುದು ಕವಿತೆ ಸಹಜಮೆ ।**

ಎಂದಿದ್ದಾನೆ. 'ನಾಗಾರ್ಯನ ಶೀಘ್ರಲಿಖಿತಂ' ಎಂದು ಈ ಶಾಸನ ಕಂಡರಿಸಿದವನು. ಈ ಶಾಸನದಿಂದಲೇ ತಿಳಿಯುತ್ತದೆ. ಇದರ ಬಹುಭಾಗ ಗದ್ಯದಲ್ಲಿದ್ದರೂ, ಕೊನೆಯ ಭಾಗದಲ್ಲಿ ಕೆಲವು ಪದ್ಯಗಳಿವೆ.

**ಕೇತಯ್ಯ (ಕ್ರಿ.ಶ.೯೭೧)**

ಹಾಸನ ಜಿಲ್ಲೆಯ, ಬೇಲೂರು ತಾಲೂಕಿನ, ಕರಗಡ ಗ್ರಾಮದ ಶಾಸನವನ್ನು[೩೨] 'ಬರೆದ ಕೇತಯ್ಯ' ಎಂದಿದೆ. ಗಂಗ ದೊರೆ ಎರಡನೇ ಮಾರಸಿಂಹನು ರಾಜ್ಯಾದಿತ್ಯನ ಉಚ್ಚಂಗಿ ಕೋಟೆ ಕಾಳಗದಲ್ಲಿ ಹೋರಾಡಿ ಮಡಿದ ಬಾಸಗಾವುಂಡನಿಗೆ ಐದು ಖಂಡುಗ ಭೂಮಿಯನ್ನು ದಾನ ನೀಡಿದನು. ಇದನ್ನು ಶಾಸನ ಹೀಗೆ ಹೇಳಿದೆ.

**"ಸ್ವಸ್ತಿ ಕೊಂಗುಣಿವರ್ಮ್ಮ ಧರ್ಮ್ಮಮಹಾರಾಜಾಧಿರಾಜ ಕುವಳಾಲಪುರಪರಮೇಶ್ವರ**
**ನಂದಿಗಿರಿನಾಥ ನೊಳಂಬಕುಲಾನ್ತಕ ಶ್ರೀಮಾರಸಿಂಗದೇವಂ ಸಕವರಿಸ**
**೮೯೩ ನೇ ಪ್ರಜಾಪತಿಸಂವತ್ಸರಮಾಷಾಡಮಾಸದಲ್ ಉಚ್ಚಂಗಿಯ ಕೋಟೆಗೆ**
**ರಾಜಾದಿತ್ಯನ ಕಾಳೆಗಕೆ ಚಂಡಿಡೆ ಬಾಸಗಾವುಣ್ಡಂಗೆ ಕೊಟ್ಟ ಕೊಡಂಗೆ**
**ಬರೆದಂ ಕೇತಯ್ಯ"** ವೆಂದಿದೆ.

**ಅರ್ಹದ್ಭಕ್ತ (ಕ್ರಿ.ಶ.೯೭೧)**

ಚಿಕ್ಕಮಗಳೂರು ಜಿಲ್ಲೆಯ, ಕಡೂರಿನ ಕೋಟೆಯ ಬಾಗಿಲಲ್ಲಿ ನೆಟ್ಟ ಶಾಸನವನ್ನು[೩೩] ಅರ್ಹದ್ಭಕ್ತ ಕವಿ ರಚಿಸಿದನೆಂದು ತಿಳಿಯುತ್ತದೆ. ಈ ಶಾಸನದಲ್ಲಿ ಒಂದೇ ಒಂದು ಚಂಪಕಮಾಲಾ ವೃತ್ತವಿದೆ. ಅರ್ಹದ್ಭಕ್ತ ಕವಿ, ದೋರಪಯ್ಯ, ಪಾಂಬಬ್ಬೆಯರ ಮೂರು ಮಕ್ಕಳಲ್ಲಿ ಮಧ್ಯದ

ಮಗನಾಗಿದ್ದಾನೆ. ಗಂಗರ ಭೂತುಗನ ಮನೆತನವನ್ನು ಉಲ್ಲೇಖಿಸುವ ಈ ಶಾಸನದ ಕಾಲ ಕ್ರಿ.ಶ. ೯೭೧ "ಅರ್ಹದ್ಭಕ್ತ ಎಂಬುದು ತೀರ್ಥಂಕರನ ಭಕ್ತ ಎಂಬುವನ ಬಿರುದಾಗಿರಬೇಕು"[೩೪]

ಶಾಸನದಲ್ಲಿ ಉಲ್ಲೇಖಿಸುವ ಶಾಸನಕವಿ ಅರ್ಹದ್ಭಕ್ತನ ತಾಯಿ ಪಾಂಬಬ್ಬೆಯನ್ನು ಸಮಾಜವು ಭೂತುಗನ ಅಕ್ಕ ಎಂದು ಗೌರವಿಸುತ್ತಿತ್ತೆಂದು ಹೇಳಲಾಗಿದೆ. ಆದ್ದರಿಂದ ಕವಿಯ ಕುಟುಂಬದವರು ಭೂತುಗ ರಾಜನಿಗೆ ಆಪ್ತರಾಗಿದ್ದರೆಂದು ತಿಳಿಯಬಹುದು. ಗಂಗರ ಅರಸ ಭೂತುಗನು ಅಮೂಲ್ಯ ಸಂಪತ್ತನ್ನು ನೀಡಬಯಸಿದರೂ ಅದನ್ನು ನಿರಾಕರಿಸಿ ಈ ಜಗತ್ತು ನಶ್ವರವೆಂದು ತಿಳಿದು ಸಲ್ಲೇಖನ ವ್ರತದಿಂದ ಸಮಾಧಿಮರಣ ಪಡೆದಳೆಂದು ಈ ಶಾಸನದಲ್ಲಿ ಹೇಳಲಾಗಿದೆ. ಈ ಶಾಸನವನ್ನು ಪಾಂಬಬ್ಬೆಯ ಮೂರು ಮಕ್ಕಳು ಮಾತೃಭಕ್ತಿಯಿಂದ ಹಾಕಿಸಿದರೆಂದು ತಿಳಿಯುತ್ತದೆ.

**ಚಂಪಕಮಾಲಾವೃತ್ತದ ಪದ್ಯ ಹೀಗಿದೆ**

**ಪರಸೆ ಮಹಾಪ್ರಸಾದದೊಳೆ ರೇವಕನಿಮ್ಮಡಿ ದೋರನೊಲ್ದು ತ**
**ನ್ನರಸುಮಮೌಲ್ಯವಸ್ತುಗಳುಮಂ ಕೊಡೆ ಭೂತುಗನಕ್ಕನೆನ್ದು ವಿ**
**ಸ್ತರಿಸೆ ಧರಿತ್ರಿ ಜೀಯ ಬೆಸನೇನೆನೆ ಸನ್ದಿವು ಸನ್ದುನಲ್ಲುವಿ**
**ನ್ದರ ಸುಡಲೆನ್ದು ಪಾಮ್ಬಬೆಗಳನ್ನುಗ್ರತಪೋನಿಯಮಸ್ಥರಾದೊರಾರ್ ॥**

**ಚಂದನಂದಿಯಯ್ಯ (ಕ್ರಿ.ಶ. ೯೭೮)**

ಕೊಡಗು ಜಿಲ್ಲೆಯ, ವಿರಾಜಪೇಟೆ ತಾಲೂಕಿನ, ಸೆಗ್ಗೂರು[೩೫] ಶಾಸನವು ೯೭೮ ಕಾಲದ್ದಾಗಿದ್ದು ಗಂಗದೊರೆ 'ರಾಚಮಲ್ಲ ಪೆರ್ಮಾನಡಿ' ಸತ್ಯವಾಕ್ಯ ಕೊಂಕುಣಿವರ್ಮ ಧರ್ಮ ಮಹಾರಾಜ ಕುಲಾಲಪುರ ಹಾಗೂ ನಂದಿಗಿರಿ ಆಳುತ್ತಿದ್ದ ಈತನನ್ನು ಶಾಸನದಲ್ಲಿ ಹೀಗೆ ಹೊಗಳಲಾಗಿದೆ ಹಾಗೂ ತಮ್ಮನಾದ 'ರಕ್ಕಸ'ನನ್ನು ಕೂಡಾ ಹೀಗೆ ವರ್ಣಿಸಿದೆ.

**"ಸ್ವಸ್ತಿ ಸಮಸ್ತ ವೈರಿಗಜಘಟಾಟೋಪ ಕುಂಭಿ ಕುಂಬಸ್ಥಳ**
**ಸ್ಫುಟಿತಾನರ್ಘ್ಯ ಮುಕ್ತಾಫಳ ಗ್ರಹಣ ಭೀಕರ ಕರಾಸೆ**
**ನಿವಾಸಿತ ದಕ್ಷಿಣದೋರ್ದ್ದಣ್ಡಮಣ್ಡಿತ ಪ್ರಚಣ್ಡ ಅಣ್ಣನಬಣ್ಣ**
**ಬಡವರಣ್ಣ" ಶ್ರೀಮತ್‌ರಕ್ಕಸ ಬೆದ್ದೊರಗರೆಯನಾಳುತ್ತಿರೆ. ಎಂದಿದೆ**

**"ಭದ್ರಮಸ್ತು ಜಿನಶಾಸನಾಯ ಶ್ರೀ ಬೆಳ್ಗೊಳ ನಿವಾಸಿಗಳಪ್ಪ**
**ಶ್ರೀ ಬೀರಸೇನ ಸಿದ್ಧಾನ್ತ ದೇವರವರ ಶಿಷ್ಯರ್ ಶ್ರೀ ಗೊಣಸೇನ ಪಣ್ಡಿತ**
**ಭಟ್ಟಾರಕರವರ ಶಿಷ್ಯರ್ ಶ್ರೀಮತ್ ಅನನ್ತವೀರ್ಯರ್ಯರಿಂಗಳ್ವೆಗ್ಗದೂರುಂ ಪೊ**
**ಸವಾದಗಮುಮನಭ್ಯನ್ತರ ಸಿದ್ಧಿಯಾಗೆ ಪಡೆದರದರ್ಕ್ಕೆ ಸಾಕ್ಷಿ**

**ತೊಂಭತ್ತಱು ಸಾಸಿರ್ಬರು ಮಯಾಮ್ತನ್ತರುಂ ಬೆದ್ದೊಱೆಗರೆ**
**ಯೆಳ್ಪದಿಂಬರು ಮೆಣ್ಟೊಕ್ಕಲುಮಿದಂ ಕಾವರ್ನ್ನಾಲ್ವಮ್ಮನಲೆಸರು**
**ಮಯ್ಸುಂಬ್ಬರು ಮಯ್ದಾಮರಿಗರುಂ ಶ್ರೀ ಪುರುಷ ಮಹಾರಾಜರ**
**ದತ್ತಿಯನಾವೊನೊರ್ಬ್ಬನಱಿದೊಂ"**

ಎಂದು ಮುಂತಾಗಿ ಭಟ್ಟಾರಕರ ಶಿಷ್ಯರಾದ ಅನಂತವೀರ್ಯರು ತೊಂಬತ್ತಾರು ಸಾಸಿರ ಅಯ್ಯಾವಂತರು ದತ್ತಿ ಪಡೆದ ವಿಷಯ ಒಳಗೊಂಡಿದೆ.

**ಕಮಳಾದಿತ್ಯ (ಕ್ರಿ.ಶ. ೯೮೦)**

ಬೆಳಗಾವಿ ಜಿಲ್ಲೆಯ, ಸವದತ್ತಿ ತಾಲೂಕಿನ, ಸೊಗಲ[೩೬] ಗ್ರಾಮದಲ್ಲಿರುವ ಶಾಸನದಲ್ಲಿ "ಕವಿ ಕಮಳಾದಿತ್ಯ ರಚಿತ ಕಾವ್ಯಾದೇಶಂ" ಎಂಬ ಉಲ್ಲೇಖವಿದೆ. ಇದರಿಂದ ಈ ಶಾಸನವನ್ನು ಕಮಳಾದಿತ್ಯ ರಚಿಸಿದನೆಂದು ತಿಳಿದುಬರುತ್ತದೆ. ಕಲ್ಯಾಣ ಚಾಲುಕ್ಯ ಇಮ್ಮಡಿ ತೈಲನನ್ನು ಉಲ್ಲೇಖಿಸುವ ಈ ಶಾಸನದ ಕಾಲ ಕ್ರಿ.ಶ. ೯೮೦.

"ಶಾಸನ ಕವಿ ಕಮಳಾದಿತ್ಯ ಎಂಬುದು ಕವಿಯ ಹೆಸರಾಗಿರದೆ ಪ್ರಶಸ್ತಿಯೆಂದು ತೋರುತ್ತದೆ. ಇದೇ ಶಾಸನದಲ್ಲಿ ಕಮಳಾದಿತ್ಯ ಒಂದು ಪದ್ಯದಲ್ಲಿ ತನ್ನನ್ನು 'ಕವಿತೇಶ ಮದಪ್ರಭಂಜನ' ಎಂಬ ಬಿರುದಿನಿಂದ ಕರೆದುಕೊಂಡಿದ್ದಾನೆ. ಹಾಗಾಗಿ ಈತನ ಸಮಕಾಲೀನನಾದ ಕವಿತೆಗೆ ಎಂಬ ಶಾಸನಕವಿಯಿರಬೇಕು ಎಂದು ಮೇವುಂಡಿ ಮಲ್ಲಾರಿ ಅಭಿಪ್ರಾಯಪಡುತ್ತಾರೆ.[೩೭] ಇವರ ವಾದವನ್ನು ಮುಂದುವರೆಸುವುದಾದರೆ 'ಕವಿತೇಶ ಮದಪ್ರಭಂಜನ' ಎಂಬುದು ಕಮಳಾದಿತ್ಯನ ಬಿರುದಾಗಿರಬಹುದು.

**ಕಮಳಾದಿತ್ಯ ತನ್ನ ಬಗ್ಗೆ ಹೀಗೆ ಹೇಳಿಕೊಂಡಿದ್ದಾನೆ.**

**"ಭುವನಂ ವನನಿಧಿ ಸುರಗಿರಿ**
**ದಿವಕುಳಮಿನ ಚಂದ್ರರುಳ್ಳಿನಂ ಧರ್ಮ್ಮಮಿದು**
**ಧೃವಮಾಗಿ ನಡೆಗೆ ಶಾಸನ**
**ಕವಿ ಕಮಳಾದಿತ್ಯ ರಚಿತ ಕಾವ್ಯಾದೇಶಂ..."**

ಗಂಗರಾಶಿಯ ಗುಡ್ಡಿ ಹಾಗೂ ಧನವಂಶಕ್ಕೆ ಸೇರಿದ ಕಂಚಿಯಬ್ಬೆ (ಕಂಚಿಕಬ್ಬೆ ಅಥವಾ ಕಂಚಲೆ) ಸುವರ್ಣಾಕ್ಷಿ ದೇವಾಲಯಕ್ಕೆ ದತ್ತಿ ನೀಡಿದ ವಿಚಾರವನ್ನು ಶಾಸನ ತಿಳಿಸುತ್ತದೆ. ಸೊಗಲ ಗ್ರಾಮದ ಪೌರಾಣಿಕ ಹಿನ್ನೆಲೆ ಶಾಸನದಲ್ಲಿ ನಿರೂಪಿತವಾಗಿದೆ. ಕವಿಯು ಅನುಷ್ಟುಪ್, ಕಂದ,

ಉತ್ಪಲಮಾಲೆ, ಮತ್ತೇಭವಿಕ್ರೀಡಿತ ಹಾಗೂ ಚಂಪಕಮಾಲಾ ವೃತ್ತಗಳನ್ನು ತನ್ನ ರಚನೆಯಲ್ಲಿ ಬಳಸಿದ್ದಾನೆ.

**ಸೊಗಲದೇಶದ ವರ್ಣನೆಯನ್ನು ಹೀಗೆ ಮಾಡಿದ್ದಾನೆ.**

> **ಪಂಕಜಷಂಡದಿಂದೆಸೆವ ನೆಯ್ದಿಲ ಪೊಗಳದಿಂ ತಳಿರ್ತ ಮಾ**
> **ವಿಂ ಕುಸುಮೋದಿತಂ ಕೊಸಗು ಪಾದರಿ ನೇಱುಲಶೋಕೆ ಬಾಟಿಯೆಂ**
> **ಬಂಕದ ವೃಕ್ಷಜಾತಿಗಳಿನಿಂಚರದಿಂ ಪುಗಲೆಂಬ ಕೋಕಿಲಾ**
> **ಳಂಕೃತದಿಂದೆ ಸಾಲಬನಮೊಪ್ಪುವುದೀ ವಿಷಯಾಂತರಾಳದೊಳ್ ॥**

**ಕಂಚಿಯಬ್ಬೆಯನ್ನು ಕುರಿತು ಪ್ರಶಂಸೆ :**

> **ಹರಚರಣಾಬ್ಜಭೃಂಗಿ ಕಪಟೋದಯವರ್ಜಿತೆ ನಿರ್ಮಲಾಂಗಿ ಬಾ**
> **ಸುರತರಮೂರ್ತಿ ನಿರ್ಮಳಿನ ಕೀರ್ತಿ ದಯಾಪರೆ ದಾನಧರ್ಮತ**
> **ತ್ಪರಗುಣಯುಕ್ತೆ ದೇವಗುರುಭಕ್ತೆ ಸುಗೋತ್ರ ಪವಿತ್ರೆಯೆಂದು ವಿ**
> **ಸ್ತರದೊಳೆ ಕೀರ್ತಿಕುಂ ವಸುಧೆ ಸಂತಸದಿಂದಮೆ ಕಂಚಿಕಬ್ಬೆಯಂ ॥**

ಎಂದು ವರ್ಣಿಸಲಾಗಿದೆ

**ಅಡಿಟಿಪ್ಪಣಿಗಳು:**

೧. ಪಿ.ವಿ.ಕೃಷ್ಣಮೂರ್ತಿ (ಸಂ): ತಮಿಳುನಾಡು ಕನ್ನಡ ಶಾಸನಗಳು ತಿರುವಳ್ಳಂ (ಜಿ) ಧರ್ಮಪುರಂ ಶಾ.ಸಂ.೯೦, ಪುಟ–೯೫.
೨. ಎಂ.ಎಂ.ಕಲಬುರ್ಗಿ: ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ ಪುಟ–೧೪೩.
೩. EC.Vol. XI. ಚಿಕ್ಕಮಗಳೂರು (ಜಿ) ಕೋಟೆಪೂರು (ತಾ) ಶಾ.ಸಂ–೧೪೮ AD ಪುಟ–೯೧–೯೨.
೪. EC. Vol .V. No-೩೬, ಮೈಸೂರು (ಜಿ) ಕೃಷ್ಣರಾಜನಗರ (ತಾ) ಚಿಕ್ಕಹನಸೋಗೆ ಪುಟ–೨೩–೨೪.
೫. (ಸಂ) ಕೆ.ಆರ್.ಗಣೇಶ್: ಆಂಧ್ರಪ್ರದೇಶದ ಕನ್ನಡ ಶಾಸನಗಳು; ಕಡಪ (ಜಿ)ಜಮ್ಮಲಮಡುಗು (ತಾ) ದಾನವುಲಪಾಡ ಪುಟ–೧೯–೨೦.
೬. ಎಂ.ಎಂ.ಕಲಬುರ್ಗಿ: ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ ಪುಟ–೧೪೬–೧೪೭.
೭. I.A. Vol .XIII. ಧಾರವಾಡ (ಜಿ) ನರಗುಂದ (ತಾ) ದಂಡಾಪುರ AD, ಪುಟ–೨೨೩.
೮. ಆರ್.ನರಸಿಂಹಚಾರ್ : ಕರ್ನಾಟಕ ಕವಿ ಚರಿತ:– ೧, ಪುಟ–೩೧೦.
೯. ಎಂ.ಎಂ.ಕಲಬುರ್ಗಿ: ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ, ಪುಟ–೧೪೯.
೧೦. E.C. Vol .VII. No-೨೫೯. ಶಿವಮೊಗ್ಗ (ಜಿ) ಬಂದಳಿಕೆ, ೯೧೮ AD, ಪುಟ–೨೧೯.
೧೧. ಎಂ.ಎಂ.ಕಲಬುರ್ಗಿ ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ ಪುಟ–೧೪೯.
೧೨. E.I. XIII. ಧಾರವಾಡ (ಜಿ) ಶಿಗ್ಗಾವಿ (ತಾ) ಕಳಸ ೦ಆ, ಪುಟ–೩೨–೩೩.
೧೩. ಎಂ.ಎಂ.ಕಲಬುರ್ಗಿ: ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ ಪುಟ– ೧೫೧.
೧೪. E.C. Vol IV. ಮೈಸೂರು (ಜಿ) ಹೆಗ್ಗಡದೇವನ ಕೋಟೆ (ತಾ) ಹಿರನಂದಿ AD, ಪುಟ–೧೧೬.
೧೫. E.C. Vol .X ಕೋಲಾರ (ಜಿ) ಚಿಂತಾಮಣಿ (ತಾ) ಕುರಬೂರು ೯೩೧ AD, ಪುಟ–೪೩–೪೪.
೧೬. ಎಂ.ಎಂ.ಕಲಬುರ್ಗಿ: ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ ಪುಟ–೧೫೨.

೧೭. E.C. Vol .XI. No.೭೬. ಚಿತ್ರದುರ್ಗ (ಜಿ) ಚಿತ್ರದುರ್ಗ (ತಾ) ಇಸಾಮುದ್ರ (ಗ್ರಾ) AD ಪುಟ– ೪೬.

೧೮. E.C. Vol .VII No- ೪೨ ಮಂಡ್ಯ (ಜಿ) ಮದ್ದೂರು (ತಾ) ಆತಕೂರು ೯೫೦ AD, ಪುಟ–೨೭೬.

೧೯. ಟಿ.ವಿ.ವೆಂಕಟಾಚಲಶಾಸ್ತ್ರೀ : ಪ್ರಾಕ್ತನ, ಪುಟ–೯೫.

೨೦. ಎಚ್.ಕೃಷ್ಣಶಾಸ್ತ್ರೀ, (ಸಂ) E.I. XI.No-19, ಪುಟ–೨೮೭.

೨೧. ಕೆ.ಆರ್. ಗಣೇಶ್ (ಸಂ) ಆಂಧ್ರಪ್ರದೇಶದ ಕನ್ನಡ ಶಾಸನಗಳು ಭಾಗ–೨, ಕರೀಂನಗರ (ಜಿ) ಕುರ್ಕ್ಯಾಲ ಪುಟ–೫೧.

೨೨. ಮೇವುಂಡಿ ಮಲ್ಲಾರಿ: ಕನ್ನಡ ನಾಡಿನ ಶಾಸನಕವಿಗಳು ಪುಟ–೩೧.

೨೩. ಅದೇ ಪುಟ–೩೧.

೨೪. ಕೆ.ಆರ್. ಗಣೇಶ್ (ಸಂ) ಆಂಧ್ರಪ್ರದೇಶದ ಕನ್ನಡ ಶಾಸನಗಳು ಭಾಗ–೨, ಕರೀಂನಗರ (ಜಿ)ಕುರ್ಕಾಲ –೪೦೪, ಪುಟ–೫೧.

೨೫. ಬಾ.ರಾ. ಗೋಪಾಲ್ (ಸಂ) E.C.Vol.- IX, ಹಾಸನ (ಜಿ) ಬೇಲೂರು (ತಾ) ಬಸ್ತಿಹಳ್ಳಿ ಪುಟ–೩೫೧.

೨೬. ಕೆ.ಆರ್. ಗಣೇಶ್ (ಸಂ) ಆಂಧ್ರಪ್ರದೇಶದ ಕನ್ನಡ ಶಾಸನಗಳು ಭಾಗ–೧, Vol-V, No-೧೭೧, ಅನಂತಪುರ (ಜಿ) ಪುಟ– ೧೮೯.

೨೭. ಜಿ.ಎಸ್. ಉಪಾಧ್ಯ : ಮಹಾರಾಷ್ಟ್ರದ ಕನ್ನಡ ಶಾಸನಗಳು, ಕ.ವಿ.ಶಾ.ಸಂ–VI ಪುಟ–೧೩೬–೧೩೯.

೨೮. E.C. Vol.-XI. ತುರುವನೂರು, ಬೇವಿನಹಳ್ಳಿ ೯೬೮ AD, ಪುಟ–೭೪.

೨೯. ಹಾ.ಮಾ.ನಾಯಕ (ಸಂ) ಕನ್ನಡ ಸಾಹಿತ್ಯ ಚರಿತ್ರೆ ಮೈಸೂರು ವಿ.ವಿ. ಸಂ–III ಪುಟ–೨೧೨.

೩೦. B.K.I. Vol-I No- ೪೧, ಧಾರವಾಡ (ಜಿ) ಗದಗ (ತಾ) ನಾಗಾವಿ, ಪುಟ– ೯೨೫–೯೨೭.

೩೧. ಎಚ್.ಕೃಷ್ಣಶಾಸ್ತ್ರೀ (ಸ) SII. Vol. XI No-೪೨, ಧಾರವಾಡ ರೋಣ (ತಾ) ಸವಡಿ ೯೭೦ AD, ಪುಟ–೨೭.

೩೨. E.C. Vol-IX. No-೫೫೧, ಹಾಸನ (ಜಿ) ಬೇಲೂರು (ತಾ) ಕರಗಡ ೯೭೧ AD, ಪುಟ–೪೮೦.

೩೩. ಎ.ವಿ.ನರಸಿಂಹಮೂರ್ತಿ (ಸಂ): E.C. Vol-XII, No- ೩೪, ಚಿಕ್ಕಮಗಳೂರು (ಜಿ) ಕಡೂರು (ತಾ) ಕೋಟೆಬಾಗಿಲು ಪುಟ–೫೨.

೩೪. ವಿ.ಜಯರಾಮ್: ಕನ್ನಡ ಶಾಸನ ಸಾಹಿತ್ಯ; ಪುಟ–129.

೩೫. E.C.Vol-I, No-98 AD, ಕೊಡಗು (ಜಿ) ವಿರಾಜಪೇಟೆ (ತಾ) ಸೆಗ್ಗೂರು ೯೭೮ AD, ಪುಟ–೬೧.

೩೬. ಎನ್. ಲಕ್ಷ್ಮೀನಾರಾಯಣ: (ಸಂ) E.I. Vol-XVI, ಬೆಳಗಾವಿ (ಜಿ) ಸವದತ್ತಿ (ತಾ) ಸೊಗಲ–೯೮೦ AD ಪುಟ–೩.

೩೭. ಮೇವುಂಡಿ ಮಲ್ಲಾರಿ: ಕನ್ನಡ ನಾಡಿನ ಶಾಸನ ಕವಿಗಳು: ಪುಟ–೨೮.

# ಅಧ್ಯಾಯ – ೪

## ೧೦ನೇ ಶತಮಾನದ ಶಾಸನ ಕವಿಗಳು

**ಶ್ರೀಕಂಠ ಪಂಡಿತ ಕ್ರಿ.ಶ. ೧೦೦೦**

ಮೈಸೂರು ಜಿಲ್ಲೆಯ, ನರಸೀಪುರ ತಾಲೂಕಿನ, ಬಸವನಹಳ್ಳಿಯ ಶಾಸನ[೧] ಗಂಗದೊರೆ ಸತ್ಯವಾಕ್ಯ ಪೆರ್ಮಾನಡಿಯ ಆಳ್ವಿಕೆಯ ಕಾಲಾವಧಿಯಲ್ಲಿ ಶ್ರೀಕಂಠಪಂಡಿತ ಭಟಾರರ ಕೈಯಲ್ಲಿ ಎರೆಯಮ್ಮನು ಕೊಂಡು ಎರೆಯಂಗೇಶ್ವರ ದೇವರಿಗೆ 'ಮಣ್ಣು ಇರ್ಛ್ಛಣ್ಡುಗ ನೀರ್ಮ್ಮಣ್ಣು ಇರ್ಛ್ಛಣ್ಡುಗ ಮಡುವಿನ ಮಣ್ಣು ಕೊಂಡು ಕೊಟ್ಟರು. ಇದನ್ನು ಶಾಸನದಲ್ಲಿ ಹೀಗೆ ಉಲ್ಲೇಖಿಸಿದೆ.

> **"ಶ್ರೀಕಂಠಪಣ್ಡಿತ ಭಟಾರರ ಕಯ್ಯಾಳೆ**
> **ಎಱೆಯಮ್ಮಂ ಕೊಣ್ಡು ಎಱೆಯಙ್ಗೇ**
> **ಶ್ವರಕ್ಕೆ  ಬಿಟ್ಟ ಮಣ್ಣು ಇರ್ಛ್ಛಣ್ಡುಗ**
> **ನೀರ್ಣ್ಣ್ಣ್ಣ ಕೊಣ್ಡು ಕೊಟ್ಟರಿದಕ್ಕೆ ॥**

ಎಂದಿದೆ. ಈ ಶಾಸನ ಕೊನೆಗೆ ಶಾಸನ ಕವಿಯಾದ ಶ್ರೀಕಂಠಪಂಡಿತನ ಹೆಸರು ಹೀಗಿದೆ.

> "ಇ ಲೇಖ ಬರೆದೋ ಶ್ರೀಕಂಠಪಣ್ಡಿತ"

**ದಿನಕರಯ್ಯ ಸೆಟ್ಟಿ (ಕ್ರಿ.ಶ.ಸು. ೧೦೦೦)**

ಮೈಸೂರು ಜಿಲ್ಲೆಯ, ಯಳಂದೂರು ತಾಲೂಕಿನ, ಗಣಿಗನೂರು ಶಾಸನವು[೨] ಗಂಗ ದೊರೆ ಸತ್ಯವಾಕ್ಯ ಪೆರ್ಮಾನಡಿಯ ಕಾಲಾವಧಿಯಲ್ಲಿ ಕಾಲದ ಉಲ್ಲೇಖವಿಲ್ಲದ ಶಾಸನವು ಬರಹದ ಆಧಾರದ ಮೇಲೆ ಸತ್ಯ ಸಮೇತ ಗುಣಗಣಾಳಂಕೃತ ಬಲಿವಂಸೋದ್ಭವ ಘನರುದ್ರಸ್ವಾಮಿಯ ವತ್ಸಳ ಶ್ರೀಮತ್ 'ಆರಕುಟ್ಟಿಯು ಆರಕುಟ್ಟೇಶ್ವರಕ್ಕೆ ಕೊಟ್ಟ ಗದ್ದೆ ಕಲೆಯಂಗನು ಆದಿತ್ಯಭಟಾರಗೆ ಎಳೆಯಬ್ಬೆ ಕೊಟ್ಟ ಭೂಮಿಯು ಸಲ್ವುದು ಇದು ಎಂದು ಹೀಗೆ ಹೇಳಿದೆ.

> **"ಸಲ್ವುದು ಇದು ಸಿವಭಕ್ತಿಭಟಾರಕರ್ಪಡೆದೋರ್ನ್ನನ್ದಿಯ**
> **ಬೞಿಯವರಾಳ್ವೊ ದೇಗುಲಮುಂಮನ್ಯರೋರೀಕ್ಷಿಸುವೊ**
> **ಆರಕುಟ್ಟಿಯಾ ಧರ್ಮದೊಳಿಟ್ಟು ಶಿವಭಕ್ತಿಭಟಾರಕರ್ದೆ**
> **ಗುಲಮ್ಮಾಡಿಸಿದೊರ್ ಪೊೞಲಬ್ಬೆಯ ಕೊಟ್ಟ ಮಣ್ಣಯ್ಗೊಳ್"**

ಎಂದು ಪೊಳಲಬ್ಬೆಯು ಕೊಟ್ಟ ಭೂದಾನವನ್ನು ಶಿವಭಕ್ತಿಭಟಾರಕರು ದೇವಾಲಯಕ್ಕೆ ಬಳಸಿರುವುದು ಹೇಳಲಾಗಿದೆ.

**ಹರಿಯಣ್ಣ (ಕ್ರಿ.ಶ.೧೦೦೦)**

ಬಾಗಲಕೋಟೆ ಜಿಲ್ಲೆಯ, ಬಾದಾಮಿಯ ತಾಲೂಕಿನ, ಪಟ್ಟದಕಲ್ಲಿನ ಶಾಸನ[೩] ಶಾಸನ ಕವಿಯಾದ 'ಹರಿಯಣ್ಣ' ಬರೆದ ಶಾಸನದ ತುಂಡೊಂದು ದೊರೆತಿದೆ. ಇದರಲ್ಲಿ ಹೆಚ್ಚಿನ ವಿವರಗಳು ದೊರೆಯದಿದ್ದರೂ 'ಹರಿಯ್ಣಂ ಬರೆದ' ಎಂದಿದೆ. 'ಪಾಳೋಜನಬೆಸಂ' ಎಂದು ಶಾಸನ ಕೆತ್ತನೆ ಮಾಡಿದವರ ವಿವರವಿದೆ.

**ಬಿಂದಯ್ಯ (ಕ್ರಿ.ಶ. ೧೦೦೦)**

ಮಂಡ್ಯ ಜಿಲ್ಲೆಯ, ನಾಗಮಂಗಲ ತಾಲೂಕಿನ, ಎಲೆಕೊಪ್ಪ[೪] ಗ್ರಾಮದ ಪಶ್ಚಿಮದ ಸಮೀಪ ಬಂಡೆಯ ಶಾಸನವನ್ನು ಶ್ರೀಮಾದೇಳಾಚಾರ್ಯ್ಯರ ಅವರ ಶಿಷ್ಯ ಬಿಂದಯ್ಯ ಕವಿಯು ರಚಿಸಿದನೆಂದು ತಿಳಿದುಬರುತ್ತದೆ. ಕಾಲದ ಉಲ್ಲೇಖವಿಲ್ಲದ ಈ ಶಾಸನವನ್ನು ಶಾಸನ ಸಂಪಾದಕರು ಲಿಪಿ ದೃಷ್ಠಿಯಿಂದ ೧೦ನೇ ಶತಮಾನಕ್ಕೆ ಸೇರಿಸಿದ್ದಾರೆ. ಈ ಶಾಸನದಲ್ಲಿ ಮೂರು ಕಂದ ಪದ್ಯಗಳಿವೆ.

ಒಬ್ಬ ಜೈನ ಸನ್ಯಾಸಿ (ಗೊಹೆಯ್‌ಭಟ್ಟಾರಕರನ್)ಯು ಮೂರು 'ಭಟ್ಟಾರಕರನ್' ಆಗಿದ್ದನೆಂದು ಅವನ ಪ್ರಶಸ್ತಿಯನ್ನು ಕವಿ ಮಾಡಿದ್ದಾನೆ. ಶಬ್ದಾಲಂಕಾರ ಪ್ರಯೋಗವಾಗಿರುವ ಈ ಶಾಸನದಲ್ಲಿ ಕವಿಯ ಪ್ರಾಢಿಮೆ ಹೀಗೆ ಕಂಡುಬಂದಿದೆ.

> **"ತಳವಳಗನಾಗಿ ಪುಲಿಗಳ**
> **ಗರ್ಜ್ಜನೆಗಾದ ಮಳ್ಳಿಕ ಗುಹೆಯಿಂದ ಮಣಂ**
> **ತಳರದೆ ನೆಲಸಿಪು ಮನೋ**
> **ಬಳಮುಬ್ಬಿ ಗಗುರ್ವ್ವ ಗೊಹೆಯ ಭಟ್ಟಾರಕರನ್"**

**ಗೋಕರ್ಣಯ್ಯ (ಕ್ರಿ.ಶ.೧೦೦೧-೦೨)**

ಆಂಧ್ರಪ್ರದೇಶದ ವರಂಗಲ್ ಜಿಲ್ಲೆಯ, ಜಿನಗಾಂ ತಾಲೂಕಿನ, ಚೆರಿಯಲ್ ಗ್ರಾಮದ ಶಾಸನ[೫] ಕ್ರಿ.ಶ ೧೦೦೧-೦೨ ಕ್ಕೆ ಸೇರಿದ್ದು, ಚಾಲುಕ್ಯ ದೊರೆ ಇರಿವಬೆಡಂಗ ದೇವನ ಆಳ್ವಿಕೆಯನ್ನು ಹೇಳುತ್ತದೆ. ರಾಣಿ ಅಯ್ಯಬ್ಬದೇವಿಯ ಅಕ್ಕಬಬ್ಬೆ ಎಂಬುವವಳು ಚಿರಿಯಾಲದ ಗೋವಯ ಗಾವುಂಡನಿಗೆ ದಸವಂದ ಮಾನ್ಯವನ್ನು ನೀಡಿದುದನ್ನು ಇದರಲ್ಲಿ ದಾಖಲಿಸಿದೆ.

ಆಯ್ವಬ್ಬೆಯ ಸೇನಬೋವ ಬಿಜ್ಜಮಯ್ಯ ಪರಿಗಾವುಂಡನ ಸೇನಬೋವ 'ಗೋಕರ್ಣಯ್ಯ' ಎಂಬುವವರು ಈ ಶಾಸನವನ್ನು ರಚಿಸಿದ್ದಾರೆ.

**"ಶ್ರೀಮದಿಜೆವ ಬೆಡಂಗ ದೇವರ ರಾಜ್ಯಾಭಿವೃದ್ಧಿಯೊಳ್**
**ಅರಸಿ ಶ್ರೀಮದಾಯ್ವಬ್ಬ ದೇವಿಯರ ಅಕ್ಕಬಬ್ಬೆಂಗಳ್**
**ಚರೆಯಾಲೆಯ ಗೊಮ್ಮಯಗಾವುಣ್ಡಂಗಮಲ್ಲಿ**
**ಯಳಿಯಂಲು ನೆಲ್ಲೆಕ ವೇಕಾದಿವೆರೆಯ**
**ಕೆಱಿಯ ನಗಟೆಸುವನ್ದೆ ಕಂಭಿಮಿಕ್ಕಿದ**
**ವ್ಯವಸ್ಥೆ ಎನ್ತೆನೆ ಕೆಱಿ ಎನಿತು ಬೀಜಕ್ಕ**
**ಪರಿದುದು ಅನಿತರೊಳಂ ದಸವನ್ದಮಂ**
**ಮಾನ್ಯಮಂ ಸಲ್ಲಿಸುವರ್ಕ್ಕೆರೆಗೆ ನೀರ್ಪಲಂದೆ**
**ಪೌಳಿಯಂ ತಪ್ಪದೆ ಸಲಿಸುವರ್ ಊರೊಳ್"** ಎಂದಿದೆ.

ಶಾಸನದ ಕೊನೆಗೆ ಸೇನಬೋವಂ 'ಗೋಕರ್ಣಯ್ಯಂ' ಬರೆದಂ ಎಂದು ಇದೆ.

**ರನ್ನ (ಕ್ರಿ.ಶ.೧೦೦೭)**

ಗದಗ ಜಿಲ್ಲೆಯ, ಗದಗ ತಾಲೂಕಿನ, ಲಕ್ಕುಂಡಿಯ[೬] ಅತ್ತಿಮಬ್ಬೆಯ ಎರಡು ಶಾಸನಗಳನ್ನು ರನ್ನ ಕವಿ ರಚಿಸಿದ್ದಾನೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೭] ಕಲ್ಯಾಣ ಚಾಲುಕ್ಯ ಅರಸ ಆಹವಮಲ್ಲ ಬಿರುದಾಂಕಿತನಾದ ಸತ್ಯಾಶ್ರಯನನ್ನು ಉಲ್ಲೇಖಿಸುವ ಈ ಶಾಸನಗಳ ಕಾಲ ಕ್ರಿ.ಶ. ೧೦೦೭. ಈ ಎರಡೂ ಶಾಸನಗಳಲ್ಲಿ ಅತ್ತಿಮಬ್ಬೆಯ ಪ್ರಶಸ್ತಿಯನ್ನು ಹೇಳಲಾಗಿದೆ. ಶಾಸನ ಸಂಖ್ಯೆ ೫೩ ಮೂಲ ಶಾಸನವಾಗಿದ್ದು, ಈ ಶಾಸನವು ತ್ರುಟಿತವಾದದ್ದರಿಂದ ೫೨ನೇ ಸಂಖ್ಯೆಯ ಶಾಸನವನ್ನು ಹೊಸದಾಗಿ ಬರೆಯಲಾಗಿದೆ. ೫೨ನೇ ಶಾಸನವನ್ನು ಸಿರಿಪಾಲಸೆಟ್ಟಿಯ ಮಗ ಬಾಹುಬಲಿಯು ರಚಿಸಿದ್ದಾನೆ. ಬಾಹುಬಲಿಯೂ ಆ ಕಾಲದ ಶಾಸನಕವಿಯಾಗಿದ್ದನೆಂದು ಈ ಶಾಸನದಿಂದ ತಿಳಿದುಬರುವುದು.

೫೨ನೇ ಶಾಸನದ ಕೊನೆಯಲ್ಲಿ 'ಜಟಿಧರ್ಮಾಂಬರ ಕವಿ ಸಿರಿಪಾಳಸೆಟ್ಟಿಯ ಆತ್ಮನಜನ್ ಉದ್ಯುತ್ ಚರಿತಂ ಬಾಹುಬಲಿ ಸವಿಸ್ತರದಿಂ ಬರೆದನ್' ಎಂಬ ಉಲ್ಲೇಖದಿಂದ ಈ ಶಾಸನವನ್ನು ಸಿರಿಪಾಲನ ಮಗ ಬಾಹುಬಲಿ ಎಂಬ ಕವಿಯು ರಚಿಸಿದನೆಂದು ತಿಳಿದುಬರುತ್ತದೆ. ೫೩ನೇ ಶಾಸನವು ತ್ರುಟಿತವಾಗಿದ್ದು, ಕೆಲವು ಮಾಹಿತಿಗಳು ಮಾತ್ರ ಕಾಣಿಸುತ್ತದೆ. ಈ ಶಾಸನವನ್ನು ರನ್ನನು ರಚಿಸಿರಬಹುದೆಂದು ತೀ.ನಂ.ಶ್ರೀ. ಅವರು ಅಭಿಪ್ರಾಯಪಟ್ಟಿದ್ದಾನೆ.[೮] ಈ ಶಾಸನ ಪದ್ಯವನ್ನು ರನ್ನನೇ ರಚಿಸಿರಬಹುದೆಂಬುದಕ್ಕೆ ತೀ.ನಂ.ಶ್ರೀ. ಅವರು ಕೊಡುವ ಕಾರಣವೆಂದರೆ ಈ ಶಾಸನದಲ್ಲಿ ರನ್ನನ ಅಜಿತಪುರಾಣ (೧೨-೯)ದ ಕೆಲವು  ಪದ್ಯಗಳು ಕಂಡುಬರುವುದು. ಇದರಿಂದ ಈ

ಶಾಸನ ಪದ್ಯಗಳನ್ನು ರನ್ನನು ರಚಿಸಿದ್ದು, ಈ ಶಾಸನ ತ್ರುಟಿತವಾದ ಕಾಲದಲ್ಲಿ ಬಾಹುಬಲಿ ಕವಿ ಶಾಸನವನ್ನು ರಚಿಸಿದ್ದಾನೆಂದು ಹೇಳುತ್ತಾರೆ.

ಈ ಶಾಸನಪದ್ಯ ರನ್ನನ ಅಜಿತಪುರಾಣ ಪದ್ಯಗಳಿದ್ದ ಮಾತ್ರಕ್ಕೆ ಈ ಶಾಸನವನ್ನು ರನ್ನನೇ ರಚಿಸಿದನೆಂದು ಹೇಳಲು ಆಗುವುದಿಲ್ಲ. ಹತ್ತನೇ ಶತಮಾನದಲ್ಲಿ ರನ್ನನು ಪ್ರಖ್ಯಾತ ಕವಿಯಾಗಿದ್ದು, ಕವಿಚಕ್ರವರ್ತಿ, ತ್ರಿರತ್ನತ್ರಯರಲ್ಲಿ ಒಬ್ಬನಾಗಿದ್ದ ಇಂಥ ಪ್ರೌಢಕವಿ ಅಜಿತಪುರಾಣ, ಗದಾಯುದ್ಧ ಚಕ್ರೇಶ್ವರ ಚರಿತ, ರನ್ನಕಂದ, ಪರಶುರಾಮಚರಿತ ಮುಂತಾದ ಕೃತಿಗಳನ್ನು ಬರೆದ ಕವಿಯು ಈ ಶಾಸನ ಕಾವ್ಯವನ್ನು ಬರೆಯಬೇಕಾಗಿದ್ದರೆ ಬೇರೆ ಪದ್ಯಗಳನ್ನು ಬರೆಯುತ್ತಿದ್ದ ತನ್ನ ಕೃತಿಯಿಂದಲೇ ತೆಗೆದುಕೊಂಡು ಶಾಸನ ರಚಿಸಿರುವ ಅನಿವಾರ್ಯತೆ ರನ್ನನಿಗೆ ಇರಲಿಲ್ಲ ಎಂದು ತೋರುತ್ತದೆ.

ಕವಿ ಜನ್ನನು ಕಾವ್ಯಗಳನ್ನು ಬರೆಯುವ ಮೊದಲು ಶಾಸನ ಕವಿಯಾಗಿದ್ದು ಕೈ ಪಳಗಿದ ನಂತರ ಯಶೋಧರಚರಿತೆ, ಅನಂತನಾಥಪುರಾಣ, ಬರೆದದ್ದನ್ನು ಗಮನಿಸಬಹುದು. ಇವನೊಂದಿಗೆ ರನ್ನನನ್ನು ಹೋಲಿಸಿದರೆ ರನ್ನ ಈ ಶಾಸನ ರಚನೆಯಾದ ಕಾಲಕ್ಕೆ ಕ್ರಿ.ಶ.೧೦೦೭ ತನ್ನ ಎಲ್ಲಾ ಕಾವ್ಯಗಳನ್ನು ಬರೆದು ಮುಗಿಸಿದ್ದ ಕಾವ್ಯಗಳನ್ನು ಬರೆದ ನಂತರ ಶಾಸನಗಳನ್ನು ಬರೆಯಲು ಮುಂದಾದನೆ? ಎಂಬ ಪ್ರಶ್ನೆ ಉದ್ಭವವಾಗುತ್ತದೆ.

ಪಂಪನ ೧೩–೧೪ನೇ ಆಶ್ವಾಸದ ವಸ್ತುವನ್ನು ಉಪಯೋಗಿಸಿಕೊಂಡು 'ಗದಾಯುದ್ಧ ಕಾವ್ಯವನ್ನೇ' ರಚಿಸಿದ. ಯಾವಾಗಲೂ ಹೊಸದನ್ನೇ ಆಲೋಚಿಸುವ ರನ್ನನು: ಖಂಡಿತ ಈ ಶಾಸನ ಕಾವ್ಯವನ್ನು ಬರೆದಿರಲಾರ ಎನ್ನಿಸುವುದು ಸಹಜ. ಬೇರೋಬ್ಬ ಕವಿ ರನ್ನನ ಅಜಿತಪುರಾಣದಿಂದ ಈ ಪದ್ಯಗಳನ್ನು ತೆಗೆದುಕೊಂಡಿರಬಹುದು. ಈ ಶಾಸನದ ಕೇಂದ್ರವ್ಯಕ್ತಿ ಅತ್ತಿಮಬ್ಬೆ, ಈ ಶಾಸನದಲ್ಲಿ ಅತ್ತಿಮಬ್ಬೆಯ ವರ್ಣನೆ, ಅತ್ತಿಮಬ್ಬೆಯ ಕಾಲದ ಚರಿತ್ರೆ, ಧರ್ಮ, ಸಂಸ್ಕೃತಿ, ಅತ್ತಿಮಬ್ಬೆಯ ಪವಾಡಗಳು, ಅವಳು ಕಟ್ಟಿಸಿದ ಬಸದಿ, ಅದಕ್ಕೆ ಕೊಟ್ಟ ದಾನ ಮುಂತಾದ ವಿವರಗಳನ್ನು ವರ್ಣನಾತ್ಮಕವಾಗಿ ಕವಿ ಚಿತ್ರಿಸಿದ್ದಾನೆ.

ಈ ಶಾಸನದಲ್ಲಿ ೩೭ ಪದ್ಯಗಳಿದ್ದು ಸಂಸ್ಕೃತ ಪದ್ಯಗಳೂ ಸೇರಿಕೊಂಡಿರುವುದರಿಂದ ಶಾಸನಕವಿಯು ದ್ವಿಭಾಷಾ ಪಂಡಿತ (ಸಂಸ್ಕೃತ–ಕನ್ನಡ)ನಾಗಿದ್ದನೆಂದು ತಿಳಿದುಬರುತ್ತದೆ.

ಅತ್ತಿಮಬ್ಬೆಯ ಪವಾಡವನ್ನು ಚಿತ್ರಿಸಿರುವ ಕವಿಯ ಪ್ರತಿಭೆಗೆ ಒಂದು ಕಂದಪದ್ಯ ಈ ರೀತಿಯಾಗಿದೆ.

**"ಪ್ರಳಯಾಗ್ನಿಯಂತೆ ಕಟಕಮ**
**ನೊಳಕೊಂಡಳುರ್ವಗ್ನಿ ದಾನ ಚಿಂತಾಮಣಿ ನಿ**
**ರ್ಮಳ ಜಿನ ಗಂಧೋದಕಮಂ**
**ತಳಿಯಲು ಪಶಮಿಸಿತೆಂದೊಡೇವಣ್ಣಿಸುವೆಂ"**

ರಾಜಧಾನಿಯಲ್ಲಿ ಒಮ್ಮೆ ಪ್ರಳಯ ಕಾಲದ ಬೆಂಕಿಯಂತೆ ಹಬ್ಬಿದ ಅಗ್ನಿಯನ್ನು ಅತ್ತಿಮಬ್ಬೆಯ ಪರಿಶುದ್ಧವಾದ ಜಿನನ ನೀರನ್ನು ಚುಮುಕಿಸಲು ಅದು ಆರಿಹೋಯಿತೆಂದು ಕವಿ ಆಶ್ಚರ್ಯದಿಂದ ಹೇಳುತ್ತಾನೆ.

ಅತ್ತಿಮಬ್ಬೆಯ ಪವಾಡಗಳನ್ನು ಹೇಳುವ ಇತರ ಶಾಸನ ಪದ್ಯಗಳು ಈ ರೀತಿಯಾಗಿದೆ.

**"ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ ಜಿನಭಕ್ತೆ ಪೋಗಿ ಕಾಣ್ಬನ್ನೆಗ**
**ಮನ್ನಮಂ ತೊಱೆದು ಸರ್ವತಮಂ ಮುದಮೇಱೆ ತಜ್ಜಿನಾ**
**ಸನ್ನದೊಳತ್ತಿಮಬ್ಬೆಗೆ ಪಥಶ್ರಮಮಾದೊಡಕಾಲ ವೃಷ್ಟಿಯಾ**
**ಯ್ತಿನ್ನವು ದೇವಭಕ್ತಿಗದು ಚೋದ್ಯಮೇ ಕೊಳ್ಳವೆ ಪುಷ್ಪವೃಷ್ಟಿಗಳ್"**

**ಮದವತ್ಕರಿ ಸೆಱೆಯಿಂ ಪಱೆ**
**ದೊದವಿದ ಮುಳಿಸಿಂದೆ ಭೋರನೆಯ್ತಂದೊಡದ**
**ರ್ಕದಿರದಿರೆ  ಭಕ್ತಿಯಿಂದದು**
**ಪದಯುಗಕೆಱಗಿದುದು ದಾನ ಚಿಂತಾಮಣಿಯಾ**

**ಒಡನೇಱೆ ಸವತಿ ನೂಂಕ**
**ಲ್ಕೊಡರಿಸೆ ತೊಱೆಯೊಳಗೆ ಪಱುಗಲತ್ತಿತ್ತಲಣಂ**
**ಮಿಡುಕದೆ ತಿರಿಯುತ್ತಿರೆ ಕಂ**
**ಡಡಿಗೆಱಗಿದಳತ್ತಿಯಬ್ಬೆ ಗತಿಭಯವಶದಿಂ**

**ಜಿನಧರ್ಮಪತಾಕೆಗೆ ವಿಮ**
**ಳನರ್ಮದಾನದಿಯ ಕುರುಳಪಾಪಿಯ ಜಿನನಂ**
**ವಿನುತಂ ಕಾಣ್ಬೆನೆಗಂ ಕೂ**
**ಟನೆ ತೋಱೆದುದು ಸಂದುದಾಜನ್ಮಾಂತಂ"** ಎಂದು ವರ್ಣಿಸಿದೆ.

**ವೆಣ್ಣೆಯ ಭಟ್ಟ (ಕ್ರಿ.ಶ.೧೦೧೦)**

ಅವಿಭಜಿತ ಧಾರವಾಡ ಜಿಲ್ಲೆಯ, ಇಂದಿನ ಗದಗ ಜಿಲ್ಲೆಯ, ಮುಂಡರಗಿ ತಾಲೂಕಿನ ಆಲೂರು ಗ್ರಾಮದ ಶಾಸನ ಕವಿಯು ಕನ್ನಡ ಮತ್ತು ಸಂಸ್ಕೃತ  ಉಭಯ ಭಾಷೆಗಳಲ್ಲಿ ಶ್ರೇಷ್ಠನಾದ ಕವಿಯೆಂದು ಪ್ರಕೀರ್ತಿತನಾಗಿದ್ದಾನೆ. (ಶಾಸನದಲ್ಲಿ ಗ್ರಾಮವನ್ನು ಮಾಳದಾಲೂರು ಎಂದು ಹೆಸರಿಸಲಾಗಿದೆ) ಕಮ್ಮ ಕುಳದ ಬ್ರಾಹ್ಮಣನಾದ  ದಿಂಡಪಂಡಿತರ ಮಗನಾದ ಈ ವೆಣ್ಣೆಯ ಭಟ್ಟನು ಉಭಯಕವೀಂದ್ರನೆಂದು ಕವಿರಾಜವಲ್ಲಭನೆಂದೂ ಆಲೂರು ಕ್ರಿ.ಶ.೧೦೧೦ರ

ಶಾಸನದಲ್ಲಿರುವ ಅವನ ಪ್ರಶಸ್ತಿ ಮಾಲಿಕೆಯಿಂದ ತಿಳಿದುಬರುತ್ತದೆ. ಹೊರತು ಯಾವೊಂದು ಕಾವ್ಯವನ್ನಾಗಲಿ ಶಾಸನವನ್ನಾಗಲಿ ಈತನು ಕೃತಿಗೈದಂತೆ ಕಂಡುಬರುವುದಿಲ್ಲ.

ವೆಣ್ಣೆಯ ಭಟ್ಟ ಕವಿಶ್ರೇಷ್ಠನು, ಕುಟಿಲ ಕೌಟಿಲ್ಯನೆನಿಸಿ ಕದನ ವಿನೋದನೆನಿಸಿ, ಕಲಿಕಾಬೃಹಸ್ಪತಿಯೆನಿಸಿ, ಕವಿತ್ವ, ನೀತಿಮತ್ವ, ವೀರತ್ವ, ವಿದ್ವತ್ತ್ವ ಗುಣ ಹೊಂದಿದವನಾಗಿದ್ದ ಎಂಬುದನ್ನು ಪ್ರಶಸ್ತಿ ಮಾಲಿಕೆಯಲ್ಲಿ ಕಾಣಬಹುದಾಗಿದೆ. ಚಾಲುಕ್ಯ ೫ನೇ ವಿಕ್ರಮಾದಿತ್ಯನ ಮಾಂಡಲಿಕನಾಗಿದ್ದ ಪಲ್ಲವ ಇಜೆವ ಬೆಡಂಗನೊಳಂಬಾದಿ ರಾಜನ ಅಧೀನದಲ್ಲಿ ಈತನು ಮಹಾಸೇನಾಪತಿಯಾಗಿದ್ದನು; ಏಳು ಊರುಗಳಿಗೆ ಅಗ್ರಗಣ್ಯನಾಗಿದ್ದನು. ಸಿರಿಪುರದ (ಈಗಿನ ಸಿರೂರಿನ) ಗುಹೆಯಪುರದ ಅಮರಾಚಾರ್ಯಭಟ್ಟಾರಕರಿಗೆ ನೂರುಮತ್ತರು ಭೂಮಿಯನ್ನು ದಾನಮಾಡಿದ ಬಗ್ಗೆ ಶಾಸನ ಹೇಳಿದೆ. ಈತನ ಮಾದರಿ ಪದ್ಯಗಳಿಲ್ಲವಾಗಿ ಅವನ ಯೋಗ್ಯತೆಗೆ ಪ್ರಮಾಣಭೂತವಾದ ಪ್ರಶಸ್ತಿ ಮಾಲಿಕೆಯನ್ನೇ ಶಾಸನದಿಂದ ಎತ್ತಿ ಕೊಟ್ಟಿದೆ.

> **"ಸ್ವಸ್ತಿ ಸಮಸ್ತರಾಜ್ಯಭರನಿರೂಪಿತ ಮಹಾಸೇನಾಧಿಪತಿ ಪತಿಹಿತಂಚರಣಂ**
> **ರಣರಂಗದುಷ್ಟಂ ದುಷ್ಟನಿಷ್ಟುರಂ ಕುಟಿಲಕೌಟಿಲ್ಯಂ ಕ್ಷುದ್ರವಿದ್ರಾವಣಂ**
> **ಕಲಿಕಾಲ ಬೃಹಸ್ಪತಿ ಪರಿವಾರವಜ್ರಪಂಜರನ ಹಿತಾಹಿಗರುಡನುಭಯ ಕವೀಂದ್ರ**
> **ಕವಿರಾಜವಲ್ಲಭಂ ವಾದೀಭಪಂಚಾನನಂ ಸರಸ್ವತೀ ವಲ್ಲಭಂ ಪರನಾರಿದುರ್ಲಭಂ**
> **ಘಟಿಗನ ಗಂಧವಾರಣಂ ನಯಧಾಮಂ ಚಲದೋಜನಟಿಪಿಲ್ಲದಾತಂ**
> **ನಲ್ಲರ್ಗೆನಲ್ಲಂ ಚತುರಚತುರ್ಮುಖಂ ಕದನವಿನೋದಂ ಮಲೆಯ ಮರ್ದನಂ**
> **ವಿಪ್ರಕುಳಕಮಳಭಾಸ್ಕರಂ ಪಾರ್ವರೊಳ್ಗಂಡ ಸಪ್ತಗ್ರಾಮಾಗ್ರಗಣ್ಯ**
> **ಕಮ್ಮಕುಳೋದ್ಭವಂ ಧೀತ ಗೋತ್ರ ದಿಂಡಪಂಡಿತಪುತ್ರಂ ಛಾತ್ರಕಮಿತ್ರಂ**
> **ಪಂಡಿತಮಂಡನಂ ವೆಣ್ಣೆಯಭಟ್ಟರುಮೆನಿಸಿದ ಶ್ರೀಮನ್ಮಹಾಪ್ರಚಂಡ**
> **ದಂಡನಾಯಕಂ ಘಟಿಯಂಕರಾರ"**

ಎಂದು ಪ್ರಶಸ್ತಿಯಲ್ಲಿ ಆತನ ಪಾಂಡಿತ್ಯ ಪ್ರತಿಭೆಗಳು ವ್ಯಕ್ತಗೊಂಡಿವೆ.

**ಕಾಟ್ಟಜ (ಕ್ರಿ.ಶ.೧೦೧೦)**

ರಾಯಚೂರು ಜಿಲ್ಲೆಯ, ಲಿಂಗಸೂರು ತಾಲೂಕು, ಮಸ್ಕಿ ಶಾಸನವು[೧೦] ಚಾಳುಕ್ಯ ಅರಸ ಇಮ್ಮಡಿ ಜಯಸಿಂಹನ ಕಾಲದಲ್ಲಿ ರಾಜಧಾನಿ ಹಿರಿಯ ಮೊಸಂಗಿಯಲ್ಲಿದ್ದ ಆಹವಮಲ್ಲನ ಚಟ್ಟನಾದ ಕರಿಯಾಯ್ಚಯ್ಯ ಎಂಬುವವನಿಗೆ ನೂರು ಮತ್ತರು ಭೂಮಿಯನ್ನು ಜಯಸಿಂಹ ದಾನ ನೀಡುತ್ತಾನೆ. ಜಯಸಿಂಹನಿಗೆ ಕುಮಾರಗಜಕೇಸರಿ, ಕೀರ್ತಿವಿದ್ಯಾಧರ, ಗಂಡರಗಂಡ, ಸತ್ಯರತ್ನಾಕರ ಮುಂತಾದ ವಿಶೇಷಣಗಳಿದ್ದವು. ಪಿರಿಯ ಮೊಸಂಗೆಯ ಮಾಣಿ ಕೇಶವ ಎಂಬುವವನು ತನ್ನ ದಶವಂದದಲ್ಲಿ ೧೦ ಮತ್ತರು ಭೂಮಿಯನ್ನು ದಾನ ಮಾಡಿದ.

ಶಾಸನ ಕವಿಯಾದ 'ಕಾಟ್ಟಜ'ನು ಪ್ರಶಸ್ತಿ ವಿಭಾಗದಲ್ಲಿ ಅವನ ಪ್ರತಿಭೆ ಪಾಂಡಿತ್ಯ ವ್ಯಕ್ತವಾಗುವುದು.

> **"ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪೃಥೀವ**
> **ಲ್ಲಭ ಮಹಾರಾಜಧಿರಾಜ ಪರಮೇಶ್ವರ ಪರಮ**
> **ಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ**
> **ಶ್ರೀಮತ್ತ್ರಿಭುವನ ಮಲ್ಲದೇವ ಪಾದಪಂಕಜಭ್ರಮರಂ**
> **ಕುಮಾರಗಜಕೇಸರಿ ಕೀರ್ತಿವಿದ್ಯಾಧರಂ ಗಣ್ಡರಗಣ್ಡಂ**
> **ಗಣ್ಡ ವಂಗಾಱಂ ಸತ್ಯರತ್ನಾಕರಂ ಶ್ರೀಮಜ್ಜಯಸಿಂಹದೇವರ್"** ಎಂದಿದೆ.

**ಚಾವುಂಡಮಯ್ಯ (ಕ್ರಿ.ಶ. ೧೦೧೫)**

ಬಿಜಾಪುರ ಜಿಲ್ಲೆಯ, ಇಂಡಿ ತಾಲೂಕಿನ, 'ರೂಗಿ'[೧೧] ಶಾಸನವು ಆರಂಭದಲ್ಲಿ ಚಾಳುಕ್ಯ ವಂಶಾವಳಿಯನ್ನು ನೀಡಿದೆ. ಸತ್ಯಾಶ್ರಯ ಕುಲದ ಜಯಸಿಂಘ, ರಣರಾಗ, ಪುಲಕೇಶಿ, ಕೀರ್ತಿವರ್ಮ, ಎರಡನೇ ಸತ್ಯಾಶ್ರಯ ಆದಿತ್ಯವರ್ಮ, ದುದ್ಧಮಲ್ಲ ವಿಜಯಾದಿತ್ಯ, ಕುಕ್ಕುಜಿ ವಿಕ್ರಮಾದಿತ್ಯ ಎರಡನೇ ಕೀರ್ತಿವರ್ಮ, ಪಿರಿಯ ತೈಲಪ ಎರಡನೆಯ ವಿಕ್ರಮಾದಿತ್ಯ, ಹನ್ಮಕುಂದೆಯ ಭೀಮ, ಅಯ್ಯಣಯ್ಯ, ವಿಕ್ರಮಾದಿತ್ಯ, ನೂರ್ಮಡಿತೈಲ ಆಹವಮಲ್ಲ, ಇರಿವಬೆಡಂಗ ಸತ್ಯಾಶ್ರಯದೇವ, ಇವನ ತಮ್ಮ ದಶವರ್ಮದೇವ, ಇವನ ಮಗ ವಿಕ್ರಮಾದಿತ್ಯದೇವ ಇವನ ತಮ್ಮ ಅಯ್ಯಣದೇವ ಇವನ ತಮ್ಮ ದೇವಣರಸನವರೆಗೆ ನೀಡಲಾಗಿದೆ. ಈ ದೇವಣರಸನನ್ನು ಪಂಚಮಹಾಶಬ್ದ, ಮಹಾಸಾಮಂತ, ತೇಜಮಾರ್ತಂಡ, ಕಂಹಾಟಿ ವಜ್ರಕವಾಟ, ಕೊಂಕಣ ಭಯಂಕರ ವಸುದೈಕಮಲ್ಲದೇವ ಪಾದಪಂಕಜಭ್ರಮರ ಎಂದು ಹೊಗಳಿದೆ.

ಈ ದೇವನರಸನು ನಗರೇಶ್ವರ ದೇವರಿಗೆ ದಕ್ಷಿಣ ದಿಕ್ಕಿನ ಊರೊಡೆಯರ ಮಾನ್ಯವಾದ ಗೋವಣ ಹೊಲದಲ್ಲಿ ಭರಣದ ಕೋಲಿನಲ್ಲಿ ಅಳೆದು ೬೦ ಮತ್ತರು ನೆಲವನ್ನು ತೋಟ, ಮೂರು, ಒಂದು ಗಾಣ, ಮೂರು ಅಂಗಡಿಗಳನ್ನು ದಾನ ನೀಡಿದ ವಿಷಯವಿದೆ.

ಶಾಸನದ ಅಂತ್ಯದಲ್ಲಿ ನಗರೇಶ್ವರದ ಚಂದ್ರಶೇಖರಾಚಾರ್ಯ್ಯರ ಶಿಷ್ಯರಿಗೆ ಇಲ್ಲಿಯ ವೃತ್ತಿಕಾರರಾದ ಕುಳಕರಣಿ ಸೋಮಯ್ಯ ಮತ್ತು ಉತ್ತವಯ್ಯ ಇಲ್ಲಿಯ ದಾತಾರ ದೇಯಿಮಯ್ಯ ಸೆಟ್ಟಿ, ನಲ್ಲಯ್ಯ, ಮರಳಯ್ಯ ಎಲ್ಲರೂ ಸೇರಿ ನಿವೇದಿಸಿಕೊಂಡಿರುವರು. ಮೇಲೆ

ಹೆಸರುಗೊಂಡವರು ತಿದ್ದಿಹೇಳಲು ಸೇನಬೋವನಾದ ಮೊಱಡಿಯ ಚಾವುಂಡಮಯ್ಯ ಬರೆದಿದ್ದಾನೆ.

> **"ಶ್ರೀಮನ್ನಗರೇಶ್ವರದ ಚನ್ದ್ರಶೇಖರಾಚಾರ್ಯ್ಯ**
> **ರ ಚ್ಛಾತ್ರರ್ಗ್ಗೆ ಇಲ್ಲಿಯ ವೃತ್ತಿಕಾಱರ್ ಕುಳ**
> **ಕರಣಿ ಸೋಮಯ್ಯನುಂ ಉತ್ತವಯ್ಯನುಮಿಲ್ಲಿ**
> **ಯ ದಾತಾರಂ ದೇಯಿಮಯ್ಯ ಸೆಟ್ಟಿಯರ**
> **ಗಂ ಮುಟ್ಟಿ ನಲ್ಲಯ್ಯನುಂ ಮರಳಯ್ಯನುಂ**
> **ಮ್ಮಂಚಿಕಾಧಿಮಯ್ಯ ನಿನ್ತಿವರೆಲ್ಲ ತಿಱ್ದಿ ಪೇಳೆ**
> **ಸೇನಬೋವಂ ಮೊಱಡಿಯ 'ಚಾವುಣ್ಡಮಯ್ಯ'**
> **ಸಾಸನಮಂ ಬರೆದಂ"**

ಎಂದು ಹೇಳಲಾಗಿದೆ. ಕಲ್ಲಕುಟ್ಟಿಗನಜ್ಜಮ ಅಕ್ಕರಮಂ ಕಣ್ಡರಿಸಿದಂ ಎಂದಿದೆ.

**ಕಂದರ್ಪ (ಕ್ರಿ.ಶ. ೧೦೧೯)**

ಅವಿಭಜಿತ ಧಾರವಾಡ ಜಿಲ್ಲೆಯ, ಹಾವೇರಿ ತಾಲ್ಲೂಕಿನ, ಕಳ್ಳಿಹಾಳ ಗ್ರಾಮದ ಶಾಸನವೊಂದರ[೧೨] ಕರ್ತೃ. ಈ ಶಾಸನ ಅಲ್ಲಿಯ ದುರ್ಗಾಪರಮೇಶ್ವರಿಯ ದೇವಸ್ಥಾನದಲ್ಲಿದೆ. ಶಾಸನದ ಕೊನೆಯಲ್ಲಿ ಫಲಶೃತಿಯ ಶ್ಲೋಕಗಳು ಮುಗಿದ ನಂತರ 'ಕಂದರ್ಪನ ಕಾವ್ಯ' ಎಂದು ಬರೆದಿದೆ. ಹೆಸರಿನ ಹೊರತು ಕವಿಯ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ.

ಕಲ್ಯಾಣದ ಚಾಳುಕ್ಯ ಮನೆತನದ ಜಗದೇಕಮಲ್ಲ ಎರಡನೆಯ ಜಯಸಿಂಹನ ಕಾಲಕ್ಕೆ ಸೇರಿದ ಈ ಶಾಸನದಲ್ಲಿ ಅಜ್ಜಡಿಯ ಸಹದೇವೇಶ್ವರ ದೇವರಿಗೆ ಭೂಮಿದಾನವನ್ನು ಮಾಡಿದ ವಿಷಯ ಉಲ್ಲೇಖವಾಗಿದೆ. ದಾನ ಮಾಡಿದವಳು ಅಜ್ಜಡಿಯನ್ನಾಳುತ್ತಿದ್ದ ಜೋಗಬ್ಬರಸಿ ಜಯಸಿಂಹನ ಅದೀನನಾದ ಮಹಾಮಂಡಳೇಶ್ವರ ಕುಂದರಾಜನ ಅರಸಿ ಈಕೆ ರಾಜ್ಯಭಾರದಲ್ಲಿಯೂ ಪರಿಣಿತೆ[೧೩] ದೇವಸ್ಥಾನವನ್ನು ಕಟ್ಟಿಸಿದವನು ಅಜ್ಜಡಿಯ ಗಾವುಂಡನಾದ ಸಹದೇವ. ಕವಿಕಂದರ್ಪ ಇವರೆಲ್ಲರ ಹಿರಿಮೆಯನ್ನು ಪದ್ಯಗಳಲ್ಲಿ ಹೊಗಳಿದ್ದಾನೆ.

**ಬನವಾಸಿ ರಾಜ್ಯವನ್ನಾಳುವ ಕುಂದರಾಜನ ವೀರಗುಣ:**

> **ಮಿಗಿಲುಂ ಮಿಱಲುಱುತ್ತನಿಲ್ಲ ರಿಪುಭೂಭೃಚ್ಚಕ್ರಮಂ ವೀರವೃ**
> **ತ್ತಿಗೆ ಕೊಣ್ಡಾಟದ ಮಂಡಳೇಶ್ವರ ಮಹಾಸಾಮನ್ತರೊಳ್ತಾನೆ ಜ-**
> **ಟ್ಟಿಗನಾದೋಂ ಜಸಮೊಪ್ಪೆ ದಿಗ್ಗಜಘಟಾಘಾಟಂಬರಂ ಚಕ್ರವ**
> **ರ್ತ್ತಿಗೆ ಸರ್ವ್ವೋರ್ವ್ವರೆಯಂ ನಿಮಿರ್ಚ್ಚಿ ನೆಗಳ್ದಂ ಶ್ರೀ ವೀರವಿದ್ಯಾಧರಂ"**

ಎಂದು ಹೊಗಳಿದ್ದಾನೆ.

ಉರಿಪಲ್ಮುಗ್ಗೇರಿಯಂ ಮುಮ್ಮುನಿಯ ಮಸಕಮಂ ಮಟ್ಟುಸಲ್ಕನ್ಯಕುಬ್ಜೆ
ಶ್ವರನಂ ಹೇಮಾದ್ರಿಯಂ ಪಾಯಿಸಲೊಡರಿಸುವಂ ಚಾರುಚಾಲುಕ್ಯ ರಾಜ್ಯ
ಸ್ಥಿರ ಲಕ್ಷ್ಮೀರಕ್ಷಕಂ ಕೋಶಳಕುಳಕುಳಿಶಂ ಲಂಜಿಕಾಭಂಜನಂ ಗೂ
ರ್ಜ್ಜರ ವಜ್ರಂ ಚೋಳಕಾಳಾಶನಿ ಮಲಯಮಹೀಮರ್ದ್ದನಂ ಕುಂದರಾಜಂ ॥

ಕುಂದರಾಜನ ಹೆಂಡತಿ ಜೋಗಬ್ಬೆ ವರ್ಣನೆ :

ಕುಂದನ ಕುಲಲಲನೆ ಜಗ
ದ್ವಂದಿತೆ ಜೋಗಬ್ಬೆ ರೂಪವತಿ ಗುಣವತಿ ಪೂ
ರ್ಣೇಂದುಮುಖಿ ಸಂದ ಬರ್ಮನ
ನಂದನೆ ವಿಭುರಾಜಮಲ್ಲನ ಸುತೆ ನೆಗಟ್ದಳ್ ॥

ನೆಟ್ಟನೆ ರೂಪವಿಭ್ರಮರೆ ದಾನದ ಧರ್ಮದ ರೂಢಿಗುಂತೆ ಬಾ
ಯಿಟ್ಟು ನಿರಂತರಂ ಪಡೆವ ಕಾಂತೆಯರಾ ವಧುಕೊಟ್ಟ ದಾನಮಂ
ಕೊಟ್ಟರೊ ಪುಟ್ಟುವಂದೊಡನೆ ಪುಟ್ಟಿದರೋ ಸತಿ ಪಟ್ಟ ತೊಟ್ಟಿಲೊಳ್
ಪಟ್ಟಮನೋನ್ತರೋ ನೆಗಟ್ದ ಜೋಗಲದೇವಿಯ ನೋಂತನೋಂಪಿಯ॥

ಸಹದೇವನ ತಂದೆ ಬೀರನ ವರ್ಣನೆ:

ಬೀರಂ ತ್ಯಾಗಸುರದ್ರುಮ
ಸಾರಂ ಕವಿ ಗಮಕಿ ವಾದಿವಾಗ್ಮಿ ಜನಕ್ಕಾ
ಧಾರಂ ಮುಂನಿನ ಶೂದ್ರಕ
ವೀರಂ ಪ್ರತ್ಯಕ್ಷಮೆನಿಸಿ ನೆಗಟ್ದಿನುದಾರಂ ॥

ಬೀರನ ದಾನ ವರ್ಣನೆ:

ಕೆಳೆಯಂಗಾಶ್ರಿತನಾದವಂಗೆರೆದವಂಗಿಷ್ಟಂಗೆ ಶಿಷ್ಟಂಗೆ ಮೊ
ಕ್ಕಳಮೆಂಬಂತಿರೆ ಬಟ್ಟೆಯೊಳ್ ಬೆಳೆದ ಕಾನ್ತಾರದೊಳ್ ಪಣ್ತು ಭೂ
ತಳಮಂ ಮೋದುವ ಮಾಮರಂ ತಳಿಯಕೊಟಿಶ್ವೋಶ್ಯೋಪಭೋಗಂ ನದೀ ।
ಸಲಿಲಂ ಕೋಟ್ಗೆಯಜೇಂ ಸ್ವಕೀಯ ಧನಮೇಂ ಬೀರಂ ಮಹಾದಾನಿಯೇ ॥

ಬೀರನ ಹೆಂಡತಿ ಅಸಗಬ್ಬೆ ವರ್ಣನೆ:

ನೃತನುವ್ಯಾಪ್ತಿಯೊಳಿಟ್ದಿರುಂಧತಿ ಜಗತ್ಪ್ರತ್ಯಕ್ಷ ಧರ್ಮಾಧಿದೇವತೆ
ಕಾಳೇಯ ಯುಗಾವತಾರಿಣಿಧರಿತ್ರೀಜಾತೆ ಭಾಸ್ವತ್ಸತಿ
ವ್ರತೆತೇಜಜ್ಜುನರುಕ್ತಗೌರೀ ಧರಿಣೀ ಸಾವಿತ್ರಿಯೆಂಬೀ ಮಹೋಂ
ನ್ನತಿಯಿಂ ಸಂದಸಗಬ್ಬೆ ರೂಪಗುಣದಿಂ ಸ್ತ್ರೀರತ್ನಮಿೂ ಧಾತ್ರಿಯೊಳ್ ॥

ಬೀರ ಮತ್ತು ಅಸಗಬ್ಬೆಯರ ಮಗ ಸಹದೇವ:

ಕರಮುದ್ವೃತ್ತತೆಯಿಂ ಬಳಂಜಿಗರ ಪೊಂಗಂ ಮುಮ್ಮೊಗಂ ತಪ್ಪಲಿ
ರ್ಪ್ಪರ ದರ್ಪ್ಪೋದ್ಧತಿಯಿಂ ಬಳಂಜಿಗರ ಪೆಣ್ಣಂ ಮಣ್ಗವಟ್ಕಿರ್ತಿವಂ ।
ದಿರ ನಿಟ್ಟೆಲ್ವುಗಳಂ ನಿಮಿರ್ಚ್ಚಿ ಸಹದೇವಂ ನಾಡು ಕೊಂಡಾಡೆ ಕೇ
ಸರಿ ಶೌರ್ಯ್ಯಂ ಸಲೆ ಸೆಟ್ಟಿವುತ್ತನೆನೆ ಸಂದೀ ರೂಢಿಯಂ ತಾಳ್ದಿದಂ ॥

**ಮುಸಿಯುಂ ಲೋಭಮುಮೆಂಬ ರಾವಲತನಕ್ಕೂಡಾಗಿ ಬೋಡಾಗಿ ಮಾ**
**ನಸರಾಕಾರದ ಕಾಗೆಯಾಗಿ ನರಿಯಾಗಿಟ್ಕಾನರಂ ಕೂರ್ತು ಕೀ ।**
**ರ್ತಿಸದಿರ್ವ್ವರ್ಣ್ನಿಸುವಂದು ಬಣ್ಣಿಸು ಸುಸತ್ಯೋದ್ಗ್ರೀವನಂ ಪೆಂಪು ರಂ**
**ಜಿಸಿ ಸಂದೀ ಸಹದೇವನಂ ಬುಧಜನಕ್ಕಾರ್ತ್ತೀವನಂ ಕಾವನಂ ॥**

**ಸಹದೇವನ ತಮ್ಮ ರಾಚಮಲ್ಲನ ವರ್ಣನೆ:**

**ಮದನವಿರೋಧಿಯನ್ನದೆ ವಿರೋಧಿಗೆ ಬನ್ಧುಜನಕ್ಕೆ ವಜ್ರಶೈ**
**ಳದ ನಡೆಗೋಟೆಯನ್ನನೆ ನಿಜಾಶ್ರಿತ ಶಿಷ್ಟಜನಕ್ಕೆ ದೇವಲೋ**
**ಕದಿ ನಿಟಿತಂದ ಕಲ್ಪಕುಜದಂನನೆ ದೇಶಮನಾಳ್ವವಂಗೆ ಸಾ**
**ಟ್ಚಿದ ರಸಸಿದ್ಧಿಯಂನನೆ ದಲೆಂದಪುದೀ ಧರೆ ರಾಚಮಲ್ಲನಂ ॥**

ಇವನು ಕಟ್ಟಿಸಿದ ಕೆರೆ ಸಮುದ್ರಕ್ಕಿಂತಲೂ ಶ್ರೇಷ್ಠವಾದುದು; ಯಾಕೆಂದರೆ ಸಮುದ್ರದಲ್ಲಿರುವ ಅವಗುಣಗಳು ಇದರಲ್ಲಿಲ್ಲ.

**ಕಟ್ಟುಪ್ಪು ವಿಷದ ಮದ್ಯದ**
**ಪುಟ್ಟಿದ ನೆಲೆ ಜಳಧಿ ಜಳಧಿಯಂ ಪೊಗಳದೆ ನೀಂ**
**ಮಟ್ಟಮಿರು ರಾಚಮಲ್ಲಂ**
**ಕಟ್ಟಿಸಿದಱಗೆಱ ಸಮುದ್ರದಿಂ ಮಿಗಿಲಲ್ತೆ ॥**

ರಾಚಮಲ್ಲನ ಪರೋಪಕಾರ ಘೋಷಣೆ:

**ಸ್ವಾರ್ತ್ಥಪರಾರ್ತ್ಥಮೆಂಬ ನುಡಿ ಸಲ್ಲದಡೇನನೆ ಪುಣ್ಯಮೂರ್ತಿ ಧ-**
**ರ್ಮ್ಮಾರ್ತ್ಥಿ ಗುಣಾರ್ತ್ಥಿ ವಿಶ್ವಜಗತೀತಳವರ್ತ್ತಿತ ಕೀರ್ತ್ತಿಯೆಂದು ದೀ**
**ನಾರ್ತ್ತಜನಂ ವಿರಾಜಿಸೆ ಮಹಾಪುರುಷಾಗಮದಿಂ ಪರೋಪಕಾ**
**ರಾರ್ತ್ಥಮಿದಂ ಶರೀರಮೆಸುತಿರ್ಪ್ಪುದು ಗೋಸನೆ ರಾಚಮಲ್ಲನಂ ॥**

**ಸಮಂತಭದ್ರ ಭಳಾರ (ಕ್ರಿ.ಶ.೧೦೨೩)**

ಕೊಪ್ಪಳ ಜಿಲ್ಲೆಯ, ಕೊಪ್ಪಳ ತಾಲೂಕಿನ, ಕೊಪ್ಪಳ ಗ್ರಾಮದ ಶಾಸನದ[೧೪] ಮುಂಭಾಗದ ೧೫ನೇ ಸಾಲಿನಲ್ಲಿ ಶಾಸನಕವಿಯ ಬಗ್ಗೆ ಉಲ್ಲೇಖವಿದೆ.

**"ಶ್ರೀಮನ್ನರೇನ್ದ್ರಸೇನಪಣ್ಡಿತರಗ್ರಶಿಷ್ಯರ್ಸ್ಸಮನ್ತಭ**
**ದ್ರಭಟಾರರ್ಕ್ಕಲ್ಲೊಳಕ್ಕರಂಮಂ ಬರೆದು ಕಲ್ಲನಿರಿಸಿದರ್"** ಎಂದಿದೆ.

ಸೇನ ಗಣಕ್ಕೆ ಸೇರಿದ ಅಜಿತಸೇನಾಚಾರ್ಯರನ್ನು ಹೆಸರಿಸಿ ಇವನಿಂದ ಭೂಮಿಯ ಮೇಲೆ ಪೆರ್ಮಳೆಗಳು ಸುರಿದವಂತೆ, ಹಸಿವು, ನೀರಡಿಕೆಗಳಿಲ್ಲವಾದುವೆಂದೂ ತನಗೆ ಗೌರವ ನೀಡಿದವರನ್ನೂ, ನಿಂದಿಸಿದವರನ್ನು ಸಮಾನವಾಗಿ ಕಾಣುತ್ತಿದ್ದನೆಂದು ಶಾಸನ ವರ್ಣಿಸುತ್ತದೆ.

**ಬೆಳೆದ ಪುದಿನ್ನುಮುರ್ವ್ವಿಪದಪ್ಪದೆ ಪೆರ್ಮ್ಮೆಳೆ**
**ಕೊಳ್ವುದಿನ್ನುಮಗ್ಗಳದ ಗುಣಂಗಳಂ**
**ಮೆರೆವರಿನ್ನುಮಿಳೇಶ್ವರರಿನ್ನುಮಿಲ್ಲಣಂ**
**ಕಳಮಳಿ ಪಾಯಿಲಂ ಪಸವುಬಚ್ಚಬಱಂ**
**ಪೆಱವುಂ ಭಯಂಗಳಾಕುಲತೆಯುಮಿನ್ನು**
**ಮಿಲ್ಲಜಿತ ಸೇನಮುನೀನ್ದ್ರ ತಪಟ್ಪ್ರಭಾವದಿಂ ॥**

**ಬನ್ದಿಸಿದವರುಂ ತಮ್ಮ ನಿನ್ದಿಸಿದವರುಂ**
**ಸಮಾನಮೆಂಭೀ ಗುಣದೊಳ್ನಿನ್ದರನಾ**
**ಪೊರ್ತ್ತಗಳಬ್ರ್ಬವನ್ದಿತರಪ್ಪಜಿತಸೇನ ಭಟ್ಟಾರಕಂ ॥**

ಎಂದು ಬಸವಣ್ಣನವರ ವಚನಗಳನ್ನು ನೆನಪಿಗೆ ತರುತ್ತವೆ.

**"ಸ್ವಸ್ತಿ ಗಂಗಮಂಡಳೇಶ್ವರ ಶ್ರೀರಾಜಮಲ್ಲದೇವನರಸಿ**
**ಕಞ್ಚಿಯಬ್ಬರಸಿಯರ್ಪ್ಪಲಕಾಲಂ ತಪಂಗೆಯ್ದು...**
**ಶ್ರೀಕುಪಣತೀರ್ತ್ಥದೊಳ್ಸಮಾಧಿ ವಿಧಿಯಂ**
**ರತ್ನತ್ರಯಮಂ ಸಾಧಿಸಿ ದೇವಲೋಕಕ್ಕೆ ಪೋದರ್"**

ಕಂಚಿಯಬ್ಬರಸಿಯಾದವಳು ಅಜಿತಸೇನಮುನಿಗಳ ದೀಕ್ಷೆ ಪಡೆದು ರತ್ನತ್ರಯ ಸಾಧಿಸಿ ದೇವಲೋಕಕ್ಕೆ ಸಂದ ಬಗ್ಗೆ ಶಾಸನ ವರ್ಣಿಸಿದೆ.

## ದೋರಯ್ಯ (ಕ್ರಿ.ಶ.೧೦೨೫)

ಹಾಸನ ಜಿಲ್ಲೆಯ, ಆಲೂರು ತಾಲೂಕಿನ, ಕಣತೂರು ಗ್ರಾಮದ ಶಾಸನ[೧೫]ವನ್ನು ಶಾಸನದ ಹತ್ತೊಂಬತ್ತನೆಯ ಸಾಲಿನಲ್ಲಿ ಕಂಡುಬರುತ್ತದೆ. "ಇದ ಬರೆದ ಸೇನಬೋವ ಧೋರಯ್ಯ" ಎಂದು ದಾಖಲಿಸಿದೆ. ಶಾಸನವು ಕೆಲಭಾಗ ನಾಶವಾಗಿದ್ದು ಸಂಪೂರ್ಣ ಮಾಹಿತಿಯೊದಗಿಸದು. ಶಾಸನ ಕವಿಯ ಪ್ರತಿಭೆ ಮತ್ತು ಪಾಂಡಿತ್ಯದ ದ್ಯೋತಕವಾಗಿ ಈ ಕೆಳಗಿನ ಶಾಸನದ ಸಾಲುಗಳು ಸಾಕ್ಷಿಯಾಗಿವೆ.

**"ಸ್ವಸ್ತಿದರಧರಣಿಸಂಭವ ಭೀಮವದಭಳಗ....**
**ಪಿತಾಷ್ಟದಶಾಶ್ವಮೇಧ ವಿದಿತ ಪೆರ್ಮಾಡಿಪರ**
**ಪದುಮಾವತೀವರ ಪ್ರಸಾದ ಲಬ್ಧ ಸಿಂಹಲಾಂಚನ**
**ವನರಾಜ್ಯ ಸಮಸ್ತಪ್ರತಿರಾಜ್ಯ.......**
**ಕುಲೋದಯಾದ್ರಿ ಪಮಾನಮಪ್ಪ ಶ್ರೀಮದ್ ಮಲಪರಾಜ.....**
**ಮಲೆಪರಾದಿತ್ಯಂ ಬೇಹರಮರುತ್ತ ದಾಯಾದ ಸಂತೋಷ**
**ಕಲಿಗಳಂಕುಶ ಪ್ರಹಾರಿ"**

ಎಂದು ಮಲಪರಾಜ ಮಲೆಪರಾಧಿತ್ಯನನ್ನು ಕುರಿತಾಗಿ ಪೆರ್ಮಾಡಿಪರ ಪದುಮಾವತಿಯರ ವರ್ಣನೆ ಮಾಡಲಾಗಿದೆ.

> **“ನಾಟಿಸ್ಗಾವುಂಡ ಕಣ್ಣತೂರ ವಗವುಣ್ಡನ..ಮಹಾರಾಜಂ**
> **ಆನೆಯನೇಜೆಸಿ ಸೆಟ್ಟಿವಟ್ಟಿಯ ಕಟ್ಟಿಕೊಟ್ಟ .. ಭಟ್ಟವರಿಗೆ**
> **ಇನಿತುವ ಕೊಟ್ಟ ಗುಡಗೆ..ಯ ಕದಬವಳ್ಳಿಯೊಳಗೆ**
> **ಅಭ್ಯನ್ತರ ಸಿದ್ದಿಯಾಗೆ ಕೊಟ ಗೆಯಿ ಇನ್ತಪ್ಪುದಕ್ಕೆ ಸಾಕ್ಷಿಗಳು.**
> **ಸುಂಕಜ್ಜನ ಮಾವ ಸೋವವರಸನು ಮನೆವೆರ್ಗ್ಗೆ**
> **ಬಿಸಯ್ಯನು ಚೋಳಯರನ ಪೆರ್ಗ್ಗಡೆ ದಸಯ್ಯ**
> **ಸುಬಯ್ಯ ಸೆಟ್ಟಿಯು”**

ಎಂದು ಮುಂತಾದವರ ಸಾಕ್ಷಿಗಳನ್ನು ಭೂದಾನ ನೀಡಿದ ಬಗ್ಗೆ ಹೇಳಿದೆ.

### ಹೆಗ್ಗಡೆ ಬಾಸಯ್ಯ (ಕ್ರಿ.ಶ.೧೦೨೯)

ಮೈಸೂರು ಜಿಲ್ಲೆಯ, ಗುಂಡ್ಲುಪೇಟೆ ತಾಲೂಕು, ಹಸುಗೂಲಿ[೧೬] ಶಾಸನವು ಕುಡುಗುವಾಡ ಪುಸುಗುಲಿ ಹಳ್ಳಿಯ ಮಣ್ಣರನು ಕೊಟ್ಟ ದವಿಸಾಸೆಯಮ್ಮಣ ಕಾಡಮಾರಗಾವುಣ್ಡನ ಮಗನಾದ ಆದವಗಾವುಂಡನಿಗೆ ಭೂದಾನದ ವಿವರವಿರುವ ಶಾಸನದ ಸಾಲುಗಳು ಇಂತಿವೆ.

> **“ಕಾಡಮಾರಗಾವುಣ್ಡನ ಮಗಂ ಆದವಗಾವುಣ್ಡಂಗೆ**
> **ಇದನಱೆವ ಸಾಕ್ಷಿ ಕೆಲ್ಲಸೂರ ಹೊಲ್ಲಗಾವುಣ್ಡನುಂ**
> **ತುಪ್ಪೂರ ಕುನ್ದಗಾವುಣ್ಡನುಂ ಕನ್ದಮಂಗಲದ**
> **ಎಳವಮ್ಮಗಾವುಣ್ಡನುಂ ಹಂನಿಸೋಗೆ ಯಱಹಗಾವುಣ್ಡನುಂ**
> **ಕಲ್ಲೂರ ಬೀಚಗಾವುಣ್ಡನುಂ ಹದೆವಳಿ ಬೂತಯ್ಯನುಂ**
> **ಬಿಲ್ಲಾಪಯ್ಯನುಂ ನಿಟೆರೆಯ ಚಾವುಂಡಯ್ಯನುಂ ಇವರ್**
> **ಹೇಱಿ ಬರೆದಂ ಹೆಗ್ಗಡೆ ಬಾಸಯ್ಯ.**

‘ಹೆಗ್ಗಡೆ ಬಾಸಯ್ಯನು’ ಬರೆದದ್ದು. ಹದೆವಳಿ ಭೂತಯ್ಯ, ಬಿಲ್ಲಾಪಯ್ಯ ನಿಟೆರೆಯ ಚಾವುಂಡರು ಸೇರಿ ಹೇಳಿ ಬರೆಸಿದರು ಎಂದಿದೆ.

### ಕಪ್ಪಣಭಟ್ಟ (ಕ್ರಿ.ಶ.೧೦೩೭)

ಶಿವಮೊಗ್ಗ ಜಿಲ್ಲೆಯ, ಸೊರಬ ತಾಲೂಕಿನ, ಕುಪ್ಪಗಡ್ಡೆಯ ನರಸಿಂಹಸ್ವಾಮಿ ದೇವಾಲಯದ ಒಂದು ಶಾಸನವನ್ನು[೧೭] ಕಪ್ಪಣಭಟ್ಟ ಕವಿ ರಚಿಸಿದನೆಂದು ತಿಳಿದುಬರುತ್ತದೆ. ಈತನಿಗೆ ‘ಕವಿರಾಜವಲ್ಲಭ’ ಎಂಬ ಬಿರುದಿತ್ತೆಂದು ಶಾಸನದಿಂದ ತಿಳಿದುಬರುತ್ತದೆ. ಚಾಲುಕ್ಯ ಇಮ್ಮಡಿ ಜಯಸಿಂಹನ ಕಾಲಕ್ಕೆ ಸೇರಿದ ಈ ಶಾಸನ ಕಾಲ ಕ್ರಿ.ಶ.೧೦೩೭.

ಜಯಸಿಂಹನ ಮಹಾಸಾಮಾಂತಾಧಿಪತಿ ಮಾಟೂರ ವಂಶಕ್ಕೆ ಸೇರಿದ್ದ ಬನವಾಸಿ ಪನ್ನಿರ್ಚ್ಛಾಸಿರ ಹಾಗೂ ಶಾಂತಳಿಗೆ ಸಾಸಿರ ಪ್ರದೇಶಗಳನ್ನಾಳುತ್ತಿದ್ದ. ಆಲಯ್ಯನಿಗೂ ಕುಂದಮ ಎಂಬ ಮಾಂಡಳಿಕನಿಗೂ ಕುಪ್ಪಗಡ್ಡೆಯ ಬಯಲಲ್ಲಿ ಹೋರಾಟ ನಡೆಯಿತು. ಈ ಹೋರಾಟದಲ್ಲಿ ಆಲಯ್ಯನು ಹಲವು ಜನರನ್ನು ಕೊಂದು ವೀರಮರಣ ಹೊಂದಿದ. ಆಲಯ್ಯನ ಮಗನು ಕುಪ್ಪಗಡ್ಡೆಯಲ್ಲಿ ತನ್ನ ತಂದೆ ಹೆಸರಿನ ಆಲೇಶ್ವರ ದೇವಾಲಯ ನಿರ್ಮಿಸಿ ಪೂಜಾ ಕಾರ್ಯಗಳಿಗೆ ಹಲವಾರು ದತ್ತಿ ಬಿಟ್ಟಿದ್ದನ್ನು ಈ ಶಾಸನದಲ್ಲಿ ವರ್ಣಿಸಲಾಗಿದೆ.

ಆಲಯ್ಯ ಮತ್ತು ಕುಂದಮರ ನಡುವಿನ ಹೋರಾಟವನ್ನು ಕವಿಯು ಹಲವಾರು ವೃತ್ತಗಳಲ್ಲಿ ಬಣ್ಣಿಸಿದ್ದಾರೆ. ಆ ಶಾಸನದ ಒಂದು ಪದ್ಯ ಈ ರೀತಿಯಿದೆ.

**"ಬಳವದರಾತಿಸೇನಿಕಿದೆ ವಾಜಿಬಳಂ ಪೆಱಪಿಂಗೆ ಹಸ್ತಿಸಂ**
**ಕುಳಮಳಿರ್ವ್ವಳ್ಳಿ ಬಳ್ಳಿ ತನಗಾಂತಧಿಕೋಗ್ರ ವಿರೋಧಿ ಸಾಧನಂ**
**ವಳಿಕಿ ಬಳಳ್ಚಿ ನುರ್ಗಿ ಪಲರಂ ತವೆಕೊಂದು ಮಹಾರಾಜಿರಂಗದೊಳ್**
**ತೊಲಗದ ಗಂಡನಾಂತಿಱೆಯೆ ಭುಂಭುಕಮದ್ಭುತ ಮಾದೊಡೆತ್ತಲುಂ**

ಮೇಲಿನ ಪದ್ಯದಿಂದ ಪಂಪನ ಪ್ರಭಾವ ಕವಿಯ ಮೇಲಾಗಿರಬಹುದು. 'ಸೂಟ್ಟಿಡೆಯಲಪ್ಪುದು ಕಾಣಾ ಮಹಾಜಿರಂಗದೊಳ್' ಎಂಬ ಪದವನ್ನು ಹೋಲುವ ಪದ ಈ ಪದ್ಯದಲ್ಲಿ ಬಳಕೆಗೊಂಡಿದೆ. ಇದು ಚಂಪಕ ಮಾಲಾವೃತ್ತದಲ್ಲಿದೆ.

**"ಕೆಡೆವ ಭಟರ್ಭಟಾಂತ್ರವೃತ್ತದಿಂದಮುರುಳ್ವ ಹಯಂ ಹಯಾಳಿಯಂ**
**ಪುಡಿಪುಡಿಯಾಗೆ ಮೆಟ್ಟುವ ಗಜಂ ಗಜಮಾಂಸಮನುರ್ಬಿ ತಿಂದು ಕೂ**
**ಗಿಡುವ ಮರುಳ್ಮರುಳ್ವಡೆಯನಟ್ಟುವ ಸಿದ್ಧಗಣಂ ಗಣಂಗಳಂ**
**ಬಡಿವ ನಿಶಾಚರರ್ಸ್ಸಮರಧೀರರಂರುತ್ತಿಮಿದಾಜಿರಂಗದೊಳ್"**

ಇದು ಕೂಡಾ ಚಂಪಕಮಾಲಾವೃತ್ತದಲ್ಲಿದೆ. ಮೊದಲನೆಯ ಪದ್ಯದಲ್ಲಿ ಕ್ಷಳ, ಕುಳ ಹಾಗೂ ಲಕಾರಗಳು ಪ್ರಾಸಸ್ಥಾನದಲ್ಲಿ ಬಂದಿರುವುದನ್ನು ಗಮನಿಸಬಹುದು.

## ನಾಗಮಯ್ಯ (ಕ್ರಿ.ಶ.೧೦೪೫):

ಈ ಶಾಸನ ಕವಿಯು ಧಾರವಾಡ ಜಿಲ್ಲೆ (ಅವಿಭಜಿತ) ನವಿಲುಗುಂದ ತಾಲೂಕಿನ ಅಣ್ಣಿಗೆರೆಯವನು. ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಗ್ರಾಮವಾದ ಮೋರಿಗೇರಿಯಲ್ಲಿರುವ ಚಾಳುಕ್ಯ ೧ನೇ ಸೋಮೇಶ್ವರನ ಕಾಲದ ಕ್ರಿ.ಶ.೧೦೪೫ರ ಒಂದು ಶಿಲಾಶಾಸನ[೧೮]ವನ್ನು ಈತನು ಬರೆದಿದ್ದಾನೆ. ಶಿಲಾಲಿಪಿಯಲ್ಲಿ ೬೮ ಸಾಲುಗಳ ವ್ಯಾಪ್ತಿಯುಳ್ಳ ಶಾಸನದಲ್ಲಿ ಎರಡು ಪದ್ಯಗಳು

ಇವೆ. ಒಂದು ವೃತ್ತ ಹಾಗೂ ಕಂದ ಇವೆ. ಉಳಿದೆಲ್ಲ ಭಾಗ ಗದ್ಯಮಯ, ಗದ್ಯದ ಭಾಷೆ ಶುದ್ಧ ಹಾಗೂ ಸರಳ ಅರ್ಮೆಳೆ, ನೆಲ್ಲೆಕುದಿರು, ಸೊನ್ನ, ಪೊಳಲ್ಗುಂದೆ, ಸೂಗೂರು, ಮೋರಿಂಗೆಱೆ ಆರು ಬಾಡಗಳನ್ನು ಅಣುಗಜೀವಿತದಿಂದ ಆಳುತ್ತಲಿದ್ದ ದಂಡನಾಯಕ ತಿಕಣ್ಣ ಮೊದಲಾಗಿ ಲೆಂಕಸಾಸಿರ್ವರು ಅಗ್ರಹಾರ ಮೊರಿಂಗೆಱೆಯಲ್ಲಿ ಇಪ್ಪತ್ತು ನಾಲ್ವರಿಗೆ ಸತ್ರವನ್ನೂ ನೊಳಂಬೇಶ್ವರವನ್ನೂ ತಮ್ಮ ಹೆಸರ ಲೆಂಕೇಶ್ವರವನ್ನೂ ಮಾಡಿಸಿ ದತ್ತಿಗಳನ್ನು ಕೊಟ್ಟಂತೆ ಈ ಶಾಸನ ಹೇಳಿದೆ.

ಶಾಸನದ ಕೊನೆಯಲ್ಲಿಯ "ಶ್ರೀಮದಣ್ಣಿಗೆಱೆಯ ನಗರೇಶ್ವರದ ವಿದ್ಯಾಭರಣಜೀಯಗಂ 'ನಾಗಮಯ್ಯ ಬರೆದಂ' ಎಂಬ ಗದ್ಯದಿಂದ ಶಾಸನಕವಿ ನಾಗಮಯ್ಯನು ಅಣ್ಣಿಗೆರೆಯ ನಗರೇಶ್ವರದ ಸ್ಥಾನಾಚಾರ್ಯನಾಗಿದ್ದ, ವಿದ್ಯಾಭರಣಜಿಯರ ಮಗನೆಂದು ತಿಳಿಯುವುದು.

ಶಾಸನದೊಳಗಣ ವೃತ್ತ ಪದ್ಯವೊಂದು ಹೀಗಿದೆ:

**ನುಡಿವುದು ನನ್ನಿ ಮಾಡುವುದು ಕೀರ್ತನಮಿೂವುದೆ ಸದ್ವಿನೋದಮೊ-**
**ಯ್ಕನೆ ಮಱೆವೊಕ್ಕರನ್ನೆಱೆಯೆ ಕಾವ ಗುಣಂ ಬೆಸನಂ ಮಹಾಜಿಯೊಳ್**
**ಸೆಡೆಯದುದುಗ್ಗಿಯೆಂದು ನುಡಿವೀ ನುಡಿ ಲೆಂಕರೊಳಾವ ಕಾಲಮುಂ**
**ನಡೆವುದು ಪಂಡಿತರ್ಪೊಗಳೆ ಭೇರಿಯ ಗೋಸನೆ ಭೂತಳಾಗ್ರದೊಳ್ ॥**

ಪದ್ಯದ ಭಾಷೆ ದೇಸಿಯಿಂದ ಕೂಡಿದ್ದು, ಮನೋಜ್ಞವಾಗಿದೆ. ಕಂದಪದ್ಯವೊಂದು ಹೀಗಿದೆ.

**ವಾರಿಧಿ ಪರಿವೃತ ಧಾತ್ರಿ**
**ನಾರಿಯ ವದನದವೊಲೆಸೆವ ಕೆವಗಳಿನಾಡೊಳ್**
**ಮೋರಿಂಗೆಱೆ ತಿಳಕಾಳಂ**
**ಕಾರಮನನುಕರಿಪುದೆನೆ ಜನಂ ಬಣ್ಣಿಸದೇಂ ॥**

**ನಾಗವಾರ (ಕ್ರಿ.ಶ.೧೦೪೬)**

ಬಳ್ಳಾರಿ ಜಿಲ್ಲೆಯ, ಹಡಗಲಿ ತಾಲೂಕಿನ, ಮೈಲಾರದ ಸೋಮಲಿಂಗೇಶ್ವರ ದೇವಾಲಯದ ಬಳಿ ಇರುವ ಶಾಸನ ಕರ್ತೃ[೧೯] ಚಾಲುಕ್ಯ ತ್ರೈಲೋಕ್ಯಮಲ್ಲನ ಕಾಲವನ್ನು ಉಲ್ಲೇಖಿಸುವ ಈ ಶಾಸನದ ಕಾಲ ಕ್ರಿ.ಶ.೧೦೪೦. ಮಹಾಮಂಡಳೇಶ್ವರ ಗಂಡರಾದಿತ್ಯರಸನ ಆಶ್ರಿತನಾದ ಕಾಳಿದಾಸರಸನು ಚಿಲ್ಲುಕಾಚಾರ್ಯನಿಗೆ ಕ್ಷೇತ್ರದಾನ. ಗೃಹದಾನ ಮಾಡಿದ್ದನ್ನು ಹೇಳುವುದು ಈ ಶಾಸನದ ವಸ್ತು. ಕವಿಯ ಲಲಿತ ಶೈಲಿಗೆ ಒಂದು ಉದಾಹರಣೆಗೆ ಹೀಗಿದೆ.

**"ಅಱಿದಾಗ ಮೋಕ್ತಿಯಿಂದಂ**
**ನಿಱಿಸಿ ಶಿವಜ್ಯೋತಿಯಂ ಸ್ವಚಿತ್ತದ ಗತಿಯಂ**
**ಮೆಱಿಯದೆ ಸಚ್ಚಾರಿತ್ರದೆ**
**ಕುಱುವತ್ತಿಯ ಚಿಲ್ಲುಕಾರ್ಯಮುನಿ ಮನುಚರಿತಂ ॥**

ಆ ವೂರಿನ ಇನ್ನೂರು ಜನರು ಆ ದೇವಾಲಯದಲ್ಲಿ ಬ್ರಹ್ಮಚಾರಿಯಾದ ತಪಸ್ವಿಯನ್ನು ನಿಲ್ಲಿಸಬೇಕೆಂದು ಅಲ್ಲದವನನ್ನು ಓಡಿಸಬೇಕೆಂದೂ ಶಾಸನದಲ್ಲಿ ಹೇಳಿದೆ. ರಾಜನು ಉಪ್ಪು, ಸಕ್ಕರೆ ಮತ್ತು ಉಳಿದ ಮೂರು ರಸಗಳ ಮೇಲಿನ ಸುಂಕವನ್ನು ಬಿಡುತ್ತಾನೆ. ಬಯ್ದವನಿಗೆ ಒಂದು ಪಣ ದಂಡ, ಹೊಡದವನಿಗೆ ಆರುಪಣ ದಂಡ, ಇರಿವವನಿಗೆ ಹನ್ನೆರಡು ಪಣ, ಕತ್ತಿ ಹಿಡಿದು ಬೆದರಿಸಿದವನಿಗೆ ಎರಡು ಪಣವನ್ನು ದಂಡ ವಿಧಿಸುತ್ತಿದ್ದುದ್ದನ್ನೂ ಈ ಶಾಸನದಲ್ಲಿ ವರ್ಣಿಸಲಾಗಿದೆ. ಕವಿಯ ಕಾವ್ಯ ಕೌಶಲವನ್ನು ಈ ಪದ್ಯದಿಂದ ತಿಳಿಯಬಹುದು.

**ವೇದವಿದವ್ವೈಷ್ಣವಧ**
**ರ್ಮ್ಮೋದಯರ ಕಳಂಕ ಚರಿತರಿನ್ನೂರ್ವ್ವರುಮ**
**ತ್ಯಾದರದಿ ಶಿವಾಲಯದೀ**
**ಮೇದಿನಿಯ ಸರ್ವ್ವ ಮಾನ್ಯದೀಂ ಪಾಲಿಸುವರ್**

ಎಂದು ವರ್ಣಿಸಲಾಗಿದೆ.

**ಬಯ್ದಂಗೆ ಪಣಮುಮೊಂದುಂ**
**ಪೊಯ್ದಂಗಾಱು ಪಣಮಿಱಿಯೆ ಪನ್ನೆರಡುಪಣಂ**
**ಪಾಯ್ದಱದೆ ಸುರಿಗೆಗಿರ್ತಿರ**
**ದೆಯ್ದಿದವಂಗೆಂಟು ಪಣಮೆ ದಂಡಂ ನಿರುತಂ ॥**

**ಆಣೆಯನೆ ಮಿಕ್ಕು ಪೋದಡೆ**
**ಮಾಣದೆ ಕೊಟ್ಟೆರಡು ಪಣಮಿವಂ ಕೆಱಿಗಿತ್ತಂ**
**ಕ್ಷೋಣಿಪತಿ ಮಿಕ್ಕದಂಡಂ**
**ಜಾಣೆನಲರಸಿಂಗಿದೂರ್ಗೆ ಮಾಡಿದ ಸಮೆಯಂ ॥**

ಎಂದು ಹಲವಾರು ಬಗೆಯ ದಂಡವನ್ನು ಹೇಳಿವೆ.

## ವಿಷ್ಣಯ್ಯ (ಕ್ರಿ.ಶ.೧೦೪೬)

ಬಳ್ಳಾರಿ ಜಿಲ್ಲೆಯ, ಹಗರಿಬೊಮ್ಮನಹಳ್ಳಿ ತಾಲೂಕಿನ, ಮೋರಿಗೇರಿ ಶಾಸನದಲ್ಲಿ[೨೦] ಕಲ್ಯಾಣದ ಚಾಲುಕ್ಯ ಅರಸ ತ್ರೈಲೋಕ್ಯಮಲ್ಲದೇವನು ಆಳುತ್ತಿದ್ದಾಗ ಇವನ ಸಾಮಂತನಾದ ತ್ರೈಲೋಕ್ಯಮಲ್ಲ ನನ್ನಿನೊಳಂಬಪಲ್ಲವ ಪೆರ್ಮಾನಡಿಯು ಬಲ್ಲಕುನ್ದೆ–೩೦೦, 'ಕೋಗಳಿ–೫೦೦, ಕದಂಬಳಿಗೆ–೧೦೦೦, 'ಕುದಿಯಹರವಿ–೭೦', ಕರಿವಿಡಿ–೩೦' ಐದು ಗ್ರಾಮಗಳು, ನೊಳಂಬವಾಡಿ

೩೨೦೦೦ವನ್ನು ಆಳುತ್ತಿದ್ದಾಗ ಇವನ ದಂಡನಾಯಕ ತಿಕಣ್ಣನೇ ಮೊದಲಾಗಿ ಲೆಂಕಸಾಸಿರ್ವರು ಅರ್ಮ್ಮಳೆ, ನೆಲ್ಕುದುರೆ, ಸೊನ್ನ ಪೊಳಲ್ಗುನ್ದೆ ಸೂಗೂರು, ಮೋಱಿಂಗೆರೆ ಮೊದಲಾದ ಆರು ಊರುಗಳನ್ನೂ ಆಳುತ್ತಿದ್ದಾಗ 'ಮೊರಿಂಗೆರೆಯನ್ನು', 'ಬಲ್ಲವರಸನ' ಕೈಯಲ್ಲಿ ಪಡೆದು ನೊಳಂಬೇಶ್ವರ ದೇವರಿಗೆ', ವಿದ್ಯಾಭ್ಯಾಸಕ್ಕಾಗಿ ಪಾದಮೂಲ ಪರಿವಾರ ಮುಂತಾದವಕ್ಕೆ ಸೋಮೇಶ್ವರ ಪಂಡಿತರ ಕಾಲನ್ನು ತೊಳೆದು ವೀರುಪಾಕ್ಷದೇವರ ಸಮಕ್ಷಮದಲ್ಲಿ ದಾನ ನೀಡುತ್ತಾರೆ. ದಂಡನಾಯಕ ಸೋವಿಮಯ್ಯ ಬಾವಿಯನ್ನು ಕಟ್ಟಿಸಿ ಅದಕ್ಕೆ ಸೋಮತೀರ್ಥವೆಂದು ಹೆಸರಿಟ್ಟು ಕೆರೆ, ಬಾವಿ, ತೋಟವನ್ನು ದಾನ ನೀಡುತ್ತಾನೆ.

ಶಾಸನದ ಕೊನೆಯ ೪೪ನೇ ಸಾಲಿನಲ್ಲಿ "ಊರೊಡೆಯ ನಾರಣಮಯ್ಯನ ಮಗಂ ವಿಷ್ಣಯ್ಯ ಬರೆದಂ" ಎಂದಿದೆ.

**ಚಾಲುಕ್ಯ ತ್ರೈಲೋಕ್ಯಮಲ್ಲನ ವರ್ಣನೆ:**

> **ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ**
> **ಪರಮೇಶ್ವರಪರಮಭಟ್ಟಾರಕ ಸತ್ಯಾಶ್ರಯಕುಳತಿಳಕಂ**
> **ಚಾಲುಕ್ಯಾಭರಣಂ ಶ್ರಿಮತ್ತ್ರೈಲೋಕ್ಯಮಲ್ಲದೇವರ ವಿಜಯರಾಜ್ಯ**
> **ಮುತ್ತರೋತ್ತರಾಭಿವೃದ್ಧಿ ಪ್ರವರ್ದ್ಧಮಾನಚನ್ದ್ರಾರ್ಕತಾರಂ ಸಲುತ್ತಿರೆ**
> **ತತ್ಪಾದ ಪದ್ಮೋಪಜೀವಿ ಸಮದಿಗತಪಂಚಮಹಾಶಬ್ದ ಪಲ್ಲವಾನ್ವಯ**
> **ಕುಲತಿಳಕನಮೋಘವಾಕ್ಯಂ ಕಾಂಚೀಪುರವರೇಶ್ವರಂ ವೈರಿನಾರಾಯಣಂ**
> **ದ್ರೋಹಕಾಳಾನಳಂ ಮಣ್ಡಳಿಕತ್ರಿಣೇತ್ರಂ ರಾಜಮನೋಜ ಹಯವತ್ಸ**
> **ರಾಜಂ ಚಿತ್ರವೆಡಂಗಂ ತ್ಯಾಗಚಿನ್ತಾಮಣಿ ರಾಜಗಜಸರ್ವ್ವಜ್ಞಂ**
> **ಶ್ರೀಮತ್ತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವಪೆರ್ಮಾನಡಿಗಳ್**

ಎಂದು ವರ್ಣಿಸಿದ್ದಾರೆ.

**ಮಹಾಸಾಮನ್ತಾದಿಪತಿಯ ವರ್ಣನೆ ಮತ್ತು ದಾನದ ವಿವರಣೆ:**

> **"ಶ್ರೀಮದ್ದಣ್ಡನಾಯಕ ಸೋಮಿಮಯ್ಯಂ ಮೋರಿಂಗೆಱೆಯೂರೊಡೆಯರ್ಪ್ಪನ್ನ**
> **ಲೆಂಕಸಾಸಿರ್ವರ ಸನ್ನಿಧಾನದಲಿಯೂ.. ಮಾಕಿಮಯ್ಯಂಗಂ ಮಲ್ಲಿಪಯ್ಯಂಗಂ**
> **ಪೊನ್ನಕೊಟ್ಟು ಕೆಳಗೆಯ ಕೆಱೆಯಂ ಕೆಱೆಯ ಕೆಳಗಣ ಮೂಱು**
> **ಮತ್ತರ್ಕ್ಕೆಯ್ಯುಮಂ ಸಹಿರಣ್ಯಂಗೊಟ್ಟು ಧಾರಾಪೂರ್ವಕಂ ಮಾಱುಗೊಂಡ**
> **ಕೆರೆಯೊಳಗೆ ಬಾವಿನಯಗಳಿಸಿ ಸೋಮತೀರ್ಥಮೆಂದು ಪೆಸರನಿಟ್ಟು**
> **ಪೂದೊಟಂ ನನ್ದಾನವನವನಿಟ್ಟು ಕೆರೆ ಬಾವಿ ತೋಟ ಕೆಱೆ....**
> **ಸೋಮೇಶ್ವರಪಣ್ಡಿತರ ಕಾಲಂ ಕರ್ಚಿ ನೊಳಂಬೇಶ್ವರದೇವರಿಗೆ ಕೊಟ್ಟರ್"**

ಎಂದು ವಿವರವಿದೆ.

## ಬಮ್ಮಣಯ್ಯ (ಕ್ರಿ.ಶ.೧೦೪೬)

ರಾಯಚೂರು ಜಿಲ್ಲೆಯ, ಲಿಂಗಸೂರು ತಾಲೂಕಿನ, ಕೀಲಾರಟ್ಟಿಯ ಶಾಸನವನ್ನು[೨೧] ಶಾಸನಕವಿ ಬಮ್ಮಣಯ್ಯನೆಂಬುವವನು ಬರೆದಿದ್ದಾನೆ. ಶಾಸನದ ೩೦ನೇ ಸಾಲಿನಲ್ಲಿ "ಬರೆದಂ ಸೇನಬೋವ ಬಮ್ಮಣಯ್ಯ" ಎಂದಿದೆ. ಈ ಶಾಸನವು ಚಾಲುಕ್ಯ ತ್ರೈಲೋಕ್ಯಮಲ್ಲನ ಕಾಲದಲ್ಲಿ ಅವನ ಮಗ ಕುಮಾರ ಜಯಸಿಂಹದೇವನು ಕರಡಿಕಲ್ಲ-೩೦೦'ರ ಅಗ್ರಹಾರ ಬನ್ನಿಗೋಳವನ್ನು ಆಳುತ್ತಿದ್ದ ಆಗ ಪನ್ನಾಳೆಯದ ಕೋಟೆಯ ನೆಲೆವೀಡಿನಲ್ಲಿದ್ದಾಗ (ಬನ್ನಿಗೊಳದ) ಭೋಗೇಶ್ವರ ದೇವರಿಗೆ ಗ್ರಾಮದ ಪೂರ್ವ ದಿಕ್ಕಿನ ಡೊಂಕ ಹೊಲದಲ್ಲಿ ೧೦ ಮತ್ತರು ಭೂಮಿ ಬಿಡುತ್ತಾನೆ. ದಾನವನ್ನು ದೇವಸಿಂಘಬಳಾರನಿಗೆ ಧಾರೆಯೆರೆದು ಕೊಡುತ್ತಾನೆ. ಶಾಸನದಲ್ಲಿ ಜಯಸಿಂಹನನ್ನು ಸಮರೈಕಮಲ್ಲನೆಂದು ಕರೆಯಲಾಗಿದೆ. ಇದನ್ನು ಶಾಸನ ಕವಿಯು ಹೀಗೆ ಹೇಳಿದ್ದಾನೆ.

> **ಚಾಲುಕ್ಯಾಭರಣಂ ಶ್ರೀಮತ್ತ್ರೈಲೋಕ್ಯಮಲ್ಲದೇವರ ವಿಜಯ**
> **ರಾಜ್ಯಮುತ್ತರೊತ್ತರಾಭಿವೃದ್ಧಿ ಪ್ರವರ್ಧಮಾನಮಾ ಚಂದ್ರಾರ್ಕ**
> **ತಾರಂಬರಂ ಸಲುತ್ತಮಿರೆ ತತ್ಪ್ರಿಯಾನುಜಂ ಸ್ವಸ್ತಿ**
> **ಶ್ರೀಮತ್ಕುಮಾರಂ ಜಯಸಿಂಘದೇವರ್ ಕರಡಿಕಲ್ಮೂನೂಱರೊಳಗಣ**
> **ಕುತ್ತಂಬಿತ್ತಿ ಅಗ್ರಹಾರಂ ಬನ್ನಿಗೊಳನಂ ತ್ರಿಬೋಗಾಬ್ಯಂತರ**
> **ಸುದ್ದಿಯಿಂ ದುಷ್ಟನಿಗ್ರಹ ವಿಶಿಷ್ಟಪ್ರತಿಪಾಳನದಿಂದಾಳುತ್ತಮಿರೆ"**

ಎಂದು ಆಳ್ವಿಕೆಯ ವಿವರವನ್ನು ಬಣ್ಣಿಸಿದ್ದಾನೆ.

### ಭೋಗೇಶ್ವರ ದೇವಾಲಯಕ್ಕೆ ದಾನ:

> **"ಭೋಗೇಶ್ವರದೇವರ್ಗ್ಗೆ ಊರಿಂದ ಮೂಡಣ ಡೊಂಕಿವೊಲದಲ್ಲಿ**
> **ಬಿಟ್ಟ ಕರಿಯನೆಲಂ ಮತ್ತ ೫ ಕಿಸುಕಾಡು ಮತ್ತ ೫ ಅಂತು**
> **ಮತ್ತರು ೧೦ ಈಥಂ ಊರೊಡೆಯರೈವರುಂ ಪುರಸ್ಸಹರಾಗಿ**
> **ಧರ್ಮ್ಮವಂ ಪ್ರತಿಪಾಳಿಸುವರು"**

ಎಂದಿದೆ.

## ಜಕ್ಕರಾಜ (ಕ್ರಿ.ಶ.೧೦೪೬)

ಆಂಧ್ರಪ್ರದೇಶದ ನೆಲ್ಗೊಂಡ ಜಿಲ್ಲೆಯ, ಭುವನಗಿರಿ ತಾಲೂಕಿನ, ಕೊನಲುಪಾಕ ಗ್ರಾಮದ ಶಾಸನ[೨೨]ವನ್ನು ಶಾಸನದ ೧೯-೨೦ನೇ ಸಾಲಿನಲ್ಲಿ, ಬರೆದ ಶಾಸನ ಕವಿಯ ಉಲ್ಲೇಖವಿದೆ. 'ಜಕ್ಕರಾಜಂ ಬರದಂ' ಎಂದಿದೆ. ಕ್ರಿ.ಶ.೧೦೪೬ಕ್ಕೆ ಸೇರಿದ ಶಾಸನ ಚಾಲುಕ್ಯ ದೊರೆ ತ್ರೈಲೋಕ್ಯಮಲ್ಲದೇವನು ಕೊಲ್ಲಾಪುರದಿಂದ ರಾಜ್ಯಭಾರ ಮಾಡುವಾಗ ಕೊಳ್ಳಿಪಾಕೆ-

೭೦೦೦'ವನ್ನು ಆಳುತ್ತಿದ್ದ ಮಹಾಮಂಡಳೇಶ್ವರ ಕೊಮ್ಮಣಯ್ಯರಸನು ನಗರದ ನಕರರ, ಗಾವುಂಡರ ಅನುಮತದಿಂದ ಪಂಚಮಠಸ್ಥಾನಕ್ಕೆ ಶುಲ್ಕದತ್ತಿ ಬಿಟ್ಟಿದ್ದನ್ನು ದಾಖಲಿಸಿದೆ.

ಶಾಸನ ಕವಿಯ ಕಾವ್ಯ ಕೌಶಲ್ಯಕ್ಕೆ ಮಹಾಮಂಡಳೇಶನ ವರ್ಣನೆ:

**ಮಹಾಮಂಡಳೇಶ್ವರ ವಿಮಣ್ಡಿತಂ ಚಲಮತ್ತಿ**
**ವಾತಂ ಸುಜನ ಚೂಡಾಮಣಿ ಮಾರ್ಬ್ಬಲ**
**ಗಣ್ಡನಯ್ಯನಗನ್ಧವಾರಣ ನರಿಲ ಮ ಶ್ರೀ ಮನ್ಮಹಾ**
**ಮಣ್ಡಳೇಶ್ವರ ಕೊಮ್ಮಣಯ್ಯರಸಂ ಕೊಳ್ಳಿಪಾಕೆ**
**ಯೆಟಾಸಿರಮುಮನಾಳುತ್ತಮಿಬ್ದು"**

**"ಕೊಳ್ಳಿಪಾಕೆಯಂ ಚತ್ತುರ್ಪುರಕ್ಕಂ ಪಂಚಮಠಸ್ಥಾನಕ್ಕಂ**
**ಅಱುವರ್ಸೆಟ್ಟಿಯರ ನಗರಕ್ಕಂ ಪನ್ನಿರ್ಬ್ಬರ್ಗ್ಗಮುಣ್ಡ**
**ಮೊದಲಾಗಿ ಸಮಸ್ತವಾದ ಪ್ರಜೆಗಳಿಗೆ ಆಚಂದ್ರಾರ್ಕ ಬಿಟ್ಟರ್"**

ಎಂದು ದಾನ ನೀಡಿದ ವಿವರವನ್ನು ಬಣ್ಣಿಸಿದ್ದಾರೆ.

## ರಾಜಮಲ್ಲದೇವ (ಕ್ರಿ.ಶ.೧೦೫೦)

ಶಿವಮೊಗ್ಗ ಜಿಲ್ಲೆಯ, ನಗರ ತಾಲೂಕಿನ, ಹುಂಚ ಗ್ರಾಮದ ಜೈನ ಶಾಸನವು[೨೩] ರಾಜಮಲ್ಲದೇವ ಎಂಬುವನನ್ನು ಅತ್ಯಂತ ಶ್ರೇಷ್ಠನಾದ ಮಹಾಕವಿಯೆಂದು ಬಾಯ್ತುಂಬ ಹೊಗಳಿದೆ. ಈತನು ಬೂತುಗ ಪೆರ್ಮಾನಡಿಯ ಮಗನು. ಈತನ ತಾಯಿ ರೇವಕ್ಕ, ಮರುಳದೇವ, ಗುತ್ತಿಯ ಗಂಗನೆಂದು ಹೆಸರಾದ ಮಾರಸಿಂಹ ಎಂಬುವರು ರಾಜಮಲ್ಲನ ಅಣ್ಣಂದಿರು; ಗೋವಿಂದರ, ಅರುಮುಳಿ ಎಂಬುವರ ತಮ್ಮಂದಿರು, ಗಂಗ ಅರಸು ಮನೆತನದವರೊಡನೆ ಇವನ ಮನೆತನದ ಶರೀರ ಸಂಬಂಧ ಬೆಳೆದಿತ್ತು. ರಾಜಮಲ್ಲನ ದೊಡ್ಡಪ್ಪನಿಗೆ ಗಂಗಾನ್ವಯದ ಹೆಣ್ಣು ಕೊಟ್ಟಿತ್ತು. ಕನಕಸೇನ ಭಟ್ಟಾರಕ ಎಂಬುವನು ಈತನ ಗುರು.

ಶಾಸನ ಕವಿಯು ರಾಜಮಲ್ಲನನ್ನು ಕೊಂಡಾಡುವ ಕಂದಪದ್ಯ:

**"ಶ್ರೀರಾಜಮಲ್ಲದೇವಂ**
**ಭಾರವಿ ಕೇಯೂರ ರಾಜಶೇಖರನಾತಂ**
**ಭಾರವಿ ಸಾಕ್ಷಾದ್ಬಾಣ ಮ**
**ಯೂರಂ ವಾಲ್ಮೀಕಿ ಕಾಳಿದಾಸಂ ವ್ಯಾಸಂ"**

ಎಂದು ಪರಿಪರಿಯಾಗಿ ಪ್ರಶಂಸಿತನಾದ ರಾಜಮಲ್ಲನು ಒಂದಾದರೂ ಕಾವ್ಯ ಕೃತಿಯನ್ನೂ ಶಾಸನ ಕಾವ್ಯ ಕರ್ತೃವಿನ ದೃಷ್ಟಿಯಿಂದಲಾದರೂ ಅತ್ಯಂತ ಶ್ರೇಷ್ಠವಾದ ಕಾವ್ಯವನ್ನು ರಚಿಸದೇ ಇರಲಿಕ್ಕಿಲ್ಲ.

ಅದೂ ಮಹಾಕಾವ್ಯವೇ ಆಗಿರಬೇಕೆಂದೆನಿಸುತ್ತದೆ. ಆದರೆ ಈತನ ಹೆಸರಿನ ಯಾವ ಕಾವ್ಯವೂ ಉಪಲಬ್ಧವಿಲ್ಲ.

**ಜಿನವರ್ಮ ಪಂಡಿತ (ಕ್ರಿ.ಶ.೧೦೫೦)**

ಬೆಳಗಾವಿ ಜಿಲ್ಲೆಯ, ಅಥಣಿ ತಾಲೂಕಿನ, 'ಕೊಕಟನೂರು' ಶಾಸನವನ್ನು[೨೪] 'ವಿದ್ವಜ್ಜನಾಂಭೋಜನೀವನ ಹಂಸ' ಎಂಬ ಬಿರುದಿನ ಕವಿಯಾದ ಜಿನವರ್ಮಪಂಡಿತ' ರಚಿಸಿದನೆಂದು ತಿಳಿದುಬರುವುದು. ಚಾಲುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲನ ಮಹಾಮಂಡಳೇಶ್ವರ ಜೋಗಪಯ್ಯರಸನ ಹೇಳಿಕೆಯಂತೆ ಶಾಸನವನ್ನು ರಚಿಸಿದ್ದಾನೆಂದು ತಿಳಿದುಬರುವುದು. ಈ ಶಾಸನದ ಕಾಲ ಕ್ರಿ.ಶ.೧೦೫೦.

ಈ ಶಾಸನದಲ್ಲಿ ಚಾಲುಕ್ಯ ತ್ರೈಲೋಕ್ಯಮಲ್ಲನನ್ನು ಸೋಲಿಸಿದ ರಾಜಮನೆತನದ ಹೆಸರುಗಳಿದ್ದು ಇವನ ಮಹಾಮಂಡಳೇಶ್ವರನಾದ ಜೋಗಪಯ್ಯರಸನ ಮತ್ತು ಇವನ ಹೆಂಡತಿಯಾದ ಪೊಲ್ಲಕಬ್ಬೆಯನ್ನು ವರ್ಣಿಸಲಾಗಿದೆ. ಇವರ ಆಳ್ವಿಕೆಯ ಕಾಲದಲ್ಲಿ ಕೂಚಸೆಟ್ಟಿ ಎಂಬುವನು ತ್ರೈಪುರುಷ ದೇವಾಲಯವನ್ನು ಕೊಕಟನೂರು ಗ್ರಾಮದಲ್ಲಿ ಕಟ್ಟಿಸಿದನು. ಈ ದೇವಾಲಯಕ್ಕೆ ಜೋಗಪಯ್ಯ ಮತ್ತು ಪೊಲ್ಲಿಕಬ್ಬೆಯರು ತ್ರೈಪುರುಷದೇವನಿಗೆ ಪೂಜಾರ್ಥಕ್ಕಾಗಿ ಅಲ್ಲಿನ ಶಾಲೆಯ ಉಪಾಧ್ಯಾಯರಿಗೆ, ವಿದ್ಯಾರ್ಥಿಗಳಿಗೆ, ಊಟ-ಉಡಿಗೆಗಾಗಿ 'ಜನ್ನವಾಡ' ಗ್ರಾಮವನ್ನು ದಾನವಾಗಿ ಕೊಟ್ಟ ವಿವರಗಳಿವೆ.

ಜಿನವರ್ಮನ ಕಾವ್ಯಶೈಲಿಗೆ ಒಂದು ಉದಾಹರಣೆ:

**"ಜನಿತೋತ್ಸಾಹದ ಮಂಡಳೇಶ ತಿಳಕಂ ಶ್ರೀಜೋಗಭೂಪಂ ಜಗ**
**ಜ್ಜನ ಚಿಂತಾಮಣಿ ತಾನಿದಂ ಬೆಸಸಲೀ ತ್ರೈಮೂರ್ತಿದೇವರ್ಗೆಶಾ**
**ಸನಮಂ ಶಾಸನ ಮಾಗಲೆಯ್ದೆ ಬರೆದಂ ವಿದ್ವಜ್ಜನಾಂ ಭೋಜನೀ**
**ವನ ಹಂಸಂ ಜಿನವರ್ಮಪಂಡಿತ ನಿಳಾಭಾಸ್ವದ್ಯಶೋಮಂಡಿತಂ"**

ಅಲ್ಲಲ್ಲಿ ನಶಿಸಿ ಹೋಗಿರುವ ಈ ಶಾಸನದಲ್ಲಿ ೧೭ ಕನ್ನಡ ಪದ್ಯಗಳಿವೆ. ಆರಂಭದಲ್ಲಿ ಹರಿ-ಹರ ಹಿರಣ್ಯಗರ್ಭ (ತ್ರೈಮೂರ್ತಿದೇವರ) ಸ್ತುತಿಯ ಒಂದು ಸಂಸ್ಕೃತ ಶ್ಲೋಕವೂ ಇದೆ. ಅದರಲ್ಲಿಯ ಕೆಲವು ಪದ್ಯಗಳನ್ನು ಇಲ್ಲಿ ನೋಡಬಹುದು.

**"ಅದಟಂ ಪಾಂಡ್ಯನ ಮೃತ್ಯುವಂ ಮಟಿದನಂ ಚೇರಮ್ಮನಿಲ್ವಂ ಕಡ**
**ಲ್ಚಿದನಾ ಸಿಂಹಳ ನಂ ತಡಂ ಕವಿದನಂ ಕಾಂಭೋಜನಂ ಸೂಱೆಮಾ**
**ಡಿದನಂ ಕ್ಷತ್ರಿಯ ಕಾಳರಾತ್ರಿಯೆನಿಸಿರ್ದಾ ಚೋಳನಂ ದ್ವಂದ್ವಯು**
**ದ್ದದೊಳಾಂತಿಕ್ಕಿದ ಜೆಟ್ಟಿಗರ್ ಜಗದೊಳಾರ್ ತ್ರೈಲೋಕ್ಯಮಲ್ಲಂಬರಂ ॥**

**‘ಜನಕಜೆ ಪಾಟಿ ಹೈಮವತಿ ರೋಹಿಣಿ ತತ್ಸರೂಪೆ ವಾ**
**ಗ್ವನಿತೆ ಸಮಂ ತಿಳೋತ್ತಮೆ ಸಮಾನಮರುಂಧತಿ ಮಿಕ್ಕಪೋಲ್ವಿ ಗೋ**
**ಮಿನಿ ದೊರೆ ಸತ್ಯಭಾಮೆ ಸರಿ ರೇಣುಕಿ ಮನ್ಮಥಪ್ರಿಯಾಂ**
**ಗನೆ ದೊರೆಯೆಂಬುದೆಂಬುದು ಪೆಱರ್ದೊರೆಯೆಂಬುದೆ ಪೊಲ್ಲಿಕಬ್ಬೆಯೊಳ್ ॥**

**ಗಂಗಯ್ಯ (ಕ್ರಿ.ಶ.೧೦೫೧)**

ಆಂಧ್ರಪ್ರದೇಶದ ಮೆಹಬೂಬ್‌ನಗರ ಜಿಲ್ಲೆಯ, ಆಲಂಪುರ ಶಾಸನ[೨೫]ವನ್ನು ಗಂಗಯ್ಯ ಎಂಬುವನು ಈ ಶಾಸನವನ್ನು ಬರೆದಿದ್ದಾನೆ. ಶಾಸನದ ೩೫ನೇ ಸಾಲಿನಲ್ಲಿ ‘ಗಂಗಯ್ಯಂ ಬರೆದಂ’ ಎಂದಿದೆ. ಈ ಶಾಸನವು ಚಾಲುಕ್ಯದೊರೆ ತ್ರೈಲೋಕ್ಯಮಲ್ಲದೇವನ (ಸೋಮೇಶ್ವರ–೧) ಆಳ್ವಿಕೆಯಲ್ಲಿ ಕ್ರಿ.ಶ.೧೦೫೧ಕ್ಕೆ ಸೇರಿದೆ. ಆಲಂಪುರದ ಬ್ರಹ್ಮೇಶ್ವರದೇವರ ಮಹಾಸ್ಥಾನಾಧಿಪತಿ ಪಂಚರಾಶಿಭಟಾರಕರ ಆಳ್ವಿಕೆಯಲ್ಲಿ ಭೂಮಿ ಹಾಗೂ ಮನೆಯನ್ನು ದತ್ತಿಯಾಗಿ ಕೊಟ್ಟಿದ್ದನ್ನು ಇದು ದಾಖಲಿಸಿದೆ. ಈ ದತ್ತಿಗೆ ಕಾರಣ ತಿಳಿಯುವುದಿಲ್ಲ. ಶಾಸನಕವಿಯ ಕಾವ್ಯಕೌಶಲಕ್ಕೆ ಈ ಕೆಳಗಿನ ಸಾಲುಗಳನ್ನು ಗಮನಿಸಬಹುದು.

**“ಸ್ವಸ್ತಿ ಹತಂಪುರವರ ಪ್ರತೀತ ಮಹೋದಯ**
**ಸಕಳ ಭುವನೈಕನಾಥ ಶ್ರೀಬ್ರಹ್ಮೇಶ್ವರದೇವರು**
**ಮಹಾಸ್ಥಾನಾಧಿಪತಿ ಶ್ರೀಮತ್ವಞ್ಚರಾಶಿ**
**ಭಟಾರಕರ ರಾಜ್ಯದನ್ದು ಸ್ವಸ್ತಿ ಸಮಸ್ತಭುವನಾಶ್ರಯ**
**ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ**
**ಪರಮಭಟಾರಕಂ ಸತ್ಯಾಶ್ರಯಕುಳತಿಳಕಂ**

ಎಂದು ಶಾಸನವು ಮುಂದುವರೆದು–

**ಶ್ರೀ ಮತ್ರೈಲೋಕ್ಯಮಲ್ಲದೇವರ ವಿಜಯರಾಜ್ಯಾಭಿವೃದ್ಧಿ**
**ಪ್ರವರ್ಧನಮಾ ಚಂದ್ರಾರ್ಕತಾರಂಬರಂ ಸಲುತ್ತಮಿರೆ**
**....... ಚಾತುರ್ಜ್ಜಾತಕ ತಪೋಧನರ ಪಂಚರಾಶಿ**
**ಪಾದಮೂಲ ಪರಿವಾರಮು ಸನ್ನಿದಾನದಲು ಜಾತಕ**
**ತಪೋಧನಂ ಪಣ್ಡಿತಭಟಾರರ್ತ್ತ..... ತ್ತಿನಸ್ಪಾ ಕೆಯ್ಯುಮಂ**
**ತಮ್ಮ ಮನೆಯುಮಂ ತಮ್ಮ ಮಕ್ಕಳ್ಗೆ ಪಂಚರಾಶಿಯೊಳಂ”**

**ನಯಸೇನಸೂರಿ (ಕ್ರಿ.ಶ.೧೦೫೩)**

ಅವಿಭಜಿತ ಧಾರವಾಡ ಜಿಲ್ಲೆಯ, ಗದಗ ತಾಲೂಕಿನ, ಮುಳಗುಂದ ಗ್ರಾಮದಲ್ಲಿ ಈ ನಯಸೇನಸೂರಿ ಎಂಬ ಘನಪಂಡಿತನು ಆಗ ಬಾಳಿಕೊಂಡಿದ್ದನು. ಕ್ರಿ.ಶ.೧೦೫೩ರಲ್ಲಿ ಕಂಡರಿಸಲಾದ ಆ ಊರ ಒಂದು ಶಿಲಾಶಾಸನದಲ್ಲಿ[೨೬] ಈತನನ್ನು ಪ್ರಾಮುಖ್ಯವಾಗಿ

ಬಣ್ಣಿಸಲಾಗಿದೆ. ಈ ಸಂದರ್ಭದಲ್ಲಿ ಚಾಲುಕ್ಯ ಮೊದಲನೆಯ ಸೋಮೇಶ್ವರ ಆಳುತ್ತಿದ್ದನು. ಶಾಸನಕವಿಯು ವ್ಯಾಕರಣ ವಿಷಯದಲ್ಲಿ ಪಂಡಿತನಾಗಿದ್ದ ಬಗ್ಗೆ ಶಾಸನ ಹೀಗೆ ಹೇಳಿದೆ.

**ನಿನಗೇನೆಂಬೆನೊ ಶಾಕಟಾಯ ಮುನೀಶಂ ತಾನೆ ಶಬ್ದಾನುಶಾ**
**ಸನದೊಳ್ಪಾಣಿನಿ ಪಾಣಿನೀಯದೊಳೆ ಚಂದ್ರಂ ಚಾಂದ್ರದೊಳ್ತಜ್ಜಿನೇಂ–**
**ದ್ರನೆ ಜೈನೇಂದ್ರದೊಳಾ ಕುಮಾರನೆ ಗಡಂ ಕೌಮಾರದೊಳ್ಪೋಲ್ವರೆಂ–**
**ತೆನೆ ಪೋಲರ್ನಯಸೇನಪಂಡಿತರೊಳನ್ಯರ್ವಾರ್ದಿವೀತೋರ್ವಿಯೊಳ್ ॥**

ಎಂಬ ಪದ್ಯದಲ್ಲಿ ಹೇಳಿರುವಂತೆ, ಪ್ರಾಚೀನ ವ್ಯಾಕರಣ ಶಾಸ್ತ್ರಗಳನ್ನೆಲ್ಲಾ ಆತ್ಮಸಾತ್ ಮಾಡಿಕೊಂಡು ಅವುಗಳ ಕರ್ತೃಗಳಷ್ಟೇ ಜ್ಞಾನಸಿದ್ಧಿಯನ್ನು ಪಡೆದುಕೊಂಡವನಾಗಿ ಸಮಸ್ತ ಶಬ್ದಶಾಸ್ತ್ರಪಾರಗರ್ನಯಸೇನ ಪಂಡಿತದೇವರ್' ಎಂಬುದಾಗಿ ಆ ಕಾಲದಲ್ಲಿ ಪ್ರಖ್ಯಾತನಾಗಿದ್ದನು.

ಈ ನಯಸೇನಪಂಡಿತನ ವಿದ್ವತ್ತದ ಪ್ರಭಾವ ಮುಳಗುಂದ ಸುತ್ತ ಹಬ್ಬಿತ್ತು. ಶ್ರೀಮದ್ದಂಡನಾಯಕ ಬಲದೇವಯ್ಯಂಗಳು ಈತನ ಶಿಷ್ಯರಾಗಿದ್ದರೆಂದು ಸೊರಟೂರು ಶಾಸನವು (ಕ್ರಿ.ಶ.೧೧೦೭) ತಿಳಿಸುವುದು; ಲಕ್ಷ್ಮೇಶ್ವರದ ಕ್ರಿ.ಶ.೧೧೮೧ರ ಶಿಲಾಶಾಸನವೊಂದರಲ್ಲಿ[೨೭] ಈ ಪಂಡಿತೋತ್ತಮನ ಕೀರ್ತಿ ದಿಗಂತದಲ್ಲಿ ಹೇಗೆ ದುಮದುಮಿಸುತ್ತಿದ್ದಿತೆಂಬುದನ್ನು ಮನೋಜ್ಞವಾಗಿ ಹೀಗೆ ಚಿತ್ರಿಸಲಾಗಿದೆ.

**ಸರಸತಿಯ ಮನೋಮುದದೆ ತಾಳ್ದಿದನೆನ್ನನವಜ್ಞೆಗೆಯ್ದ ನಾ–**
**ರಿರೆನವಳಿರ್ಕೆ ಚಿಃ ಸವತಿಯೊಳ್ಪುದುವಾಳ್ವುದು ಕಷ್ಟಮೆಂದು ನಿ**
**ಷ್ಠುರವಚನಂಗಳಂ ನುಡಿದು ದಿಕ್ಕರಿಯಂ ಸರಿದೇಜೆ ಕೀರ್ತಿ ತಾಂ**
**ಪುರುಡಿಸಿ ದೂಜೆಪಳ್ವರತಪೋನಿಧಿಯಂ ನಯಸೇನಸೂರಿಯಂ ॥**

"ಇದರಿಂದ ಕನ್ನಡ ವ್ಯಾಕರಣಗ್ರಂಥ (ಭಾಷಾಭೂಷಣ)ವನ್ನು ಬರೆದ ೨ನೇ ನಾಗವರ್ಮನು (ಕ್ರಿ.ಶ. ಸು.೧೧೪೫) ಆ ಗ್ರಂಥದ ೭೪ನೇ ಸೂತ್ರದಲ್ಲಿ 'ದೀರ್ಘೋಕ್ತಿರ್ನಯಸೇನಯ್ಯ' ನಯಸೇನನ ಮತದಂತೆ ಸಂಭೋಧನದ ಪ್ರತ್ಯಯವು ದೀರ್ಘಾಂತವಾಗಿರುವುದೆಂದು ಹೇಳಿದ್ದಾನೆ. ಶಬ್ದಸಾಸ್ತ್ರ ಪಾರಾವಾರ ಪಾರಗನೆಂದು ಶಾಸನೋಕ್ತನಾಗಿರುವ ನಯಸೇನಸೂರಿಗೆ ಅನ್ವಯಿಸಿಯೇ ಈ ಸೂತ್ರವಿರಬೇಕೆಂದು ಹೇಳುವ ಅಗತ್ಯವಿಲ್ಲ. ಈ ನಯಸೇನನು ಕನ್ನಡ ವ್ಯಾಕರಣ ಗ್ರಂಥವನ್ನು ಬರೆದಿದ್ದನೆಂದು ಈ ಸೂತ್ರದಿಂದ ವ್ಯಕ್ತವಾಗುತ್ತದೆ. ಆದರೆ ಅಂಥ ಗ್ರಂಥವೊಂದು ಉಪಲಬ್ದವಿಲ್ಲ"[೨೮]

ಮುಳಗುಂದ ಲಕ್ಷ್ಮೇಶ್ವರ ಶಾಸನಗಳಲ್ಲಿ ಪ್ರಶಂಸಿತನಾಗಿರುವ ಈ ನಯಸೇನಸೂರಿ ಅಥವಾ ನಯಸೇನಪಂಡಿತನೇ 'ಧರ್ಮಾಮೃತ' ಕಾವ್ಯದಕರ್ತೃ ಎಂಬುದಕ್ಕೆ ಆ ಕಾವ್ಯದಲ್ಲಿ ಪ್ರಮಾಣಭೂತ ಉಲ್ಲೇಖ ಉಂಟು.

**ಮುಳುಗುಂದದೊಳಿರ್ದು ಮಹೋ–**
**ಜ್ಜಳಧರ್ಮಾಮೃತಮನಜ್ತೆಯಿಂದಂ ಭವ್ಯಾ–**
**ವಳಿಗಱೆಪಿದಂ ಧರತ್ರೀ**
**ತಳಪೂಜ್ಯಂ ಸುಕವಿನಿಕರಪಿಮಾಕಂದಂ ॥**

ಎಂಬ ಪದ್ಯದಲ್ಲಿ ತಾನು ಈ ಕಾವ್ಯವನ್ನು ಮುಳಗುಂದದಲ್ಲಿದ್ದು, ಬರೆದೆನೆಂದು ಸ್ಪಷ್ಟಶಬ್ದಗಳಲ್ಲಿಯೇ ತಿಳಿಸಿದ್ದಾನೆ. ತಾನು ರಚಿಸಿದ 'ಧರ್ಮಾಮೃತ'ವನ್ನು ಅವನು ಅಲ್ಲಿಯ ಜೈನ ಸಂಘಕ್ಕೆ ಓದಿ ಹೇಳಿ ಶ್ರವಣ ಮಾಡಿಸುತ್ತಿದ್ದನೆಂಬುದೂ ಇಲ್ಲಿ ಗೊತ್ತಾಗುವುದು. ಈ ಗ್ರಂಥದ ರಚನೆ ಪೂರಯಿಸಿದ ಮಿತಿಯ ಉಲ್ಲೇಖವೂ ಒಂದು ಪದ್ಯದಲ್ಲಿದೆ.

'ಧರ್ಮಾಮೃತ'ದ ಕತೃ ಆತ್ಮಪರಿಚಯವನ್ನು ಒಂದು ಪದ್ಯದಲ್ಲಿ ಮಾಡಿಕೊಟ್ಟಿದ್ದಾನೆ.[೨೯]

**ಮಾನಿತಶೀಲನಿಧಾನನ–**
**ನೂನಗುಣಂ ಸಖಳಭವ್ಯಜನಬುಧಜನಚಿ–**
**ತ್ತಾನಂದಕರಂ ಕೇಳ್ ನಯ**
**ಸೇನಬುಧಂ ಸುಕವಿನಿಕರಪಿಕುಮಾಕಂದಂ ॥**

ಇಲ್ಲಿಯ 'ಮಾನಿತಶೀಲನಿಧಾನಂ' ಎಂಬುದು ಲಕ್ಷ್ಮೇಶ್ವರ ಶಾಸನದಲ್ಲಿಯ ವರತಪೋನಿಧಿ' ಎಂಬ ನುಡಿಗೆ ಸರಿಹೊಂದಿಕೆಯಾಗುವಂತಿದೆ 'ಧರ್ಮಾಮೃತ'ದ ನಯಸೇನನು ತನ್ನ ಗುರುವಿನ ಹೆಸರನ್ನು ತನ್ನ ಗ್ರಂಥದಲ್ಲಿ ಹೇಳಿಕೊಂಡಿರದಿದ್ದರೂ ಇತರ ಪ್ರಮಾಣಗಳಿಂದ ನರೇಂದ್ರಸೇನರೇ ಆತನ ಗುರುವಿರಬಹುದೆಂದು ಆರ್. ನರಸಿಂಹಾಚಾರ್ಯರು ಅಭಿಪ್ರಾಯಪಡುತ್ತಾರೆ.[೩೦] ನಯಸೇನಸೂರಿ ಮೂಲಸಂಘದ ಸೇನಗಣದ ಜೈನಯತಿ ನರೇಂದ್ರಸೇನ ತ್ರೈವಿದ್ಯರ ಅಗ್ರಶಿಷ್ಯನೆಂಬುದಕ್ಕೆ ಮೇಲೆ ಹೇಳಿದ ಲಕ್ಷ್ಮೇಶ್ವರದ ಕ್ರಿ.ಶ.೧೦೮೧ರ ಶಾಸನದಲ್ಲಿ ಸ್ಪಷ್ಟವಾದ ಉಲ್ಲೇಖವಿದೆ. ಆ ಗುರು ಕೂಡಾ ಶಬ್ದಶಾಸ್ತ್ರ ಪಾರಂಗತನೆಂದು ಅಲ್ಲಿಯ 'ಕಂದ' ಪದ್ಯದಿಂದ ತಿಳಿಯುತ್ತದೆ.

**ಚಾಂದ್ರಂ ಕಾತಂತ್ರಂ ಜೈ–**
**ನೇಂದ್ರಂ ಶಬ್ದಾನುಶಾಸನಂ ಪಾಣಿನಿ ಮ–**
**ತ್ತೈಂದ್ರಂ ನರೇಂದ್ರಸೇನ ಮು–**
**ನೀಂದ್ರಂಗೇಕಾಕ್ಷರಂ ಪೇಱಂಗಿವು ಮೊಗ್ಗೇ ॥**

ಅಂತೂ ಶಾಸನಗಳ ನಯಸೇನನೂ ಧರ್ಮಾಮೃತದ ನಯಸೇನನೂ ಅಭಿನ್ನರೆಂಬುದರಲ್ಲಿ ಸಂದೇಹವಿಲ್ಲ. ಆ ಕಾಲದಲ್ಲಿ ಹೊಸಗನ್ನಡದಲ್ಲಿ ಕಾವ್ಯವನ್ನು ರಚಿಸುತ್ತೇನೆಂದು ಹೇಳಿ ಸಿಕ್ಕಾಪಟ್ಟೆ ಸಂಸ್ಕೃತವನ್ನು ಸೇರಿಸುವ ಪ್ರವೃತ್ತಿ ಕೆಲವು ಕವಿಗಳಲ್ಲಿ ಇತ್ತೆಂದು ಗೊತ್ತಾಗುತ್ತದೆ. ಹಾಗೆ ಹದಗೆಡಿಸಬಾರದೆಂದು ನಯಸೇನ ತನ್ನ ಗ್ರಂಥದಲ್ಲಿ ಎರಡು ಪದ್ಯಗಳಲ್ಲಿ ಅವರನ್ನು ಖಂಡಿಸಿದ್ದಾನೆ.

**ಪೊಸಗನ್ನಡದಿಂ ವ್ಯಾವ–**
**ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ**
**ತಿಸಿ ಕೂಡಲಾಱದಕ್ಕಟ**
**ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ॥**

**ಸಕ್ಕದಮಂ ಪೇೞ್ವಡೆ ನೆಱೆ**
**ಸಕ್ಕದಮಂ ಪೇೞ್ಗೆ ಶುದ್ಧಕನ್ನಡದೊಳ್ ತಂ**
**ದಿಕ್ಕುವುದೆ ಸಕ್ಕದಂಗಳ**
**ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ ॥** ಎಂದಿದ್ದಾರೆ".

**ದೋಣಯ್ಯ (ಕ್ರಿ.ಶ.೧೦೫೩)**

ಆಂಧ್ರಪ್ರದೇಶದ ಕರೀಂನಗರ ಜಿಲ್ಲೆಯ, ಸನಿಗರಂ ಗ್ರಾಮದ ಶಾಸನ[೩೧]ವು ಚಾಲುಕ್ಯ ದೊರೆ ತ್ರೈಲೋಕ್ಯಮಲ್ಲದೇವನ ಆಳ್ವಿಕೆಯನ್ನು ಹೇಳಿದೆ. ಈ ಶಾಸನವನ್ನು ಬರೆದವನು 'ದೋಣಯ್ಯ' ಎಂಬುದು ತಿಳಿದುಬರುತ್ತದೆ. ತ್ರೈಲೋಕ್ಯದೇವನ ಮಹಾಸಾಮಂತ ಕಾಕತೀಯ ಪೊಳಲರಸನು ಖಂಡಿಸಣಗರದಲ್ಲಿ ಪೆರ್ಗಡೆ ಮಧುವಪ್ಪಯ್ಯಗಳು ಮಾಡಿಸಿದ ಮಧುಪೇಶ್ವರ ದೇವರಿಗೆ ಅಲ್ಲಿಯ ಗಾವುಂಡರನ್ನು ಒಪ್ಪಿಸಿ ೧೨ ಮನೆ ನಿವೇಶನಗಳನ್ನು ೨೦ ಮತ್ತರು ಕರಿಯ ಭೂಮಿಯನ್ನು ಒಂದು ರಾಟಣವನ್ನು ಒಂದು ಗಾಣ, ೩೦ ಮತ್ತರು ಕಿಸುಕಾಡನ್ನು ಬೆಜವಾಂಕೆಯ ಕಾಟೆರೆಡ್ಡಿ ಮೊದಲಾದವರನ್ನು ಒಪ್ಪಿಸಿ ಒಂದು ಮತ್ತರು ನೀರ್ನೆಲವನ್ನು ದತ್ತಿಯಾಗಿ ಕೊಟ್ಟುದು ಈ ಶಾಸನದ ವಸ್ತುವಾಗಿದೆ.

ಶಾಸನ ಕವಿ ದೋಣಯ್ಯನ ಶಾಸನ ಕೌಶಲ ಹೀಗಿದೆ:

**ಶ್ರೀಮತ್ತ್ರೈಲೋಕ್ಯಮಲ್ಲದೇವರ ವಿಜಯರಾಮುತ್ತರಾಭಿವೃದ್ಧಿ**
**ಪ್ರವರ್ಧಮಾನಮಾ ಚಂದ್ರಾರ್ಕತಾರಂಬರಂ ಸಲುತ್ತಮಿರೆ**
**ತತ್ಪಾದ ಪದ್ಮೋಪಜೀವಿ ಸಮಧಿಗತ ಪಂಚಮಹಾಶಬ್ದ**
**ಮಹಾಸಾಮಂತಂ ಶ್ರೀಮತ್ತ್ರೈಲೋಕ್ಯಮಲ್ಲವಲ್ಲಭಪ್ರಸಾದಾಸಾದಿತ**
**ಮಹಾಮಹಿಮಾಸ್ಪದ ಪರಮ ಮಾಹೇಶ್ವರ ಪತಿಹಿತಚರಿತಂ**
**ವಿನಯವಿಭೂಷಣಂ ಶ್ರೀಮನ್ಮಹಾಸಾಮಂತ ಕಾಕತಿಯ**

**ಪೊಳಲರಸರ್"** ಎಂದು ವರ್ಣಿಸಿದ್ದಾರೆ.

**ಕಾಟೆರಡ್ಡಿಯುಂ ದಂಡಮರಡ್ಡಿಯುಂ ಪ್ರಭು'**
**ನಾಗರಾಜನುಮನೊಡಂಬಡಿಸಿ ಪಿರಿಯ ಕೆಱೆಯ**
**ಪೆಱಗೊಂದು ಮತ್ತನ್ನೀರ್ನೆಲನುಂ ಸರ್ವಾಬ್ಯನ್ತಕಸಿದ್ಧಿ**
**ಯಾಗೆ ಕೊಟ್ಟರ್"** ಎಂದು ಬಹುವಿಧದಲ್ಲಿ ವಿವರಿಸಲಾಗಿದೆ.

**ಚಟ್ಟಪಯ್ಯ (ಕ್ರಿ.ಶ.೧೦೫೩)**

ಬಾಗಲಕೋಟ ಜಿಲ್ಲೆಯ, ಬಾದಾಮಿ ತಾಲೂಕಿನ, ಕೆಳವಡಿ ಗ್ರಾಮದ ಶಾಸನ[೩೨]ವನ್ನು ಶಾಸನ ಕವಿ 'ಚಟ್ಟಪಯ್ಯ'ನೆಂಬುವನು ಬರೆದಿದ್ದಾನೆ. ಈ ಶಾಸನವು ಕ್ರಿ.ಶ.೧೦೫೩ರ ಕಾಲಕ್ಕೆ ಸೇರಿದ ಶಾಸನವು ಕಲ್ಯಾಣ ಚಾಲುಕ್ಯ ಅರಸ ತ್ರೈಲೋಕ್ಯಮಲ್ಲದೇವನು. ಆಳುತ್ತಿರುವಾಗ ಇವನ ಮಹಾಸಾಮನ್ತಾಧಿಪತಿ ಭೋಗದೇವರಸನು ಪಂಗರಗಿ ಹನ್ನೆರಡು ಆಳುತ್ತಿರುತ್ತಾನೆ. ಇವನ ಮೈದುನ 'ಸುಪ್ಪರಸನು' ಕೆಳವಾಡಿಯ ಕೆರೆಗೆ ೩೦ ಮತ್ತರು ಭೂಮಿಯನ್ನು ಮತ್ತು ಒಂದು ಮನೆಯ ನಿವೇಶನವನ್ನು ದಾನ ಮಾಡಿದ ವಿಷಯ ಈ ಶಾಸನದಲ್ಲಿದೆ. ಸುಪ್ಪರಸನನ್ನು ಶಾಸನದಲ್ಲಿ 'ಸರಸ್ವತಿ ಕರ್ಣಾವತಂಸಂ', 'ಕರ್ನಾಟಕ ನಾಟ್ಯಕರ್ನಾಪೂರಂ' 'ವಾಚಕಾಭರಣಂ' ವಿದಗ್ಧ ಮುಗ್ಧ ಯುವತೀಜನ ಸ್ನಿಗ್ಧನೇತಾಂಜನಂ, ಸುಕವಿಜನ ಮನೋರಂಜನಂ', ಬಂಧು ಚಿಂತಾಮಣಿ ಶಿಷ್ಟರಕ್ಷಾಮಣಿ ಮುಂತಾಗಿ ಹೊಗಳಲಾಗಿದೆ. ಒಂದು ಕೆರೆಯ ದಾನಕ್ಕಾಗಿಯೇ ಹಾಕಿಸಿದಂತಹ ವಿಶೇಷ ಶಾಸನವಿದು. ಇದನ್ನು ಶಾಸನಕವಿ ಹೀಗೆ ಬರೆದಿದ್ದಾನೆ.

**'ನಾಮಾದಿ ಪ್ರಶಸ್ತಿ ಸಹಿತಂ ಶ್ರೀಮದಾನಂದನಾಯಕಂ ಭೋಗದೇವರಸಂ**
**ಪಂಗರಗಿ ಪಂನೆರಡುಮನಾಳುತ್ತಮಿರೆ ಆತನ ಮೈದುನಂ ।**
**ಸಮಸ್ತ ರಾಜ್ಯಭಾರ ನಿರೂಪಿತ ಮಹಾಮಾತ್ಯ ಪದವೀ ವಿರಾಜಮಾನ**
**ಮಾನ್ನೋನ್ನತ ಪ್ರಭುತ್ವ ಮಂತ್ರೋತ್ಸಾಹ ಶಕ್ತಿತ್ರಯಸಂಪನ್ನಂ ।**
**ವಿಭುದ ಪ್ರಸನ್ನಂ । ಸಕಳವಿಭುರಾಜ ಸರೋಜನೀ ರಾಜದ್ರಾಜಹಂಸಂ**
**ಸರಸ್ವತಿ ಕರ್ಣ್ಣಾವತಂಸಂ । ಪೀವರ ಸುಭಗ ಕಾಮಿನೀಜಘನ**
**ನಿಬಿಡ ಕಟಿನೋತ್ತುಂಗತ್ರಿತ್ತಸ್ತನತ್ಮಾರ್ಪಿತಾಸ್ಫಾರಹಾರಂ ।**
**ಕರ್ನಾಟಕನಾಟ್ಯಕರ್ನಾಪೂರಂ ಹರಚರಣಕಮಲಯುಗಳ ಮದ**
**ಮುದಿತಮತ್ತಷಟ್ಚರಣಂ । ವಾಕಾಭರಣಂ । ವಿದಗ್ಧ**
**ಮುಗ್ಧಯುವತೀಜನ ಸ್ನಿಗ್ಧನೇತ್ರಾಂಜನಂ ಸುಕವಿಜನ**
**ಮನೋರಂಜನಂ । ಬಂಧು ಚಿಂತಾಮಣಿ । ಶಿಷ್ಟರಕ್ಷಾ ಮಣಿ ।**
**ಆಶೇಷ ಸಕಳಜನಸ್ತುತ್ಯಂ ನಾಮಾದಿ ಸಮಸ್ತ ಪ್ರಶಸ್ತಿ**
**ಸಹಿತಂ ಶ್ರೀಮತ್ ಸುಪ್ಪರಸರ್ ॥**

ಎಂದು ಶಾಸನವು ಸುಪ್ಪ್ರಸನ್ನಗುಣವಿಶೇಷಣಗಳನ್ನು ವರ್ಣಿಸಿದೆ.

**ಕವಿರಾಜವಲ್ಲಭ ಗೋವಿಂದ (ಕ್ರಿ.ಶ.೧೦೫೩)**

ಶಿವಮೊಗ್ಗ ಜಿಲ್ಲೆಯ, ಹೊಸನಗರ ತಾಲೂಕಿನ, ಹೆಬ್ಬೈಲು ಗ್ರಾಮದ ಸಮೀಪದ ಕಾಡಿನಲ್ಲಿ ದೊರಕಿದ ಶಾಸನವನ್ನು[೩೩] ಈತನು ರಚಿಸಿದ್ದಾನೆ. ಈತನು ಶ್ರೀಪ್ರತಿಮೆಯ ಮಾರಸಿಂಗನ ಮಗ, ವಿದ್ವಾಂಸನಾದ ಬ್ರಾಹ್ಮಣ, ಗಂಗದೊರೆಯಾಶ್ರಯದ ನಿಯೋಗ ಪ್ರಭು ಎಂದು ಶಾಸನದಿಂದಲೇ ತಿಳಿದುಬರುತ್ತದೆ. ಚಚ್ಚೌಕ ಸ್ತಂಭದ ನಾಲ್ಕು ಮಗ್ಗುಲಲ್ಲಿ ೧೦೮ ಸಾಲುಗಳಲ್ಲಿ ಈ ಶಾಸನ ರಚಿತವಾಗಿದೆ. ಈ ಶಾಸನವನ್ನು ಕೆತ್ತಿದವನು ಬಡಗಿ ಅಯ್ಯೋಜ.

ಶಾಸನದಲ್ಲಿ ಉಕ್ತನಾದ ವೀರಶಾಂತದೇವನ ಆಳ್ವಿಕೆಯ ಕಾಲಾಧಾರದಿಂದ ಈ ಶಾಸನ ಕಾಲ ೧೦೫೩, ಸಾನ್ತಳಿಗೆ ಸಾಸಿರನಾಡಿನ ದೊರೆ ವೀರಶಾಂತರದೇವ ತನ್ನ ನೆಚ್ಚಿನ ಮಂತ್ರಿಯಾದ ನಗುಲರಸನಿಗೆ ಕಲ್ನಾಡನ್ನು ಕರರಹಿತ ಬಳುವಳಿಯಾಗಿ ಕೊಟ್ಟು, ಪೆರ್ವಯಲ್ ಹನ್ನೆರಡರಿಂದ ಕಿರುದೆರೆಯನ್ನೂ, ಬಿಟ್ಟಿಯನ್ನೂ, ಸಂಗ್ರಹಿಸಿಕೊಳ್ಳುವ ಅವಕಾಶವಿತ್ತು. ಜೊತೆಗೆ ೧೦೦೦ ಗದ್ಯಾಣವನ್ನೂ ಕೊಟ್ಟ ಸಂಗತಿ ಇಲ್ಲಿ ಉಲ್ಲೇಖವಾಗಿದೆ. ೪೦ ಸಾಲುಗಳುದ್ದಕ್ಕೆ ನಗುರಸ ಅಮಾತ್ಯನ ವರ್ಣನೆ ಬರುತ್ತದೆ. ಜೈನ ಅಮಾತ್ಯನಾದ ಈತ ತನ್ನ ಮಗನನ್ನು ದೊರೆಗೆ ಅರ್ಪಣೆ ಮಾಡಿದ ಸುದ್ದಿಯೂ ಉಕ್ತವಾಗಿದೆ. ಆದರೆ ಅಲ್ಲಿ ವಿಷಯ ಸ್ಪಷ್ಟವಾಗದು. ಶಾಸನದ ಬಹುಭಾಗ ಗದ್ಯವಿದೆ.

**ಮಾದರಿಗೆ ಒಂದು ಪದ್ಯ:**

**ಕೆಡೆಯದಪಂ ಮಹಾಮಹಿಮ ರಾಜಸುತ ಪ್ರತಿಪತ್ತಿಯೆಂಬವಂ**
**ತಡೆಯದೆ ವೀರಸಾನ್ತರಮಹೀಪತಿ ತಾ ದಯೆಗೆಯ್ದು ಕೊಲ್ವೊಡಂ**
**ಬಿಡೆ ನಿಜಪುತ್ರನಿಂ ಬರಿಸೆನಿಪಿ ನೆಗಟ್ತಿಯನೆಯ್ದೆ ಕೊಟ್ಟನೆ**
**ನ್ದರೆ ದೊರೆಯಾರ್ಪರಾರ್ ನಗುಲ ಭೂಪನೊಳೀ ವಸುಧಾತಳಾಗ್ರದೊಳ್॥**

**ಚಾಮುಂಡರಾಯ (ಕ್ರಿ.ಶ. ೧೦೫೪)**

ಅವಿಭಜಿತ ಧಾರವಾಡ ಜಿಲ್ಲೆಯ ತಾಂಬ್ರಗುಂಡಿಯ ಶಾಸನ[೩೪] ಚಾಮುಂಡರಾಯನು ರಚಿಸಿದ್ದಾನೆ. ಈ ಶಾಸನದ ಕಾಲ ಕ್ರಿ.ಶ.೧೦೫೪ ಈ ಶಾಸನದಲ್ಲಿ ಯಾದವ ಮಾಧವರಸನ ಸಾಮಂತನಾದ ದಾಸಿಮಯ್ಯನು ಕಲಿದೇವಸ್ವಾಮಿ ಮತ್ತು ವಿಷ್ಣುದೇವರ ನಂದಾದೀವಿಗೆಗೆ ನೀಡಿದ ದಾನವನ್ನು ಉಲ್ಲೇಖಿಸಿದೆ. ತ್ರಿಷಷ್ಠಿ ಪುರಾಣದ ಕರ್ತೃ ಚಾಮುಂಡರಾಯನಿಗೂ ಈ ಶಾಸನ ಕವಿ ಚಾಮುಂಡರಾಯನಿಗೂ ಯಾವುದೇ ಸಂಬಂಧವಿಲ್ಲ. ಇಬ್ಬರೂ ಭಿನ್ನರು ಚಾಮುಂಡರಾಯನದು ಲಲಿತವಾದ ಸ್ಫುಟಶೈಲಿ.

ಮಾಧವನ ದಾನಶೀಲತೆಗೆ ಉದಾಹರಣೆಗಾಗಿ ಕವಿ ಕಾವ್ಯ ಕೌಶಲ್ಯಕ್ಕೆ ಈ ಪದ್ಯ:

**ಕವಿಗಮಕಿ ವಾದಿ ವಾಗ್ಮಿಗೆ**
**ರವಿಸುತ ಬಲಿ ಶಿಬಿ ದಧೀಚಿಯಿಂ ಮಿಗಿಲೆನೆ ಬೇ**
**ಡುವುದಂ ಕುಡುತಿರ್ಥಂ ಮಾ**
**ಧವಾರನೆಂದು ದಧಿಪರಿವೃತೋರ್ದರೆ ಪೊಗಟ್ಗುಂ ॥**

ಇದು ಮುಂದೆ ಹನ್ನೆರಡನೆ ಶತಮಾನದ ಕವಿಯಾದ ಹರಿಹರನ ಮೇಲೆಯೂ ಪ್ರಭಾವ ಬೀರಿದೆ. ಇದನ್ನೇ ಹೋಲುವ ಹರಿಹರನ ಪಂಪಾಶತಕ'ದ ಪದ್ಯದ ನಿದರ್ಶನ ನೋಡಬಹುದು.

**'ಮನುಜರ ಮೇಲೆ ಸಾವವರ ಮೇಲೆ**
**ತನಗೀಂದ್ರ ಚಂದ್ರ ಬಲಿ ಕರ್ಣ**
**ದಧೀಚಿ ಎಂದು ಅಹರ್ನಿಶಿ ಅನವರತಂ ಪೊಗಳಿ ಕೆಡಬೇಡಲೋ**
**ಮಾನವ"** ಎಂಬ ಪದ್ಯದಲ್ಲಿ ಹೊಗಳಲು ಬಳಸಿದ ಹೆಸರುಗಳು ಸಾಮ್ಯತೆಯನ್ನು ಕಾಣಬಹುದಾಗಿದೆ.

**ವಾವಣಯ್ಯ (ಕ್ರಿ.ಶ.೧೦೫೪)**

ಬಳ್ಳಾರಿ ಜಿಲ್ಲೆಯ, ಹರಪನಹಳ್ಳಿ ತಾಲೂಕಿನ, ನಂದಿಬೇವೂರ ಶಾಸನ[೩೫] ಚಾಲುಕ್ಯ ತ್ರೈಲೋಕ್ಯಮಲ್ಲನ ಆಳ್ವಿಕೆಯಲ್ಲಿ ಅವನ ಮಾಂಡಳಿಕ ತ್ರೈಲೋಕ್ಯಮಲ್ಲ ನೊಳಂಬಪಲ್ಲವ ಪೆರ್ಮಾಡಿದೇವನು ಕೋಗಳಿ-೫೦೦, 'ಕದಂಬಳಿಗೆ-೧೦೦೦' ಬಲ್ಲಕುಂದೆ-೫೦೦, 'ಕಣಿಕಲ್ಲು-೩೦೦', ನೊಳಂಬವಾಡಿ-೩೨೦೦೦'ನ್ನು ಆಳುತ್ತಿರಲು ಊರೊಡೆಯ ಶಿವಮಯ್ಯ ಮೊದಲಾದ ನೂರ ಇಪ್ಪತ್ತು ಜನರು ಸೇರಿ ಇಚಿವನೊಳಂಬ ನಾರಸಿಂಹದೇವರ ಪಂಚಪ್ರಧಾನರ ಅನುಮತದಂತೆ ದೇಸಿಗಣದ ಅಷ್ಟೋಪವಾಸಿಬಳಾರರು' ಮಾಡಿಸಿದ ಬಸದಿಗೆ ಭೂದಾನ ನೀಡುತ್ತಾರೆ.

ಶಾಸನದ ಇನ್ನೊಂದು ಬದಿಯಲ್ಲಿ ಬೇಹೂರಿನಲ್ಲಿ ಈ ಮೊದಲು ಯಾರೂ ದೇಹಾರವನ್ನು ಮಾಡಿಸಿರಲಿಲ್ಲ ಅಂಥ ಕಾರ್ಯವನ್ನು ಅಷ್ಟೋಪವಾಸಿಮುನಿ ಮಾಡಿಸಿದ ನಾರಸಿಂಹದೇವ ಅದಕ್ಕೆ ದತ್ತಿ ನೀಡಿದ. ಇದು ಇದರ ವಸ್ತು, ಇದನ್ನು ವಾವಣಯ್ಯ ಶಾಸನಕವಿ' ರಾಚೋಜನೆಂಬುವವನು ಇದನ್ನು ಕೆತ್ತಿದನು.

ಶಾಸನಕವಿಯ ಕೌಶಲಕ್ಕೆ ಶಾಸನದ ಕೆಲ ಸಾಲುಗಳನ್ನು ಹೀಗೆ ಕಾಣಬಹುದಾಗಿದೆ.

> **ಇನಿತುಂ ಬಾಧಾವಿರಹಿತಮೆನಿಶಿರೆ ಬೆಹೂರ ವಿಪ್ರಮುಖ್ಯರ್ಕ್ಕೊ**
> **ಟ್ಟರ್ಜ್ಜಿನಪೂಜೆಗಷ್ಟು ಪಾಸದಮುನಿಗೆ ಮಹಾಗುಣಿಗೆ**
> **ಚಂದ್ರ ತಾರಂಬರೆಗಂ ॥ ಪ್ರಿಯದಿಂದಿನ್ತಿದನೆಯ್ದೆ ಕಾವ**
> **ಪುರುಷಂಗಾಯುಂ ಮಹಾಶ್ರೀಯುಮಕ್ಕೆ ಇದಂ ಕಾಯದೆ ಕಾಯ್ವ**
> **ಪಾಪಿಗೆ ಕುರುಕ್ಷೇತ್ರಂಗಳೊಳ್ ವಾರಣಾಸಿಯೊಳೆಳ್ಕೋಟಿ**
> **ಮುನೀಂದ್ರರಂ ಕವಿಲೆಯಂ ವೇದಾಢ್ಯರಂ ಕೊಂದದೊಂದಯಸಂ**
> **ಸಾಗ್ಗುಮೆನುತ್ತ ಸಾಜೆದಪು ದೀ ಶೈಳಾಕ್ಷರಂ ಬ್ರಾಜಿಯೊಳ್ ॥**

**ಸರ್ವ್ವದೇವಯ್ಯ (ಕ್ರಿ.ಶ.೧೦೫೫)**

ಆಂಧ್ರಪ್ರದೇಶದ, ಮೆಹಬೂಬನಗರ ಜಿಲ್ಲೆಯ, ಆಲಂಪುರ ಗ್ರಾಮದ ಶಾಸನವು[೩೬] ಬ್ರಹ್ಮೇಶ್ವರದೇವರ ಮಹಾಸ್ಥಾನಾಧಿಪತಿಗಳಾದ ಸೋಮೇಶ್ವರರಾಸಿ ಭಟ್ಟಾರಕರು ಪುಚರಾಸಿ ಮೂಲದ ಶ್ರೀ ಪರಿವಾರದವರು ಕಾಂಸಿಗ ನಾಚೋಜನಿಗೆ ಭೂಮಿಯನ್ನು ದತ್ತಿಯಾಗಿ ಕೊಟ್ಟದ್ದನ್ನು ಇದು ದಾಖಲಿಸುತ್ತದೆ. ಇದನ್ನು ಶಾಸನ ಹೀಗೆ ಹೇಳಿದೆ.

> **"ಸ್ವಸ್ತಿ ಹತಂಪುರವರ ಪ್ರತೀತ ಮಹೋದಯ**
> **ಸಕಳಭುವನೈಕನಾಥ ಶ್ರೀಬ್ರಹ್ಮೇಶ್ವರದೇವರ**
> **ಮಹಾಸ್ಥಾನಾಧಿಪತಿಗಳಪ್ಪ ಸೋಮೇಶ್ವರರಾಸಿ**
> **ಭಟ್ಟಾರಕರುಂ ಪಜ್ಚರಾಶಿ ಪಾದಮೂಲ...**
> **ಕಾಂಸಿಗ ನಾಚೋಜಂಗೆ ತಮ್ಮೊಡನೆಯ**
> **ಸಾಸನ ಮರ್ಯಾದೆಯಿಂ ಕೊಟ್ಟ**
> **ಕರಿಯ ನೆಲಂ ಮತ್ತನೂಱು ಅಂಕದೊಳಂ"**

ಎಂದು ಶಾಸನ ಸಾಲುಗಳಲ್ಲಿ ಕೌಶಲ ವ್ಯಕ್ತವಾಗಿದೆ.

**ಗಿರಿವಜ್ರಂ ನಾಗದೇವ (ಕ್ರಿ.ಶ.೧೦೫೬)**

ನಿಜಾಮಾಬಾದ ಜಿಲ್ಲೆಯ, ಬೋಧನ್ ತಾಲೂಕಿನ, ಬೋಧನ ಗ್ರಾಮದ ಶಾಸನವನ್ನು[೩೭] ಬಿರುದಲೇಖಕ ಗಿರಿವಜ್ರಂ ನಾಗದೇವನ ಲಿಖಿತಂ' ಎಂದಿದೆ. ಇದರಲ್ಲಿ ಚಾಲುಕ್ಯ ದೊರೆ ತ್ರೈಲೋಕ್ಯಮಲ್ಲದೇವನ (ಸೋಮೇಶ್ವರ–೧) ಆಳ್ವಿಕೆ ಹೇಳಿದೆ. ರಾಷ್ಟ್ರಕೂಟ ದೊರೆ ಇಂದ್ರವಲ್ಲಭನು ರಾಜಧಾನಿ ಬೋಧನದಲ್ಲಿ ಮಾಡಿಸಿದ ಇಂದ್ರನಾರಾಯಣ ದೇವಾಲಯ ಜೀರ್ಣವಾಗಿ ಶಿಥಿಲವಾಗಿತ್ತು. ಅದನ್ನು ತ್ರೈಲೋಕ್ಯಮಲ್ಲನ ಪೆರ್ಗಡೆ ಜೋಗಪಯ್ಯನು ಜೀರ್ಣೋದ್ಧಾರ ಮಾಡಿಸಿ ಅಲ್ಲಿ ವಿಷ್ಣುದೇವರನ್ನು ಪ್ರತಿಷ್ಠೆ ಮಾಡಿಸಿ ಗರುಡ ಮಾನಸ್ತಂಭವನ್ನು ನಿಲ್ಲಿಸಿದರ ಬಗ್ಗೆ ಹೇಳಿದೆ. ದೇವರ ಸೇವೆಗೆ ಮನೆ ನಿವೇಶನ ಗಾಣ ಒಂದು ಹೂದೋಟ, ಪಿರಿಯ ಮಾವುಡಗೆ

ಮತ್ತು ಕಿರಿಯ ಮಾವುಡಗೆ ಎಂಬ ಎರಡು ಗ್ರಾಮಗಳನ್ನು ದತ್ತಿಯಾಗಿ ಕೊಡಲಾಯಿತೆಂದು ಹೇಳಿದೆ. ಜೋಗಪಯ್ಯನ ಸಾಧನೆಗಳನ್ನು ಇಲ್ಲಿ ವಿಶೇಷವಾಗಿ ವರ್ಣಿಸಿದ್ದಾನೆ.

**ಭೂಮ್ಯಮ್ಬು ತೇಜೋನಿಳಾಕಾಶಾ ನಿಯುಕ್ತ**
**ಸ್ಥಾನಮೀಪನ್ನಗ ರಿಪುಗಿದೆ ದೈತ್ಯಾ...ಕ್ಕೆ**
**ತಾಂ ಶಾಸನ ದಿನ್ದಂ ಸಾರಮೆಂಬಂತಿರೆ ನಿಲಿಸಿದ...**
**ಸ್ಥಾನದೊಳ್ ಜೋಗಪಾರ್ಯ್ಯಂ ॥**

**ದ್ವಿಜ ಕೀರ್ಣ್ನಂ ಬನದಂತೆ ಭೋ**
**ಗ ನಿಳಯಂ ನಾಗೇನ್ದ್ರನಂ**
**ತಾತ್ತ ವಾರಿಜಾಮಬ್ಜಾ.. ರದಂತೆ**
**ಧರ್ಮ್ಮಯುತಮದ್ಯದ್ಯೋಧನನ್ತಾನತ**
**ತ್ರಿಜಗಂ ದಾನಿಗಳನ್ತೆ ತಾನೆಸೆವುದೀಂ**
**ಶ್ರೀ ಜೋಗ ದ್ಯೋಗದಿಂ ವಿಜಿತೋರ್ವ್ವೀ**
**ಪುಟ ಭೇದನಂ ಸಕಳ ಸೌಖ್ಯೋದ್ಪಾದನಂ ॥**

ಎಂದು ವರ್ಣಿಸಲಾಗಿದೆ.

**ಕವಿಮಲ್ಲ (ಕ್ರಿ.ಶ.೧೦೫೭)**

ಮೈಸೂರು ಜಿಲ್ಲೆಯ, ಹೆಗ್ಗಡದೇವನಕೋಟೆ ತಾಲೂಕಿನ, ಬೆಳತೂರು ಗ್ರಾಮದ[೩೮] ಹೊಲದಲ್ಲಿ ಬಿನಕಲಮ್ಮನಗುಡಿಯ ಶಾಸನವನ್ನು 'ಮಲ್ಲ' ಎಂಬ ಶಾಸನ ಕವಿಯು ರಚಿಸಿದನೆಂದು ತಿಳಿದುಬರುತ್ತದೆ. ಚೋಳರ ಇಮ್ಮಡಿ ರಾಜೇಂದ್ರಚೋಳನ ಕಾಲದಲ್ಲಿ ರಚಿತವಾಗಿರುವ ಈ ಶಾಸನದ ಕಾಲ ಕ್ರಿ.ಶ.೧೦೫೭. ಸಂಪೂರ್ಣ ಕಾವ್ಯದಿಂದ ಕೂಡಿದ ಈ ಶಾಸನದಲ್ಲಿ ಒಟ್ಟು ೨೨ ಪದ್ಯಗಳಿವೆ.

ಕವಿಮಲ್ಲನು ಒಂದು ಕಂದಪದ್ಯದಲ್ಲಿ ತನ್ನನ್ನು ಹೀಗೆ ಹೊಗಳಿಕೊಂಡಿದ್ದಾನೆ.

**ಮಱುಪರ ಚಕ್ರಂ ದ್ವಿಜರೊಳ್**
**ಕಱಿಮಱಿಯಿಲ್ಲೆನಿಪ ಕುಜೆಪಿನಾದಿತ್ಯಂ ಸ**
**ನ್ದ ಱಕೆಯವಗಾದ ಮಲ್ಲಂ**
**ಜಱುಚದ ಕವಿರಾಜ ಬಾಂಧವಂ ಬರೆದನಿದಂ**

ಈ ಶಾಸನದಿಂದ ಈತನಿಗೆ 'ಕವಿರಾಜಬಾಂಧವ' ಎಂಬ ಬಿರುದಿತ್ತೆಂಬುದು ಶಾಸನದಿಂದ ತಿಳಿದುಬರುವುದು. ಈ ಕವಿಯ ಯಾವುದೇ ಸಾಹಿತ್ಯಕೃತಿಗಳು ಇದ್ದ ಬಗ್ಗೆ ಎಲ್ಲಿಯೂ ಉಲ್ಲೇಖಗಳಿಲ್ಲ.

ಈ ಶಾಸನದಲ್ಲಿ ದೇಕಬ್ಬೆ ಎಂಬ ಮಹಾಸತಿಯು ಅನುಗಮನವಾದ ವಿಷಯವನ್ನು ಕಾವ್ಯಾತ್ಮಕವಾಗಿ ವರ್ಣಿಸಲಾಗಿದೆ. ಈ ಸಂದರ್ಭದಲ್ಲಿ ದೇಕಬ್ಬೆ, ಅವಳ ತಂದೆಯಾದ 'ರವಿಗ' ದೇಕಬ್ಬೆಯ ಗಂಡನಾದ 'ಏಚ'ನನ್ನು ವರ್ಣಿಸಲು ಹಲವಾರು ವೃತ್ತಗಳನ್ನು ಬಳಸಿಕೊಂಡಿದ್ದಾನೆ. ಒಂದು ಪದ್ಯ ಹೀಗಿದೆ:

**ಕುಡಿಯರ ವಲ್ಲಭಂ ಕುಡಿಯರರಾಭರಣಂ ನುಗುನಾಡ ರಾಮನೆ**
**ನ್ನೊಡೆ ಕಲಿಕಾಲ ಕರ್ಣನ ವಿನೋದದ ಚಾಗದ ಬೀರದಾಪ್ವನೀ**
**ಗಡಿನ ನಿಕೃಷ್ಟ ನಿರ್ಗ್ಗುಣ ನಿಕೃತ್ಯ ನಿರಾಚರಣೋಟವೀಟರಂ**
**ಕಡು ಜಡರೆನ್ತು ಪೋಲಿಪರೆ ಧನ್ಯನೆನಪ್ಪ ವಚೋಗ್ರಗನ್ಯನ**

ಚಾರಿತ್ರಿಕವಾಗಿ ಇದೊಂದು ಮುಖ್ಯ ಶಾಸನ. ಆದರೆ ಅದಕ್ಕಿಂತ ಮಿಗಿಲಾಗಿ ಸಾಹಿತ್ಯಿಕ ದೃಷ್ಟಿಯಿಂದ ಇದು ಅಪೂರ್ವವಾದದ್ದು ತಿ.ತಾ. ಶರ್ಮರು[೩೯] ಇದನ್ನು ಮಹಾಸತಿಯ ಮಹಾಕಾವ್ಯರೂಪದ ಶಾಸನ ಹಾಗೂ ವೀರಕರುಣಾದ್ಭುತರಸಗಳ ತೊರೆ' ಎಂದು ಕರೆದಿರುವುದು ಸಮಂಜಸವಾಗಿದೆ. ಸರಳ ನಿರೂಪಣೆಯೇ ಈ ಶಾಸನ ಕಾವ್ಯದ ಸೊಬಗು.

ಶಾಸನದಲ್ಲಿ ಬಳಸಿರುವ ವೃತ್ತಗಳೆಂದರೆ ಕಂದ, ಚಂಪಕಮಾಲೆ, ಪಿರಿಯಕ್ಕರ, ಸ್ರಗ್ಧರೆ, ಮಹಾಸ್ರಗ್ಧರೆ, ಹಾಗೂ ವಿರಳವಾದ ಲಲಿತವೃತ್ತ, ದೇಕಬ್ಬೆಯ ವರ್ಣನೆಯನ್ನು ಮಾಡಿರುವ ಲಲಿತವೃತ್ತ:

ಶ್ರೀರಮಣೀ ಗೌರಿ ಶಚಿಧರಿಣಿಯ ಪುತ್ರಿ ರತಿ ಭೂರಮಣಿಯನ್ದದ ಸ್ವರೂಪವಱಿವೊಳ್ಪಾದಾರೆ ಜಯಧಾರೆ ಜಸಧಾರೆ ಭಯಹಾರೆ ಪತಿಭಕ್ತೆ ದೃತಶಕ್ತೆಯೆನೆ ಸಂಧೀ ವೀರನಿಧಿಯಂ ಚಲದ ವಾರಿನಿಧಿಯಂ ಗುಣದ ಚಾರುನಿಧಿಯಂ ನೆಗಳ್ದ ದೇಕಲೆಯನಿನ್ತಿ ನಾರಿಜನರನ್ನಮನದಾರೊ ಮಱಿವರ್ ಸಕಳಧಾರಿಣಿಯೊಳಿನ್ತು ವರಕಾನ್ತೆ ದೊರೆಯಾವಳ್ ॥

ದಾನವಿಷಯವನ್ನು ಬಿಟ್ಟರೆ ಉಳಿದ ವಿವರ ಸದ್ಯದಲ್ಲಿರುವ ಈ ಶಾಸನದಿಂದ ಕವಿಯ ಶೈಲಿಗೆ ಇದೊಂದು ಉತ್ತಮ ನಿದರ್ಶನವನ್ನಾಗಿ ಗಮನಿಸಬಹುದು.

## ಕೊಂಡಪಯ್ಯ (ಕ್ರಿ.ಶ.೧೦೫೮)

ಆಂಧ್ರಪ್ರದೇಶದ, ಮೆಹಬೂಬನಗರ ತಾಲೂಕಿನ, ಆಲಂಪುರ[೪೦] ಶಾಸನವನ್ನು ಕೊಂಡಪಯ್ಯ ಎಂಬ ಶಾಸನಕವಿ ಇದನ್ನು ಬರೆದಿದ್ದಾನೆ.

ಸ್ವಸ್ತಿ ಚರಣಸರೋರುಹ ವಿಹಿತ ವಿಳೋಚನ
ತ್ರಿಳೋಚನ ಪ್ರಮುಖಾಖಿಳ ಪೃಥ್ವಿಸ್ವರಕಾರಿತ
ಕಾವೇರಿ ತೀರ ಕರಿಕಾಲಕುಲರತ್ನಪ್ರದೀಪ
ಕುಮಾರಾಂಕುಸ ಕಾಂಚೀಪುರ ತೃಪುರ ಸಂಹರಣ
ಮಹೇಶ್ವರಂ ಶ್ರೀಮನ್ಮಹಾಮಣ್ಡಲೇಸ್ವರ
ಇರುಗಣಚೋಳಮಹಾರಾಜರ್ಬ್ಬೆಸಸಿ ಸಮಸ್ತರಾಜ್ಯ
ಭರ ನಿರೂಪಿತ ಮಹಾಮಾತ್ಯಪದವೀ
ವಿರಾಜಮಾನಮಾನೋನ್ನತಪ್ರಭು ಮಂತ್ರೋತ್ಸಾಹ
ಸಕ್ತಿತ್ರಯ ಸಂ ವಿಬುಧ ಪ್ರಸನ್ನ.... ಸು ಗಣ್ಡ
ಸುಜನ ಮೀರ್ತ್ತಾಣ್ಡ ಸಿವಪಾದಪಂಕಜಭ್ರಮರರಪ್ಪ
ಶ್ರೀಮತ್ಸುಂಕವೆರ್ಗ್ಗಡೆ ಲೋಕಮಾಣಿಕಸೆಟ್ಟಿಯರ್"

ಎಂದು ಶಾಸನ ಕವಿಯ ಕೌಶಲಕ್ಕೆ ಉದಾಹರಣೆಯಾಗಿದೆ.

**ಬರ್ಮದೇವ (ಕ್ರಿ.ಶ.೧೦೬೧)**

ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಹಿರೇಮಾಗಳಗೇರಿ ಗ್ರಾಮದ ೧೯ ಸಾಲುಗಳ ಶಾಸನವು[೬೧] ಬಹಳ ನಷ್ಟವಾಗಿವೆ. ಈ ಶಾಸನವನ್ನು 'ಬರ್ಮದೇವ' ಎಂಬುವನು ಬರೆದಿದ್ದಾನೆ.

"ಶ್ರೀಮತ್ರೈಳೋಕ್ಯಮಲ್ಲದೇವರಲ್ಲಿ ಪರಮೇಶ್ವರದತ್ತಿಯಾಗಿ ಪಡೆದು
ಸಖವರ್ಷ.. ಕೊಟ್ಟರೀ ಧರ್ಮವನಾವನೋರ್ವ್ವಂ ಪ್ರತಿಪಾಳಿಪಿದಂ
ವಾರಣಾಸಿ ಪ್ರಯಾಗೆ ಕುರುಕ್ಷೇತ್ರಮೆಂಬೀ ಪುಣ್ಯತೀರ್ಥಂಗಳೊಳ್
ಸಾವಿರ ಕವಿಲೆಯಂ ಕೋಡುಮಂ ಕೊಳಗುಮಂ ಪೊನ್ನಲು ಕಟ್ಟಿಸಿ
ದಾನಂಗೆ.. ಫಲಮಕ್ಕುವಿದನಳಿದನಾ ಕವಿಲೆಯಂ ತಪೋಧನರುಮಾ
ತೀರ್ತ್ಥದಲ್ಲಳಿದ ಮಹಾಪಾತಕನಕ್ಕು । ಬಹುಭಿರ್ವ್ವಸುಧಾ ದತ್ತಾ
ರಾಜಸ್ಸಗರಾದಿಭಿಃ । ಯಸ್ಯ ಯಸ್ಯ ಯದಾ ಭೂಮಿಸ್ತಸ್ಯ ತಸ್ಯ
ತದಾ ಫಲಂ । ಅಹಿಪತಿಂಕಣಂಗೆ ಕಲಿದೇವಸ್ವಯಂಭುಗೆ .. ಕೊಟ್ಟನಾಗ್ರಹಾ ॥

ಎಂದು ವಿವರವಾಗಿ ಬರೆದಿದ್ದಾನೆ. ಶಾಸನದ ಕೊನೆಗೆ ಕೇಶವದಣ್ಡನಾಯಕ ಶ್ರೀ ಕವಿಮುಖದರ್ಪ್ಪಣಂ ಬರ್ಮ್ಮದೇವಂ ಬರೆದಂ ॥ ಎಂದಿದೆ.

**ಕರುವರ ಬರ್ಮ್ಮ (ಕ್ರಿ.ಶ.೧೦೬೧)**

ಕೊಪ್ಪಳ ಜಿಲ್ಲೆಯ, ಕೊಪ್ಪಳ ತಾಲೂಕಿನ, ಅಳವಂಡಿ ಗ್ರಾಮದ ಶಾಸನ[೬೨]ವನ್ನು 'ಕರುವರಬರ್ಮ್ಮ' ಬರೆಸಿದ ಶಾಸನದಲ್ಲಿ ತ್ರೈಲೋಕ್ಯಮಲ್ಲದೇವನು ಕಲ್ಯಾಣದಿಂದ ಆಳುತ್ತಿದ್ದಾಗ ಅಳವಿಂದಿಯ ನಾನೂರು ಮಹಾಜನರ ಸನ್ನಿಧಿಯಲ್ಲಿ ಕರುವಗುಲ್ಲಿಮಯ್ಯನು ಊರ ಪಶ್ಚಿಮಕ್ಕೆ ತೋಟವನ್ನು ಪೂರ್ವಕ್ಕೆ ಬಾವಿ, ಕಲ್ಲದೇಗುಲ ಸತ್ರ, ಸತ್ರದ ಮನೆ ಹಾಗೂ ಊರ ನಡುವೆ ಶ್ರೀ

ಬಾಗಿಲನ್ನು ಮಾಡಿಸುತ್ತಾನೆ. ಈ ರಚನೆಗಳಿಗೆ ಗುಲ್ಲಿಮಯ್ಯನ ಮಗ ಬರ್ಮಯ್ಯ ವಸತಿ ಸತ್ರಕ್ಕೆ ೧೮ ಮತ್ತರು ದೇವರಿಗೆ ಐದು ಮತ್ತರು ಮಠಕ್ಕೆ ಎರೆಮತ್ತರು ಐದು ಹೀಗೆ ದಾನಗಳನ್ನು ನೀಡಿರುತ್ತಾನೆ. ಈ ಶಾಸನವನ್ನು ಕರುವರ ಬರ್ಮ್ಮ' ಬರೆದ ಶಾಸನದ ಮುಂದಿನ ಭಾಗದಲ್ಲಿ ಕರುವ ಗುಲ್ಲಿಮಯ್ಯನು ಕನ್ಯಾದಾನ ಕವಿಲೆದಾನ, ಪಾದರಕ್ಷೆ ದಾನಗಳನ್ನು ಮಾಡಿ, ಅನೇಕ ತೀರ್ಥಗಳಲ್ಲಿ ಸ್ನಾನಮಾಡಿ ದಾನ ಧರ್ಮಗಳನ್ನು ಮಾಡಿ ಮಹಾಪುರುಷ ಮೋಕ್ಷವನ್ನು ಪಡೆಯುತ್ತಾನೆ. ಕರುವರ ಹೋಚಿಮಯ್ಯನ ಮಗ ಮಾಕಿಮಯ್ಯನ ಅಳವಿಂಡಿಯ ಮಹಾಜನರಿಗೆ ಪಾದಪೂಜೆ ಮಾಡಿ ಭೂದಾನ ನೀಡುತ್ತಾನೆ. ಈತನ ಶಾಸನ ಕೌಶಲಕ್ಕೆ ಉದಾಹರಣೆ.

**ಕರುವ ಬರ್ಮ್ಮಯ್ಯ ನಾಲ್ಪೂರ್ವ್ವರ ದಾಸಿ**
**ಪರನಾರಿ ಪುತ್ರ ಗೋತ್ರ ಪವಿತ್ರ ಸಿವನದಾಸಿ**
**ಸುಪುತ್ರಂ ಕುಳದೀಪಕನೆನಿಸಿ ನೆಗಟ್ದಂ"**
**ಇಂತೀ ಧರ್ಮಮಂ ರಕ್ಷಿಸಿದಾತಂಗೆ ಪನ್ನಿರ್ಚ್ಛಾಸಿರ**
**ಕವಿಲೆಯಂ ಕೋಡುಂ ಕೊಳುಗುಮ ಪೊನ್ನೊಳ್ ಕಟ್ಟಿಸಿ**
**ಕುರುಕ್ಷೇತ್ರದೊಳ್ ದಾನಂಗೆಯ್ದ ಫಳಂ ಈ ಧರ್ಮಮನಳಿದಾತಂ**
**ಬಾಣರಾಸಿಯೊಳ್ಕೊಟಿ ತಪೋಧನರ ನಳಿದ ಪಂಚಮಹಾಪಾತಕ್ಕಂ ।**

ಶಾಸನದ ಕೊನೆಯಲ್ಲಿ ಕರುವ ಗುಲುಗನಣುಗಿರ ಪುತ್ರಂ ನಿರುತಂ ಕರುವರ ಬರ್ಮ್ಮ ಬರೆಯಿಸಿದಂ ಬರೆದ ಮಲ್ಲನೀ ಶಾಸನಮಂ ॥ ಎಂದು ಹೇಳಿದೆ.

**ಬಸವಣಯ್ಯ (ಕ್ರಿ.ಶ.೧೦೬೨)**

ಅವಿಭಜಿತ ಧಾರವಾಡ ಜಿಲ್ಲೆ, ಇಂದಿನ ಗದಗ ಜಿಲ್ಲೆಯ ಮುಳಗುಂದ ಗ್ರಾಮದ[೪೩] ನಗರೇಶ್ವರ ದೇವಾಲಯದಲ್ಲಿರುವ ಶಾಸನವನ್ನು ಮನ್ನೆಯರ ಬಸವಣ್ಣಯ್ಯ ರಚಿಸಿದನೆಂದು ತಿಳಿದುಬರುತ್ತದೆ. ಕಲ್ಯಾಣ ಚಾಲುಕ್ಯರ ಒಂದನೇ ಸೋಮೇಶ್ವರನ ಕಾಲಘಟ್ಟಕ್ಕೆ ಸೇರಿದ ಈ ಶಾಸನದ ಕಾಲ ಕ್ರಿ.ಶ.೧೦೬೨ ಈ ಶಾಸನದಲ್ಲಿ ಬಸವಣ್ಣಯ್ಯ ಕವಿಯು ತನ್ನನ್ನು 'ಸಕಲ ವಿದ್ಯಾನಿಲಯ'ವೆಂದು ಬಣ್ಣಿಸಿಕೊಂಡಿದ್ದಾನೆ. 'ಮನುಮುನಿಚರಿತ್ರ'ನೆಂದು ಗೌರವಿಸಲ್ಪಟ್ಟು ತಮಗೆ ವಂಶಪಾರಂಪರ್ಯವಾಗಿ ಬಂದಿದ್ದ ಮುಳಗುಂದದ ಹನ್ನೆರಡಕ್ಕೆ ಮನ್ನೆಯನಾಗಿ ಆಳುತ್ತಿದ್ದನೆಂದು ತಿಳಿದುಬರುತ್ತದೆ.

ಶಾಸನದ ಕೊನೆಯ ಕಂದಪದ್ಯವೊಂದು ಬಸವಣಯ್ಯನ ಕುರಿತು ಹೀಗೆ ಹೇಳಿದೆ:

**ಅನುಪಮತರಾಕ್ಷರಂ ಬುಧ**
**ಜನಮಂ ಜೀಯೆನಿಸೆ ಸಕಳವಿದ್ಯಾನಿಳಯಂ**
**ಮನುಮುನಿ ಚರಿತ್ರನಿಶಾ**
**ಸನಮಂ ಮನ್ನೆಯರ ಬಸವಣಯ್ಯಂ ಬರೆದಂ"**

'ಮನ್ನೆಯರ ಬಸವಣಯ್ಯ ಎಂದು ಮೆರೆಯುತ್ತಿದ್ದ ಮುಳುಗುಂದದ ಭಾಗದಲ್ಲಿ ಶ್ರೀಮನ್ಮಹಾ ಸಾಮಂತ ಆಯ್ಚರಸರು ನಿರಾಬಾಧೆಯಿಂದ ಆಳುತ್ತಿದ್ದುದರಿಂದಲೂ ಅದೇ ವಂಶಕ್ಕೆ ಸೇರಿದವನಾದ ಈ ಕವಿಯೂ ಅಧಿಕಾರ ನಡೆಸಿರಬಹುದು[೪೪] ಆದರೆ ಬಸವಣ್ಣಯ್ಯನು ಆಯ್ಚರಸನ ವಂಶಕ್ಕೆ ಸೇರಿದವನೆಂಬುದಕ್ಕೆ ಯಾವ ಆಧಾರಗಳಿಲ್ಲ.

ಮುಳಗುಂದದ ಒಡೆಯನಾದ ಭೀಮರಸನು ಪಂಚಮಠಾಧೀಶರು ಮುಂತಾದವರ ಸಮ್ಮುಖದಲ್ಲಿ ದಾನಕೊಟ್ಟ ವಿವರಗಳುಳ್ಳ ಶಾಸನವನ್ನು ಬಸವಣ್ಣಯ್ಯ ಬರೆದಿದ್ದಾನೆ. ಈ ದಾನವನ್ನು ಸ್ವೀಕರಿಸಿದವರು ಮಹಾಮುನಿಯಾದ ಧ್ರುವೇಶ್ವರಪಂಡಿತ ಶಾಸನದಲ್ಲಿ ಧ್ರುವೇಶ್ವರ ಪಂಡಿತರನ್ನು ವರ್ಣಿಸುವ ಭಾಗ ಕಾವ್ಯಮಯವಾಗಿದೆ.

**ಮಲ್ಲಿನಾಥ (ಕ್ರಿ.ಶ.೧೦೬೨):**

ಶಿವಮೊಗ್ಗ ಜಿಲ್ಲೆಯ, ಹೊಸನಗರ ತಾಲೂಕಿನ, ಹುಂಚದಲ್ಲಿ ಸೂಳೆಯ ಬಸದಿಯ ಎದುರಿನ ಮಾನಸ್ತಂಭದ ಮೇಲಿನ ಶಾಸನ ಹಾಗೂ ಅದೇ ಬಸದಿಯ ಎದುರು ನಿಂತಿರುವ ಶಿಲಾಶಾಸನಗಳನ್ನು[೪೫] ಈತ ಬರೆದನೆಂದು ತಿಳಿದುಬರುವುದು. ಕವಿ ತನ್ನ ಬಗ್ಗೆ ಹೀಗೆ ಹೇಳಿಕೊಂಡಿದ್ದಾನೆ.

**ಸುಜನಜನಕುಮುದಚಂದ್ರನ**
**ಸುಜನಜನಾನನ ವಿಲೋಕಮಣಿಮುಕುರನನಾ**
**ಸುಜನಜನವನಜಹಂಸನ**
**ಸುಜನಜನಂ ಪೊಗಟೆ ಮಲ್ಲಿನಾಥ ನೆಗಟ್ದಂ ॥**

ಪಣ್ಡಸ್ವಾಮಿ ನೊಕ್ಕಯ್ಯಸೆಟ್ಟಿ ಈತನ ತಂದೆ, ದಿವಾಕರಣಂದಿಯ ಶಿಷ್ಯನಾದ ಸಕಳ ಚಂದ್ರಮುನಿನಾಥ ಈತನ ಗುರು.ಈ ಶಾಸನಗಳೊಂದರಲ್ಲಿ ಕಾಲ ವಿವರ ದೊರೆಯುತ್ತದೆ. ಕ್ರಿ.ಶ.೧೦೬೨ ಇದರ ಕಾಲವಾಗಿದೆ.

ಈ ಶಾಸನದಲ್ಲಿ ಕಲ್ಯಾಣ ಚಾಲುಕ್ಯರಸ ತ್ರೈಲೋಕ್ಯಮಲ್ಲನ ಆಳ್ವಿಕೆಯ ಉಲ್ಲೇಖವಿದೆ. ಚಾಲುಕ್ಯರ ಸಾಮಂತರಾಗಿ ಶಾಂತರರು ಹೊಂಬುಚದಿಂದ ಶಾಂತಳಿಗೆ ಸಾವಿರ ಪ್ರದೇಶವನ್ನಾಳುತ್ತಿದ್ದರು. ವೀರಶಾಂತರದೇವನು ಆಳುತ್ತಿದ್ದಾಗ, ಪಟ್ಟಣಸ್ವಾಮಿ ನೊಕ್ಕಯ್ಯಸೆಟ್ಟಿ ಅನೇಕ ಧರ್ಮಕಾರ್ಯ ಮಾಡಿದುದನ್ನು ಇವೆರಡು ಶಾಸನಗಳಲ್ಲಿ ಹೇಳಿದೆ. ಅಲ್ಲದೆ, ಒಂದು ಶಾಸನ ವೀರಶಾಂತದೇವನ ಮಗ ತೈಲಪದೇವಭುಜಬಳ ಶಾಂತರನೆಂದು ಪಟ್ಟ ಕಟ್ಟಿಸಿಕೊಂಡು ತೀರ್ಥದ ಬಸದಿಗೆ ಬಿಜಾನಕ ಬಯಲನ್ನು ದಾನವಾಗಿತ್ತ ಸಂಗತಿಯನ್ನು ನಿರೂಪಿಸುತ್ತದೆ.

ಎರಡನೆಯ ಶಾಸನದಿಂದ ನೊಕ್ಕ ಪಟ್ಟಣಸ್ವಾಮಿ ಜಿನಾಲಯವನ್ನು ಕಟ್ಟಿಸಿ, ಶಾಂತರ ಅರಸನಿಂದ ಮೂಲಕೆರೆ ಎಂಬ ಗ್ರಾಮವನ್ನು ಪಡೆದು ದಾನವಿತ್ತ ವಿಷಯ ತಿಳಿದುಬರುತ್ತದೆ. ಹಾಗೆಯೇ ತನ್ನ ಸಹದರ್ಮಿ ಸಕಲಚಂದ್ರ ಪಂಡಿತನಿಗೆ ಕುಕ್ಕುಡವಳ್ಳಿ ಎಂಬ ಗ್ರಾಮವನ್ನಿತ್ತ ವಿಚಾರ ತಿಳಿಯುತ್ತದೆ. ಶಾಸನಗಳಿಂದ ಈ ಬಸದಿಯನ್ನು 'ತೀರ್ಥದ ಬಸದಿ' ಅಥವಾ 'ಪಟ್ಟಣಸ್ವಾಮಿ ಜಿನಾಲಯ'ವೆಂದು ಕರೆಯಲಾಗುತ್ತಿತ್ತು.

ಶ್ಲೋಕ ಕಂದ, ಗೀತೆ, ಮಣಿಭೂಷಣ ಅಥವಾ ಮಣಿವಿಭೂಷಣ ಅಥವಾ ಪಿಂಗಳ ಹೇಳುವ ಉತ್ಸವ ಪಿರಿಯಕ್ಕರ ಸ್ರಗ್ಧರೆ, ಮಹಾಸ್ರಗ್ಧರೆ, ಉತ್ಪಲಮಾಲೆ, ಚಂಪಕಮಾಲೆ, ಮಲ್ಲಿಕಾಮಾಲೆ, ಮತ್ತೇಭವಿಕ್ರೀಡಿತ ಹಾಗೂ ಮತ್ತು ಕೋಕಿಲ ಮುಂತಾದ ವೃತ್ತಗಳನ್ನು ಕವಿ ಮಲ್ಲಿನಾಥ ಈ ಶಾಸನಗಳ ರಚನೆಯಲ್ಲಿ ಬಳಸಿದ್ದಾನೆ. ಕವಿಯ ಶಾಸನ ಕಾವ್ಯಶೈಲಿಗೆ ಉದಾಹರಣೆಗಳು ಇಂತಿದೆ:

'ತತ್ವಾರ್ಥಸೂತ್ರ'ಕ್ಕೆ ಕನ್ನಡ ವೃತ್ತಿಯನ್ನು ಬರೆದ ದಿವಾಕರಣಂದಿಸೂರಿಯ ವರ್ಣನೆ:

**ಚಾರುಚರಿತ್ರರೀ ದೊರೆಯರಾರೆನಿಪೊಳ್ಪಿನ ಚಂದ್ರಕೀರ್ತಿಪ್ರಭ**
**ಟ್ಟಾರಕರಗ್ರಶಿಷ್ಯರಘಿಹಾರಿಗಳಾರ್ಹತತತ್ತ್ವವಸ್ತುವಿ**
**ಸ್ತಾರಕಂಗಜಾರಿಗಳಶೇಷ ವಿಶೇಷ ಗುಣಾವಳೀ ಮನೋ**
**ಹಾರಿಗಳೆಂಬಿನಂ ನೆಗಟ್ದರಲ್ತೆ ದಿವಾಕರಣಂದಿಸೂರಿಗಳ್ ॥**

**ಪಟ್ಟಣಸ್ವಾಮಿ ನೊಕ್ಕನ ಪ್ರಶಂಸೆ:**

**ಪುದಿದ ತಮಸ್ತಮಃಪಟಲವೊಂದಿದ ಚಿಂತೆ ತಗುಳ್ದು ತಳ್ತು ಪ**
**ತ್ತಿದ ರುಜೆಪೆರ್ಚಿಸಾರ್ಚಿದ ದರಿದ್ರತೆ ಬಟ್ಟೆಯೊಳಾದಿ ಸೇದೆ ಪಿಂ**
**ಗಿದಪುದು ಕಂಡ ಕಾಣ್ಕೆಯೊಳೆ ತಪ್ಪದು ಪಟ್ಟಣಸ್ವಾಮಿ ನೊಕ್ಕನಿ**
**ಲ್ಲದೊಡೆ ಬಟಲ್ದು ಬಂದ ಬುಧಮಂಡಳಗೀ ಮಲೆ ಶೂನ್ಯಮಾಗದೇ ॥**

**ಗದ್ಯದಲ್ಲಿ ನೊಕ್ಕನ ವರ್ಣನೆ:**

**ಸಮ್ಯಕ್ತ್ವವಾರಾಸಿಯುಮೆನಿಸಿದ ಪಟ್ಟಣಸ್ವಾಮಿ ನೊಕ್ಕಯ್ಯಂ ಮಾರುಹದೊಳು**
**ದೇವರವಲ್ಲಭರನೆಱಗಿಸಿ ರತ್ನಂಗಳಂ ಖಚಿಯಿಸಿ ಪೊನ್ನಬೆಳ್ಳಿಯ ಪವಳದ**
**ಮಹಾಮಣಿಯ ಪಂಚಲೋಹದೊಳಂ ಪ್ರತಿಮೆಗಳಂ ಮಾಡಿಸಿದಂ**

ಎಂದು ಮುಂತಾಗಿ ಗದ್ಯದಲ್ಲಿಯೂ ನೊಕ್ಕನ ಧರ್ಮಕಾರ್ಯಗಳನ್ನು ವಿವರಿಸಿದೆ.

**ರಾಜವಲ್ಲಭ (ಕ್ರಿ.ಶ.೧೦೬೭)**

ಧಾರವಾಡ ಜಿಲ್ಲೆಯ, ಶಿಗ್ಗಾವಿ ತಾಲೂಕಿನ, ಹೊಟ್ಟೂರ ಗ್ರಾಮದ ಕೆರೆಯ ಬಳಿ ಇರುವ ಶಾಸನವನ್ನು[೪೬] ರಾಜವಲ್ಲಭ ಕವಿಯು ರಚಿಸಿದ್ದಾನೆ. ಕಲ್ಯಾಣ ಚಾಲುಕ್ಯರ ೧ನೇ ಸೋಮೇಶ್ವರನ ಕಾಲದ ಈ ಶಾಸನವು ಕ್ರಿ.ಶ.೧೦೬೭ ರಲ್ಲಿ ರಚನೆಯಾಗಿದೆ. ಈ ಶಾಸನದಲ್ಲಿ ರಾಜವಲ್ಲಭನನ್ನು 'ಸ್ಫುರಿತ ವಚೋವಿಭಾಸಿ ಚಟುವಾಣಿಯ ಸತ್ಕವಿ ರಾಜವಲ್ಲಭ' ಎಂದು ಕವಿ ತನ್ನನ್ನು ವರ್ಣಿಸಿಕೊಂಡಿದ್ದಾನೆ.

ರಾಜವಲ್ಲಭ ಕವಿ ರಚಿಸಿರುವ ಈ ಕಾವ್ಯವನ್ನು 'ವಿವೇಕನಿಧಿ' ಎಂಬುವನು ವಿಸ್ತರಿಸಿ ರಚಿಸಿದನೆಂದು ಈ ಶಾಸನದಲ್ಲಿ ಹೇಳಿದೆ. ವಿವೇಕನಿಧಿ ಎಂಬುದು ರಾಜವಲ್ಲಭನ ಬಿರುದಾಗಿರಬಹುದು. 'ವಾಕ್ಪತಿ' ಎಂಬ ಬಿರುದುಳ್ಳ ಚಂದ್ರಭಟ್ಟ ಮತ್ತು ಬಡಭದ್ರದೇವರು ಅದನ್ನು ತಿದ್ದಿದರು ಎಂದು ಶಾಸನದಲ್ಲಿ ಹೇಳಿದೆ. ಈ ಶಾಸನ ರಚನೆಯಾಗಲು ಮೇಲಿನ ನಾಲ್ಕು ಜನರ ಪ್ರಭಾವವಿರುವುದನ್ನು ತಿಳಿಸುವ ಪದ್ಯ ಈ ರೀತಿಯಾಗಿದೆ.

**ಸ್ಫುರಿತವಚೋವಿಳಾಸಿ ಚಡುಟವಾಣಿಯ ಸತ್ಕವಿ ರಾಜವಲ್ಲಭಂ**
**ವಿರಚಿಸಿದಂ ವಿವೇಕ ನಿಧಿ ಪಟ್ಟಲ..೦ಗಿ ಯಿಂ**
**ಬರೆದನಿದಂ ಸವಿಸ್ತರಿಸಿ ತಿರ್ದಿದ ವಾಕ್ಪತಿ ಚಂದ್ರಭಟ್ಟರುಂ**
**ಗುರು ಬಲಭದ್ರದೇವರುವಿದೇಂ ತ್ರಿಜಗದ್ಗುರು ವಾಯ್ತೋಶಾಸನಂ"**

ಶಾಸನ ಕಲ್ಯಾಣಚಾಲುಕ್ಯ ಅರಸ ತ್ರೈಲೋಕ್ಯಮಲ್ಲ ಆಹವಮಲ್ಲ ೧ನೇ ಸೋಮೇಶ್ವರನ ಆಳ್ವಿಕೆಗೆ ಸೇರಿದುದಾಗಿದೆ. ಚಾಲುಕ್ಯ ಮಹಾಸಾಮಂತ ಜೋಯಿಯಸರಸರ 'ಆ ನಾಡೋಳ್ ಅಖಿಳ ಘಟಿಕಾಸ್ಥಾನ'ವೆನಿಸಿದ ಪೊಟ್ಟಿಯೂರನ್ನು ಕುಮಾರ ವೃತ್ತಿಯಾಗಿ ಆಳುತ್ತಿದ್ದ. ಕದಂಬ ಮಹಾಮಂಡಳೇಶ್ವರನಾದ ತೋಯಿಮದೇವ ಬನವಾಸಿ ಪನ್ನಿರ್ಚ್ಛಾಸಿರ ಹಾಗೂ ಪಾನುಂಗಲ್ಲಯ್ನೂರು ಪ್ರದೇಶಗಳನ್ನಾಳುತ್ತಿದ್ದ ಈ ಕಾಲದಲ್ಲಿ, ಪೊಟ್ಟಿಯೂರಿನ ಗೋಡುವರ ಮಾರಗಾವುಂಡನ ಮಗ ಚಾಲುಕ್ಯ ಗಂಗವೆರ್ಮಾಡಿ ಕೇಶವ ಅಥವಾ ಕೇಶಿರಾಜ ಗಾವುಂಡ ಕೇಶವೇಶ್ವರ ಎಂಬ ಹೆಸರಿನಲ್ಲಿ ಶಿವಾಲಯವೊಂದನ್ನು ಕಟ್ಟಿಸಿದ ಈ ದೇವಾಲಯಕ್ಕೆ ಜೋಯಿಯರಸ, ತೋಯಿಮದೇವ ಹಾಗೂ ಮೈಳಲದೇವಿಯರು ಕೆಲವು ದತ್ತಿಗಳನ್ನು ನೀಡಿದರು. ಈ ದತ್ತಿಗಳಿಗೆ ಇನ್ನೊಂದು ಸೇರ್ಪಡೆಯಾಗಿ ತೋಯಿಮದೇವನ ತಾಯಿ ಅಕ್ಕಾದೇವಿಯು ಮಠದ ವಿದ್ಯಾದಾನದ ಸಲುವಾಗಿ ತನಗೆ ನಡೆದುಬರುತ್ತಿದ್ದ 'ಅಂದಿಗರ್ಚುಕಾಣಿಕೆ'ಯ ಎರಡು ಗದ್ಯಾಣದ ತೆರೆಯನ್ನು 'ತಪೋನಿಯನು ಜಪ

ಸಮಾಧೀಶೀಲಸಂಪನ್ನೆಯರಪ್ಪ ತಪಸ್ವಿ' ಗಂಗಿಕಬ್ಬೆಗೆ ಕಾಲ್ತೊಳೆದು ಕೊಟ್ಟಳೆಂಬುದನ್ನು ಶಾಸನ ತಿಳಿಸುತ್ತದೆ.

ಕವಿಯು ಬಳಸಿರುವ ಪದ್ಯಗಳೆಂದರೆ ಕಂದ, ಮತ್ತೇಭವಿಕ್ರೀಡಿತ, ಮಹಾಸ್ರಗ್ಧರೆ, ಶಾಲಿನಿ, ಅನುಷ್ಟುಪ್ ಹಾಗೂ ಚಂಪಕಮಾಲೆ, ಕವಿಯ ಪದ್ಯ ಹಾಗೂ ಗದ್ಯ ಶೈಲಿಗೆ ಈ ಕೆಳಕಂಡ ಉದಾಹರಣೆಗಳನ್ನು ಗಮನಿಸಬಹುದಾಗಿದೆ.

**ಮಾರಗಾವುಂಡನ ವರ್ಣನೆ:**

**ಕುಡುವವರ್ವ್ವೆಡಿದೊಡರ್ತ್ಥಿಗರ್ತ್ಥಚಯಮಂ ಶ್ರೀಮಂತರುಂತೇನುಮಂ**
**ಕುಡರೀಲೋಕದೊಳೊನ್ದಪೂರ್ವವೆನಿಸಲ್ಕಾಲಿಲ್ಲದರ್ವೆಡಿ ಬಂದಡೆ ಕಾಲಂ**
**ನಿಜಶಕ್ತಿಯಿಂ ಪಲರ್ಗೆಗೊಟ್ಟಂ ಮಾರಗಾವುಣ್ಡನೆಂದಪೆ ತ್ತತ್ತ್ವದ**
**ತತ್ತ್ವದುಂನತಿಯನಂತಿತುಂತೆನಲ್ಬರ್ಕುಮೆ ॥**

**ಕೇಶಿಗಾವುಂಡನ ಪ್ರಶಂಸೆ:**

**ಉದಕಸ್ವರ್ಣಚಯಾನ್ನದಾನಗುಣದಿಂ ಗೋದಾನದಿಂ ಭೂಮಿದಾ**
**ನದಿನುಕ್ಷಬ್ರಜದಾನದಿಂ ವಿವಿಧ ವಿದ್ಯಾದಾನದಿಂ ನಿತ್ಯದಾ**
**ನದಿನುದ್ಯತ್ತಿಳದಾನದಿಂ ನಿಖಿಳ ಕನ್ಯಾದಾನದಿಂ ತುಷ್ಟಿಮಾ**
**ಡಿದನುತ್ಕೃಷ್ಟ ಜನಕ್ಕೆ ಕೇಶವನಿದೇಂ ಸಚ್ಚಿತ್ತಸಂಪನ್ನನೋ ॥**

ಕವಿಯ ಗದ್ಯಶೈಲಿಗೆ ಒಂದು ಉದಾಹರಣೆ:

**ಇನ್ತು ಪೊಟ್ಟಿಯೂರ ಪೆರ್ಮಾಡಿ ಕೇಸಿಗಾವುಣ್ಡನುಂ ಮೂವದಿಂಬರುಂ**
**ಸುಖದಿನಿರೆ.. ಮಹಾಸಾಮನ್ತ ಜೊಯಿಯರಸರುಂ ಮಹಾಮಣ್ಡಲೇಶ್ವರಂ**
**ತೋಯಿಮದೇವನುಂ ಮೈಲಲದೇವಿಯರುವಿಟ್ಟು ಪೊಟ್ಟಿಯೂರ ಪೆರ್ಮಾಡಿ**
**ಕೇಸಿಗಾವುಣ್ಡನು ಮಾಡಿಸಿದ ಕೆಱೆಯೇರಿಯ ಮೇಗಣ ಕೇಶವೇಶ್ವರದೇವರ್ಗೆ**
**ಬಿಟ್ಟ ಧರ್ಮವೆನ್ತೆಂದಡೆ..**

ಎಂದು ಮುಂದುವರೆದಿದೆ.

**ನಾಗಚಂದ್ರ (ಕ್ರಿ.ಶ.೧೦೬೮)**

ಆಂಧ್ರಪ್ರದೇಶದ ಕರ್ನೂಲ ಜಿಲ್ಲೆಯ, ಕರ್ನೂಲ ತಾಲೂಕಿನ, ಪಂಚಲಿಂಗಾಲ ಗ್ರಾಮದ ಶಾಸನ[೪೭]ವನ್ನು ನಾಗಚಂದ್ರ ಕವೀಂದ್ರ ಎಂಬುವನು 'ಅಭಿನವ ಪಂಪ'ನೆಂದು ಪ್ರಸಿದ್ಧನಾದ 'ರಾಮಚಂದ್ರಚರಿತ ಪುರಾಣ'ದ ಕರ್ತೃವೇ ಆಗಿರಬಹುದು. ಈ ಶಾಸನದಲ್ಲಿ ಕಲ್ಯಾಣಪುರದ ನೆಲೆವೀಡಿನಿಂದ ಆಳುತ್ತಿದ್ದ ಚಾಲುಕ್ಯ ದೊರೆ ಭುವನೈಕ್ಯಮಲ್ಲ ಸೋಮೇಶ್ವರ–೨ನ ರಾಜ್ಯಭಾರವನ್ನು

ಹೇಳುತ್ತದೆ. ದೊರೆಯು ದಿಗ್ವಿಜಯಕ್ಕೆಂದು ಹೊರಟಿದ್ದಾಗ, ಕಂದೂರು ನಾಡಿನ ಕೃಷ್ಣವೇಣ್ಣಾನದಿಯ ಉತ್ತರದಿಕ್ಕಿನ ಅಪ್ಪಯಣವೀಡಿನ ರಾಮೇಶ್ವರತೀರ್ಥದಲ್ಲಿ ಸ್ನಾನ ಮಾಡಿ ಪಂಚಲಿಂಗದ ಮಹಾಸ್ಥಾನಾಧಿಪತಿ ಕಾಶ್ಮೀರ ಪಂಡಿತ ದೇವರ ಕೈಯಲ್ಲಿ ತುಂಗಭದ್ರಾನದಿಯ ದಕ್ಷಿಣದಡದ ನಳವಾಡಿನಾಡಿನ ಚೆರುವುಂಬಾಡು ಸಮೀಪದ ಗುಡಿಗೇರಿ ಗ್ರಾಮವನ್ನು ದೇವಾಲಯದ ಜೀರ್ಣೋದ್ಧಾರಕ್ಕಾಗಿ ದತ್ತಿ ಕೊಡುತ್ತಾನೆಂದು ಇದರಲ್ಲಿ ದಾಖಲಿಸಿದೆ. 'ವಿನಯ ಸತ್ಯಾಶ್ರಯದೇವ' ಎಂಬುವವನು ಈ ಹಿಂದೆಯೇ ಪಂಚಲಿಂಗದೇವರಿಗೆ ಕೊಟ್ಟಿದ್ದ ತಾಮ್ರಶಾಸನದಲ್ಲಿರುವಂತೆಯೇ ಮತ್ತೆ ದಾನವನ್ನು ಕೊಡಲಾಯಿತು ಎಂದೂ ಹೇಳಿದೆ.

> **ಪ್ರತ್ಯಕ್ಷರುದ್ರನೆನಿಸಿದ ಶ್ರೀಮತ್ಪಞ್ಚಲಿನ್ಗ ಮಹಾಸ್ಥಾನಾಧಿಪತಿ**
> **ಕಾಶ್ಮೀರಪಂಡಿತದೇವರಂ ಪಿರಿಯ ರಾಜಾದೇಸಮನಟ್ಟಿ**
> **ಬರಿಸಿ ಕ್ರಿಷ್ಣವೆನ್ನ ನದೀಹ್ರದಾ ದಿಬ್ಯತೀರ್ತ್ಥೋದಕಮ ತರಿಸಿ ಪಾದ**
> **ಪ್ರಕ್ಷಾಳನಂ ಗೆಯ್ದು ಮುನ್ನಂ ವಿನಯ ಸತ್ಯಾಶ್ರಯದೇವರಂ**
> **ಪಂಚಲಿಂಗದೇವಂಗೆ ಬಿಟ್ಟ ತಾಂಬ್ರಶಾಸನದ ತುಂಗಭದ್ರಾನದಿಯ**
> **ತೆಂಕದಡಿಯ ನಳವಾಡಿನಾಡೊಳಗಣಾಱುಂಬಾಡದೊಳಂ**
> **ಬಡಗದಡಿಯ ಯೆಡೆನಾಡೊಳಗಣಾಱುಂಬಾಳದೊಳವನ್ತು ಪನ್ನೆಸ್**
> **ರಡು ಬಾಡದ ಮೊದಲ ಪಂಚಲಿಂಗಗ್ರಾಮದ ತಳವ್ರಿತ್ತಿಯ**
> **ಸಾಸಿರದ ನಾಲ್ನೂಱುಮತ್ತರೊಳಗಣ ಕಾಲ್ವಳ್ಳಿಯ ಗುಡಿಗೇರಿಯಂ**
> **ಪಂಚಲಿಂಗದೇವರ ಗೋಪುರದೊಳಗಣ ದೇವಾಳಯಂಗಳ**
> **ಖಂಡಸ್ಫುಟಿತ ಜೀರ್ಣ್ನೋದ್ಧಾರಣ ದೇವಬೋಗಾನ್ನದಾನ ನಿಮಿತ್ತದಿಂ**
> **ಧಾರಾಪೂರ್ವಕಂಮ್ಮಾಡಿ ತ್ರಿಭೋಗ್ರೋಭ್ಯನ್ತರ ಸಿದ್ದಿಯಿನ್ದದರ ಚತುಸ್ಸಿಮೆನ್ದೊಳಗೆ**
> **ಪುಟ್ಟಿದ ನಿಧಿ ನಿಧಾನನಿಕ್ಷೆಪಂಗಳ್ಮೊದಲಾಗೆಲ್ಲಂ ದೇವರ್ತ್ಥಮಾಗಿ ಬಿಟ್ಟು"**

ಎಂದು ವಿವರವಾಗಿ ದಾಖಲಿಸಿದ್ದಾನೆ.

**ಕನ್ನಪ್ಪಯ್ಯ (ಕ್ರಿ.ಶ.೧೦೭೧)**

ಗದಗ ಜಿಲ್ಲೆಯ, ಸೊರಟೂರು[೪೮] ಗ್ರಾಮದ ಶಾಸನವನ್ನು ಕನ್ನಪ್ಪಯ್ಯ ಎಂಬುವನು ಕ್ರಿ.ಶ.೧೦೭೧ರಲ್ಲಿ ರಚಿಸಿದ್ದಾನೆ.

> **ಸರಸತರ ಮಾದುದೆಂದ**
> **ಕ್ಕರಿಗರ್ಬಣ್ಣಿಪಿನ ಮಿಾಶಿಲಾಶಾಸನಮಂ**
> **ಸ.. ..ಮುತ್ತಿನ**
> **ಸೆರಿಗೆಯನನು ಕರಿಸೆ ಕನ್ನಪಯ್ಯಂ ಬರೆದಂ**

ಅಕ್ಕರಿಗರು (ಪಂಡಿತರು) ಸರಸತರವಾದುದು ಎಂದು ಕೊಂಡಾಡುವಂತೆ ಈ ಶಾಸನವನ್ನು ಬರೆದಂ ಎಂದಿರುವುದು ಕಾವ್ಯದ ರಚನೆಯನ್ನು ಕುರಿತು ಮಾತೇ ನಿಸ್ಸಂದೇಹ,

ಅಲ್ಲದೆ ಈ ಪದ್ಯದ ೩ ನೇ ಪಾದದಲ್ಲಿ ನಷ್ಟವಾದ ಅಕ್ಷರಗಳು ಕನ್ನಪಯ್ಯನ ಕಾವ್ಯಕರ್ತೃತ್ವವನ್ನು ಬೆಂಬಲಿಸುವಂಥ ಮಾತುಗಳಿರಬೇಕು. ಕವಿಯ ಅಕ್ಷರಗಳು ಸರಿಗೆಯಂತ (ಮುತ್ತಿನ) ಅಂದವಾಗಿದ್ದುದರಿಂದ ಆತನೂ ಕಲ್ಲ ಮೇಲೆ ಬರೆದಿರಬಹುದು. ಅಂತೂ ಶಾಸನದ ಕಬ್ಬಿಗನೂ ಬರಹಗಾರನೂ ಒಬ್ಬನೇ ಕನ್ನಪಯ್ಯನೇ[೪೯]. ಇದರಲ್ಲಿ ಒಟ್ಟು ೪೦ ಸಾಲುಗಳಿದ್ದು ಆರಂಭದ ೨೬ ಸಾಲುಗಳು ಮಾತ್ರ ಚೆನ್ನಾಗಿದ್ದು ಉಳಿದ ಸಾಲುಗಳಲ್ಲಿ ಕೆಲವು ಭಾಗಗಳು ಅಳಿಸಿಹೋಗಿವೆ. ೧೩ ಪದ್ಯಗಳಲ್ಲಿ ೫ ಶ್ಲೋಕಗಳು ೨ ಕಂದಪದ್ಯಗಳು ಮತ್ತು ೬ ವೃತ್ತಗಳಿವೆ.

ಕಲ್ಯಾಣ ಚಾಲುಕ್ಯರ ಭುವನೈಕಮಲ್ಲ ಇಮ್ಮಡಿ ಸೋಮೇಶ್ವರನ ಸೇನಾಪತಿ ಬಲದೇವಯ್ಯನು ಜೈನದೇವಾಲಯಕ್ಕೆ ದಾನಕೊಟ್ಟಿದ್ದನ್ನು ಹಾಗೂ ಇದರೊಡನೆ ಎರಡು ಮನೆಯ ನಿವೇಶನವನ್ನು ದಾನ ನೀಡಿದ ಅಂಶಗಳನ್ನು ಪ್ರಕಟಿಸಿದೆ. ಆಹವಮಲ್ಲನ ಮಗನಾದ ಭುವನೈಕಮಲ್ಲದೇವನ ಸೇನಾಪತಿ 'ಹಿತೋಪದೇಶಧುರಂಧರಚನ್ದನಬಹಳಪರಿಮಳಾಮೋದಂ ಜಿನೇಂದ್ರ ಚರಣಾರ್ಚನ ವಿನೋದಂ ದಾನಹೀನನಾನಾಮನುಜಪರಿಪೋಷಣಂ' ಎನಿಸಿದ ಬಲದೇವಯ್ಯನೇ ಪ್ರಸ್ತುತ ಶಾಸನದಲ್ಲಿ ಉಕ್ತನಾದ ದಾತೃ.

ಆ ಕಾಲದಲ್ಲಿ ಚಿತ್ರಕೂಟದಲ್ಲಿ ಹೆಸರು ಗಳಿಸಿದ್ದ ಚನ್ದನಂದಿ ಸಿದ್ಧಾಂತ ಮುನಿಯ ಶಿಷ್ಯಸಂತತಿಯಲ್ಲಿ ಬಂದ ಹುಳಿಯಬ್ಬಾಜ್ಜಿಕೆಯರಿಗೆ ಬಲದೇವಯ್ಯನು ದಾನನೀಡಿದನೆಂದಿದೆ.

ದಂಡನಾಯಕ ಬಲದೇವಯ್ಯನ ಹಿರಿಮೆ:

**ಪರಮಜಿನಂ ತನಗಾಪ್ತಂ**
**ಗುರುಗಳು ನಯಸೇನದೇವರೂರ್ಜಿತ ಧರ್ಮಂ**
**ಪಿರಿದಪ್ಪ ಬಸನಮೆಂದೊಡೆ**
**ಧರೆಯೊಳು ಬಲದೇವನಂತು ನೊಂತರುಮೊಳರೇ ॥**

**ಚಿತ್ರಕೂಟ ಮಹತ್ವ:**

**ಇದು ಧರ್ಮಾಮೃತಸಿಂಧು ಸುಶ್ರುತಫಲತಾಸಂದೋಹಕಂದಂ ದಯಾ**
**ನದಿಗುತ್ಪತ್ತಿಯ ಬೆಟ್ಟು ತತ್ವದ ತವರ್ ಸಂಸಾರ ವಾರಾಸಿಗಿ**
**ಕ್ಕಿದ ಚೈತ್ರಂ ತೊಡವಾರ್ಹತಕ್ಕೆನೆ ಜನಂ ಭೂಭಾಗದೊಳ್ಪೆಂಪುವೆ**
**ತ್ತುದು ಸೂರಸ್ಥಗಣಂ ಪ್ರಸಿದ್ಧಮದಱೊಳ್ ಶ್ರೀಚಿತ್ರಕೂಟಾನ್ವಯಂ ॥**

## ರುದ್ರಭಟ್ಟ (ಕ್ರಿ.ಶ.೧೦೭೪)

ಅವಿಭಜಿತ ಧಾರವಾಡ ಜಿಲ್ಲೆಯ, ನರಗುಂದ ತಾಲೂಕಿನ, ನರಗುಂದ[೫೦] ಗ್ರಾಮದ ಶಾಸನವನ್ನು ಕೊನೆಯಲ್ಲಿ "ಚತುರ್ಮುಖ ರುದ್ರಭಟ್ಟರ ಕಾವ್ಯಂ" ಎಂಬ ಉಲ್ಲೇಖದಿಂದ ಶಾಸನವನ್ನು ರುದ್ರಭಟ್ಟಕವಿಯು ರಚಿಸಿದನೆಂದು ತಿಳಿದುಬರುವುದು. ಇವನ ಬಿರುದಿನ 'ಚತುರ್ಮುಖ' ಎಂಬುದರ ಹಿಂದೆ ಕಾವ್ಯ, ಕವಿತ್ವ, ಸಾಹಿತ್ಯ ಇತ್ಯಾದಿಗಳಲ್ಲಿ ಯಾವುದಾದರೊಂದು ಇರಬಹುದೆಂದು 'ಮೇವುಂಡಿಯವರು'[೫೧] ಅಭಿಪ್ರಾಯಪಡುತ್ತಾರೆ. ಆದರೆ 'ಚತುರ್ಮುಖ' ಎಂಬ ಬಿರುದಿರುವುದನ್ನು ನೋಡಿದರೆ ನಾಲ್ಕು ವಿದ್ಯೆಗಳಲ್ಲಿ ಪಾರಂಗತನಾಗಿದ್ದ ಎಂದು ತೋರುತ್ತದೆ. ಹಾಗೆಯೇ ಕಾಲ ಕೂಡಾ ಕ್ರಿ.ಶ. ೧೦೭೪ ಎಂದು ಅವರು ಕೊಟ್ಟಿದ್ದಾರೆ.

ಈ ಶಾಸನವು ಮೆಕ್ಕೆಗೇರಿಯ ಮಹಾಜನಗಳ ಸಮ್ಮುಖದಲ್ಲಿ ಅಜವರ್ಮಸೆಟ್ಟಿಯು ಬಸದಿ ಸತ್ರಗಳಿಗೆ ಕೊಟ್ಟ ಭೂದಾನವನ್ನು ತಿಳಿಸುತ್ತದೆ. ೪೪ ಸಾಲುಗಳುಳ್ಳ ಈ ಶಾಸನದ ಆರಂಭದ ೬ ಸಾಲುಗಳು ಮಾತ್ರ ಸ್ಪಷ್ಟವಾಗಿವೆ; ಉಳಿದ ಭಾಗ ಅಲ್ಲಲ್ಲಿ ಅಳಿಸಿಹೋಗಿವೆ.

'ಜಗನ್ನಾಥವಿಜಯ' ಎಂಬ ಕಾವ್ಯವನ್ನು ಬರೆದ ರುದ್ರಭಟ್ಟನಿಗೂ ಈ ಶಾಸನಕವಿಯಾದ ರುದ್ರಭಟ್ಟನಿಗೂ ಹೆಸರಿನ ಸಾಮ್ಯತೆ ಬಿಟ್ಟರೆ ಬೇರೆ ಯಾವ ಸಂಬಂಧವೂ ಇಲ್ಲ. ಇಬ್ಬರೂ ಭಿನ್ನರು. ಇಬ್ಬರ ಕಾಲವು ಬೇರೆ ಎಂಬುದು ಗಮನಾರ್ಹ. 'ಜಗನ್ನಾಥವಿಜಯ'ದ ಕರ್ತೃವಾದ ರುದ್ರಭಟ್ಟನ ಕಾಲ ಕ್ರಿ.ಶ.೧೨೦೦. ಆದರೆ ಈ ಶಾಸನ ಕವಿಯ ಕ್ರಿ.ಶ.೧೦೭೪ ಎಂಬುದನ್ನು ಗಮನಿಸಬಹುದು.

ಈತನ ಕಾವ್ಯ ರಚನಾ ಪ್ರೌಢಿಮೆಗೆ ಈ ಕೆಳಗಿನ ಪದ್ಯವನ್ನು ಗಮನಿಸಬಹುದು.

**ಪ್ರಕಟಿತ ಧರ್ಮನಿರ್ಮಳರುದಾರಗುಣರ್ವರ ವೀರವಿಕ್ರಮರ್**
**ಸುಕವಿಗಳುದ್ಘಚಾರುಚರಿತರ್ಮನಹಿ...ಸೇವಾಪವಿತ್ರರಾಯಾ**
**ಜ್ಞಿಕ್ಕರುಚಿತ ಪ್ರಸಂಗರಭಿಮಾನಿಗಳಪ್ಪ ವಿಶಿಷ್ಟದಾನಿಗಳ್**
**ಸಕಳಕಳಾಗಮಜ್ಞರ್ಗತಿ ಧರ್ಮರತರ್ನಱುಗುಂದದ ದಿಜರ್** ॥ ಎಂದಿದೆ.

## ಹರಿಯಣ್ಣ (ಕ್ರಿ.ಶ.೧೦೭೫)

ಶಿವಮೊಗ್ಗ ಜಿಲ್ಲೆಯ, ಸೊರಬ ತಾಲೂಕಿನ, ಕುಪ್ಪಟೂರು ಗ್ರಾಮದ ಜೈನಬಸದಿಯ ಶಾಸನವನ್ನು[೫೨] ಹರಿಯಣ್ಣ ಕವಿ ರಚಿಸಿದ್ದಾನೆ. ಹಾನಗಲ್ಲು ಕದಂಬರ ಅರಸನಾದ ಕೀರ್ತಿದೇವನ ಉಲ್ಲೇಖವಿರುವ ಈ ಶಾಶನದ ಕಾಲ ಕ್ರಿ.ಶ.೧೦೭೫. ಹರಿಯಣ್ಣನು ಒಬ್ಬ ಜೈನ ಕವಿಯಾಗಿದ್ದು ಉಭಯ ಭಾಷಾ ಪಂಡಿತನಾಗಿದ್ದನೆಂದು ಈ ಶಾಸನದಿಂದಲೇ ತಿಳಿಯುತ್ತದೆ.

ಅರಸನಾದ ಕೀರ್ತಿದೇವನ ಪಟ್ಟಮಹಾದೇವಿಯು ಕುಪ್ಪಟೂರಿನಲ್ಲಿ ಪಾರ್ಶ್ವನಾಥನ ಬಸದಿಯನ್ನು ನಿರ್ಮಿಸಿ ಎಡೆನಾಡಿಗೆ ಸೇರಿದ ಸಿಡ್ಡಣಿವಳ್ಳಿಯನ್ನು ತನ್ನ ಪತಿಯಿಂದ ಪಡೆದು, ಈ ದೇವಸ್ಥಾನದ ಪೂಜಾಕಾರ್ಯಗಳಿಗೆ ದತ್ತಿಬಿಟ್ಟಿದ್ದನ್ನು ಈ ಶಾಸನದಲ್ಲಿ ವರ್ಣಿಸಲಾಗಿದೆ. ಈ ದಾನವನ್ನು ಸ್ವೀಕರಿಸಿದವನು ಪದ್ಮಣಂದಿ ಸಿದ್ಧಾಂತಿ ಚಕ್ರವರ್ತಿ. ಕದಂಬ ವಂಶದ ಸ್ಥಾಪಕನಾದ ಮಯೂರವರ್ಮನ ಪ್ರಸ್ತಾಪವೂ ಶಾಸನದಲ್ಲಿ ಬಂದಿದೆ.

ಕವಿಯು ಗದ್ಯಪದ್ಯಮಯವಾದ ತನ್ನ ರಚನೆಯಲ್ಲಿ ಶ್ಲೋಕ, ಉತ್ಪಲಮಾಲೆ, ಮತ್ತೇಭವಿಕ್ರೀಡಿತ, ಕಂದ, ಸ್ರಗ್ಧರೆ, ಚಂಪಕಮಾಲೆ, ಶಾರ್ದೂಲವಿಕ್ರೀಡಿತ ಇಂದ್ರವಜ್ರ ಹಾಗೂ ಶಾಲಿನೀ ವೃತ್ತಗಳನ್ನು ಬಳಸಿದ್ದಾನೆ. ಸಂಸ್ಕೃತದಲ್ಲಿಯೂ ಇವನು ಪರಿಣತನಾಗಿದ್ದನೆಂದು ಕೆಲವು ಸಂಸ್ಕೃತ ಪದ್ಯಗಳ ರಚನೆಯಿಂದ ಸ್ಪಷ್ಟಪಡುತ್ತದೆ. ಕವಿಯಶೈಲಿಯ ಬಗ್ಗೆ ಒಂದೆರೆಡು ಉದಾಹರಣೆಗಳನ್ನು ಗಮನಿಸಬಹುದು.

ಬನವಾಸಿ ನಾಡಿನ ಕುಪ್ಪಟೂರಿನ ವರ್ಣನೆ:

**ಬಳೆದ ಸುಗಂಧಿಶಾಳಿವನದಿಂದೊಳಗೊಪ್ಪುವ ನಾಳಿಕೇರಕಾ**
**ದಳನವಪೂಗ ನಾಗಲತಿಕಾವನದಿಂ..ಳದಿಂ**
**ವಳಯಿತಮಾಗಿ ವಿಪ್ರಸುರಚಿತ್ರಾನಿಕೇತನ ಮಾಳಿಯಿಂದೆ ಕ**
**ಣ್ಗೊಳಿಪುದು ಕುಪ್ಪಟೂರ್ಸ್ಸಕಳವಿದ್ಯೆಗೆ ತಾನೆನೆ ಜನ್ಮಭೂತಳಂ ॥**

ದಾನವನ್ನು ಸ್ವೀಕರಿಸಿದ ಪದ್ಮನಂದಿಯ ವರ್ಣನೆ:

**ಶಾಂತರಸಂ ಪೊನಲ್ವರಿದು ಸಂಯಮವಲ್ಲಿ ಮಡಲ್ತು ಪರ್ಬಿತೋ**
**ರ್ಪಂತೆ ಚರಾಚರಬ್ರಜಮನಾತ್ಮವಚೋಮೃತದಿಂ ವಿನೇಯರ**
**ಸ್ವಾಂತರಜೋಮಳಂ ತೊಳೆದು ಪೋಯ್ತೆನೆ ಪೇೞ್ ಬುಧ ಪದ್ಮನನ್ದಿ ಸೈ**
**ದ್ಧಾಂತಿಕ ಚಕ್ರವರ್ತಿಯನದಾರ್ಪೊಗಳರ್ಗುಣಶೀಲ ಮೂರ್ತಿಯಂ ॥**

**ವೈಜನಾಥ (ಕ್ರಿ.ಶ.೧೦೭೫):**

ಅವಿಭಜಿತ ಬಿಜಾಪುರ ಜಿಲ್ಲೆ, (ಇಂದಿನ ಬಾಗಲಕೋಟೆ ಜಿಲ್ಲೆಯ) ಬೀಳಗಿ ತಾಲೂಕಿನ, ಎಸ್.ಕೆ. ಕೊಪ್ಪ[೫೩] ಗ್ರಾಮದ ದುರಗವ್ವನ ಗುಡಿಯ ಹಿಂಬಾಗದಲ್ಲಿ ದೊರೆವ ಶಾಸನದ ಕರ್ತೃ. ವೈಜನಾಥ. ಕಲ್ಯಾಣಚಾಲುಕ್ಯರ ೨ನೇ ಸೋಮೇಶ್ವರನನ್ನು ಉಲ್ಲೇಖಿಸುವ ಈ ಶಾಸನದ ಕಾಲ ಕ್ರಿ.ಶ.೧೦೭೫. 'ಕವಿವೈಜನಾಥಂ ಬರೆದಂ' ಎಂದು ಯಾವ ಬಿರುದು, ಸ್ವಪ್ರಶಂಶೆಯ ಯಾವ

ಮಾತುಗಳು ಇಲ್ಲದೆ ಕವಿಯು ನಿರಾಡಂಬರವಾಗಿ ತನ್ನ ಹೆಸರನ್ನು ಮಾತ್ರ ಜೋಡಿಸಿ ಜನಗಳು ಅವನನ್ನು ಕರೆಯುತ್ತಿದ್ದರು ಎಂದು ಇದರಿಂದ ದ್ವನಿತವಾಗುತ್ತದೆ.[೫೪]

೫೪ ಸಾಲುಗಳುಳ್ಳ ಗದ್ಯಪದ್ಯಾತ್ಮಕವಾದ ಈ ಶಾಸನದಲ್ಲಿ ಒಟ್ಟು ವೃತ್ತ ಕಂದಗಳ ಸಂಖ್ಯೆ ೧೨. ಈ ಶಾಸನದ ೫೧ನೇ ಸಾಲಿನಲ್ಲಿ 'ಕವಿವೈಜನಾಥಂ ಬರೆದಂ' ಎಂದಿದೆ. ಶಾಸನವನ್ನು ರಚಿಸಿದವನೂ, ಲಿಖಿಸಿದವನೂ ಒಬ್ಬನೇ ಆಗಿರಬೇಕೆಂಬ ಊಹೆಗೆ ಅವಕಾಶವಿದೆ. ಆರಂಭದ ಕೆಲವು ಸಾಲುಗಳು ನಷ್ಟವಾಗಿರುವ ಈ ಶಾಸನ, ದಂಡನಾಯಕ ನಿಂಬನಯ್ಯನ ಕೋರಿಕೆಯಂತೆ, ಕಾಳಾಮುಖ ಪಂಥದ ತ್ರಿಭುವನಶಕ್ತಿಪಂಡಿತದೇವನ ಶಿಷ್ಯನಾದ ತತ್ಪುರುಷ ಮುನೀಶ್ವರನಿಗೆ ಕಿಸುಕಾಡು ಎಪ್ಪತ್ತರ ಬಾದುಬ್ಬೆಯ ಪಾಯಿ ಎಂಬ ಗ್ರಾಮವನ್ನು, ಬಲ್ಲವರಸ ದಾನ ಮಾಡಿದ್ದನ್ನು ತಿಳಿಸುತ್ತದೆ. ಈ ದಾನ ವಿಕ್ರಮಪುರದ ಸ್ವಯಂಭು ನಗರೇಶ್ವರ ದೇವಸ್ಥಾನದ ಖರ್ಚುವೆಚ್ಚಗಳಿಗೂ ಅದರ ಮಠದಲ್ಲಿದ್ದ ವಿದ್ಯಾರ್ಥಿಗಳ ಹಾಗೂ ಮುನಿಗಳ ಆಹಾರದ ಸಲುವಾಗಿಯೂ ಬಿಟ್ಟದ್ದು.

**ನಿಂಬ ದಂಡಾಧಿಪತಿಯನ್ನೂ, ಸೋಮೇಶ್ವರನನ್ನೂ ವರ್ಣಿಸುವ ಎರಡು ವೃತ್ತಗಳು:**

**ಎನಿತಂ ಚಾಳುಕ್ಯಚಕ್ರೇಶ್ವರ ನಿಜವಿಜಗೀಷು ಪ್ರಭಾತೋಪಮಾಯ್ತ**
**ನ್ತನಿತರ್ಕಂ ಮಂತ್ರ ಸಂಪಾದನದ ಪದಕೆ ತಾಂ ಮಂತ್ರಿ ಯುದ್ಧಕ್ಕದೇವ**
**ಚ್ಚಿನ ದಂಡಾಧೀಶ್ವರಂ ತಾನೆನೆ ಚತುರುಪಧಾಶುದ್ಧಿಯಂ ತಾಳ್ದಿದಂ ನೂ**
**ತನ ಮುದ್ರಾರಾಕ್ಷಸಂ ನೂತನ ಕಮಳಭವಂ ನಿಂಬ ದಂಡಾಧಿನಾಥಂ ॥**

**ಧರೆಯಂ ತ್ರೈಳೋಖ್ಯಮಲ್ಲ ಕ್ಷಿತಿಪತಿ ಕುಡೆ ಕಯ್ಕೊಂಡು ಮತ್ತತ್ತ ರತ್ನಾ**
**ಕರಮದ್ಯದ್ವೀಪ ನಾನಾ ವಿಷಯತತಿಗೆ ತನ್ನಾಣೆ ತನ್ನಚ್ಚು ತನ್ನಿ**
**ಟ್ಟರಸರ್ತನ್ನೊಲೆ ತನ್ನುಂಡಿಗೆಯನೆ ವಿದಿತಾಜ್ಞಾನ್ವಿತಂ ಮಾಡಿದಂ ಬಾ**
**ಪ್ಪುರೆ ಪದ್ಮಾನಂದತೇಜಂ ನೃಗನಳಚರಿತಂ ಮೂರ್ತಿಮಾರ್ತಾಂಡದೇವಂ ॥**

**ಚಾಕರಾಜು (ಕ್ರಿ.ಶ.೧೦೭೬)**

ಆಂಧ್ರಪ್ರದೇಶದ ಮೆಹಬೂಬ್‌ನಗರ ಜಿಲ್ಲೆಯ, ಆಲಂಪುರ ತಾಲೂಕಿನ, ಆಲಂಪುರಗ್ರಾಮದ ಶಾಸನ[೫೫]ವನ್ನು ಎಂಬುವವನು ರಚಿಸಿದ್ದಾನೆ. ಈ ಶಾಸನವು ಚಾಲುಕ್ಯ ದೊರೆ ಭುವನೈಕಮಲ್ಲದೇವನ ಆಳ್ವಿಕೆಯನ್ನು ಹೇಳುತ್ತದೆ. ಶಾಸನದ ಕಾಲ ಕ್ರಿ.ಶ.೧೦೭೬ ಭುವನೈಕಮಲ್ಲನ ಮಹಾಮಾತ್ಯ ವಡ್ಡರಾವುಳ ದಂಡನಾಯಕ ನಾರಣಮಯ್ಯ ಎಂಬುವವನು ಅಲಂಪುರದ ಬ್ರಹ್ಮೇಶ್ವರದೇವರ ಸೇವೆಗೆ ನಾಲ್ಕು ನಾಡಿನ ವಡ್ಡರಾವುಳವನ್ನು ಪರಮೇಶ್ವರ ದತ್ತಿಯಾಗಿ ನೀಡುತ್ತಾನೆ. ವಡ್ಡರಾವುಳದ ವಿವರಗಳನ್ನು ನೋಡಿದರೆ ಅದು ಅನೇಕ ಮಾರಾಟ ವಸ್ತುಗಳ ಮೇಲೆ ವಿಧಿಸಿದ ಸುಂಕದಂತೆ ತೋರುವುದು.

ಶಾಸನಕವಿಯ ಶಾಸನ ಕೌಶಲಕ್ಕೆ ಉದಾಹರಣೆಗೆ ಈ ಕೆಳಗಿನ ಸಾಲುಗಳು ನಿದರ್ಶನವೆನಿಸಿವೆ.

**ಸ್ವಸ್ತಿ ಹತಂಪುರ ಪ್ರತೀತ ಮಹೋದಯ**
**ಸಕಳ ಭುವನೈಕನಾಥ ಶ್ರೀಬಹ್ಮೇಶ್ವರದೇವರು**
**ಸಮಸ್ತಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾ**
**ರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕಂ**
**ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ**
**ಶ್ರೀಮತು ಭುವನೈಕಮಲ್ಲದೇವ ವಿಜಯರಾಜ್ಯಮುತ್ತರೋತ್ತರಾಭಿವ್ರಿ**
**ದ್ಧಿ ಪ್ರವರ್ದ್ಧಮಾನಮಾಚಂದ್ರಾರ್ಕ್ಕ ತಾರಾಂಬರಂ ಸಲುತ್ತಮಿರೆ**
**ತತ್ಪಾದ ಪದ್ಮೋಪಜೀವಿ ಸಮಸ್ತರಾಜ್ಯಭರನಿರೂಪಿತ**
**ಮಹಾಮಾತ್ಯಪದವೀವಿರಾಜಮಾನ ಮನೋನ್ನತ**
**ಪ್ರಭುಮಂತ್ರೋತ್ಸಾಹ ಸಕ್ತಿತ್ರಯ ಸಂಪನ್ನ ಬಂಧುಜನ**
**ಮನೋಹ್ಲಾದೋನ್ನತ್ಪನ್ನ ದ್ವಿಜಕುಳಾಂಬರವಿರಾಜಿತನಿಸಾಕರ**
**ವತ್ಸಕುಳಮಳನೀದಿವಾಕರಂ ದಿಸಾವಳಯ ಪೂರಿತೋಜ್ವಳಕೀರ್ತ್ತಿ**
**ವಿಧಾನ ನಿಯೋಗಿನಿಧಾನಂ ಉಭಯದೇಸಿಮನೋರಂಜನಂ**
**ರಿಪುಕುಳಜಲಧರ ಪ್ರಬಂಜನ ನಾಮಾದಿ ಸಮಸ್ತ ಪ್ರಶಸ್ತಿ**
**ಸಹಿತಂ ಶ್ರೀಮತ್ ವಡ್ಡಾರಾವುಳದ ದಂಡನಾಯಕಂ ನಾರಣಮಯ್ಯಂಗಳ್ ॥**

ಎಂದಿದೆ.

**ಅಗ್ಗಳಯ್ಯ (ಕ್ರಿ.ಶ.೧೦೭೭):**

ಬೀದರ ಜಿಲ್ಲೆಯ, ಬಾಲ್ಕಿ ತಾಲೂಕಿನ, ಅಳವಾಯಿ[೫೬] ಗ್ರಾಮದ ಶಾಸನದ ಕರ್ತೃವಾದ ಅಗ್ಗಳಯ್ಯನು ಈ ಶಾಸನವನ್ನು ರಚಿಸಿದನು. ಭಮ್ಮೋಜ ಕೆತ್ತಿದನು. ಕಮಳಸಿರಿ ಕಂತಿಯರಿಗೆ ಪಲುಗೆರೆ ೬೦ರ ಮನ್ನೆಯದ ಎಡೆಯರಸರಿಗೆ ತೂವಗಾವೆಯಲ್ಲಿ ತಮಗೆ ಸೇರಿದ್ದ ಕಮ್ಮತದಲ್ಲಿ ೪೦ ಮತ್ತರು ಹೊಲವನ್ನು ಕಾಲುತೊಳೆದು ಬಿಟ್ಟಂತೆ ಹೇಳಿದೆ. ಇದಕ್ಕೆ ಸಾಕ್ಷಿಯಾಗಿ ಪ್ರಬುವೆಜರಸ, ಬಾಚರಸ, ಚಿಲ್ಲಗಾವುಂಡ, ಹಳ್ಳಗಾವುಂಡ, ಸೋಮದೇವರ ಗೊರವ, ಚಮುಂಡಯ್ಯ, ಪೊಲ್ಲಮ್ಮಯ್ಯ ಮುಂತಾದವರನ್ನು ಹೆಸರಿಸಲಾಗಿದೆ.

ಶಾಸನದ ಸಾಲುಗಳು ಇದಕ್ಕೆ ನಿದರ್ಶನವೆನಿಸಿದೆ.

**ಪಲುಗೆಱೆಯಱುವತ್ತಱ ಮನ್ನೆಯ ಎಡೆಯರಸರ್ಗೆ**
**ತೂವಗಾವೆಯ ತಮ್ಮ ಕಮ್ಮತದೊಳಗೆ ೪೦ ಮತ್ತರು**
**ಕೆಯ್ಯಂ ಧಾರಾಪೂರ್ವಕಂ ಮಾಡಿ**
**ಕಾಲುಗಚ್ಚಿ ಕೊಟ್ಟ ಇನ್ತಪ್ಪುದಕ್ಕೆ**
**ಪ್ರಭುವೈಜರಸನು ಬಾಚರಸನು**

ಚಿಲ್ಲಗಾವುಂಡನು ಸೋಮದೇವರ್ಗೆ
ಗೊರವಯ್ಯನು ತಮುಣ್ಡನು
ನ್ತಿಮಯ್ಯನು ಪೊಲ್ಲಮಯ್ಯ ಪ್ರಭು
ಮಟಸ್ಥಾನ ಮಱಿಯಕಲ್ಲ
ಚಂದ್ರಾರ್ಕ್ಕನುಳ್ಳನ್ನಕ ಧರ್ಮ್ಮಮುತ್ತರೋತ್ತರ
ಪ್ರವಿದ್ಧಿಸಲು ।

ಎಂದು ದಾಖಲಿಸಿದ್ದಾನೆ.

**ನಾಗದೇವ (ಕ್ರಿ.ಶ.೧೦೭೮)**

ಅವಿಭಜಿತ ಧಾರವಾಡ ಜಿಲ್ಲೆಯ, (ಇಂದಿನ ಗದಗ ಜಿಲ್ಲೆಯ) ನರಗುಂದ ತಾಲೂಕಿನ, ನರಗುಂದ ಗ್ರಾಮದ ಶಾಸನ[೫೭]ವನ್ನು 'ನಾಗದೇವ' ಎಂಬ ಶಾಸನಕವಿ ಈ ಶಾಸನವನ್ನು ಬರೆದಿದ್ದಾನೆ. ಎರಡು ದಾನಗಳನ್ನು ಉಲ್ಲೇಖಿಸುವ ಮಿತಿ ವರ್ಷಗಳಲ್ಲಿ ಹುಟ್ಟಿದ ಶಾಸನ. ಮೊದಲನೆಯ ದಾನೋಲ್ಲೆಖವು ಮುಗಿದ ಮೇಲೆ ಫಲಶ್ರುತಿ ಶ್ಲೋಕಗಳ ತರುವಾಯ ಶಾಸನಕವಿಯ ಹೆಸರು ಕಂಡುಬರುತ್ತದೆ.

ಪರಮಗುಣಗಣಕೆ ನಿಳಯಂ
ಪರಿಣತನೂರೊಡೆಯ ನಾಗದೇವಂ ಪೇಟ್ಟಿಂ
ಧರೆ ಬಣ್ಣಿಸಲರ್ಥಿಯಿನಾ
ದರದಿಂದೆಲಸಿಯರ ಕೇಸಿಮಯ್ಯಂ ಬರೆದಂ ॥

ಎಂಬ ಕಂದ ಪದ್ಯವಿದೆ. ಬಳಿಕ ಎರಡನೆಯ ದಾನೋಲ್ಲೇಖವೂ ಕೊನೆಯಲ್ಲಿ ಫಲಶ್ರುತಿಯ ಕನ್ನಡ ಪದ್ಯವೂ ಇವೆ. ಮೊದಲ ದಾನೋಲ್ಲೇಖವನ್ನು ಹೇಳಿದ ನಂತರ ತನ್ನ ಹೆಸರು ಹೇಳಿಕೊಂಡ ಕವಿ; ನಂತರ ಅಂದೇ ಜರುಗಿದ ಎರಡನೆಯ ದಾನದ ಉಲ್ಲೇಖವನ್ನು ಪ್ರತ್ಯೇಕವೆಂಬಂತೆ, ಅದೇ ಶಾಸನದಲ್ಲಿ ಮುಂದೆ ಹೇಳಿದ್ದಾನೆ. ಇಡೀ ಶಾಸನ ನರಗುಂದದ ಊರೊಡೆಯನಾದ ನಾಗದೇವನದೆ. ಅರ್ಕದೇವರಿಗೆ ಅಲಂಕಾರ ಪೂಜೋಪಕರಣಗಳನ್ನು ಸತ್ರಕ್ಕೆ ಭೂಮಿಯನ್ನು ನರಗುಂದದ ಪಡುವಗೇರಿಯ ಮಹಾಜನರು ಪಡೆದುಕೊಟ್ಟರೆಂದು ಶಾಸನವು ವಿವರಿಸುತ್ತದೆ.

ಅಲ್ಲಿಯ ಕೆಲ ಪದ್ಯಗಳನ್ನು ಇಲ್ಲಿ ನೀಡಲಾಗಿದೆ.

ತೆಱೆಭಾಗವಳತೆಯಸತೆಂ
ಬಱಿಕೆಯ ತೆಱೆಗಳೊಳಮೇನುಮಂ ಶತ್ರಕ್ಕಿ
ತ್ತೆಱಿದಂತಿರೆ ನಡೆಯಿಸುವ
ರ್ಣ್ನಱುಗುಂದದ ಪಡುವಗೇರಿಯಯ್ವತ್ತಯ್ವರ್ ॥

**ಪ್ರಿಯದಿಂದಂ ನಱುಗುಂದದೊಳ್ನೆಗಱ್ದ ಮೂಲಸ್ಥಾನದರ್ಕಂಗೆ ಬೆ**
**ಳ್ಳಿಯ ಕಣ್ಣಾಂಬ್ರದ ಭಾಜನಂ ತೊಳಪಪಟ್ಟಂ ಬೊಟ್ಟು ಘಂಟಾಚತುಷ್ಟ**
**ಮೆಂದಿಂತಿವನಿತ್ತನುತ್ತಮ ಚರಿತ್ರಂ ವಂದಿವಿದ್ವಜ್ಜನಾ**
**ಶ್ರಯನುರ್ವಿಜನಮರ್ಕಜೆಂ ಪೊಗಳ್ವಿನಂ ಮಮ್ಮುಂ ಯಶೋಮಂಡನಂ ॥**

**ಶ್ರೀಮನ್ನಕುಳಾರ್ಯ್ಯ (ಕ್ರಿ.ಶ.೧೦೭೯–೮೦)**

ಹಾಸನ ಜಿಲ್ಲೆಯ, ಅರಕಲಗೂಡು ತಾಲೂಕಿನ, ಸುಳಗೋಡು[೫೮] ಶಾಸನವನ್ನು ‘ಚತುರ್ಭ್ಹಾಷಾಲಿಖಿತ್ಥಕವಿದ್ಯಾಧರಂ ಸನ್ಧಿವಿಗ್ರಹಿ ಶ್ರೀಮನ್ನಕುಳಾರ್ಯಂ ಬರೆದಂ” ಎಂದು ಶಾಸನ ಕವಿ ನಕುಳಾಚಾರ್ಯ್ಯನು ಈ ಶಾಸನ ಕಾವ್ಯವನ್ನು ರಚಿಸಿದ್ದಾನೆಂದು ತಿಳಿದುಬರುವುದು. ಈ ಶಾಸನವು ಜೈನ ಬಸದಿಯ ನಿರ್ಮಾಣ ಗನ್ದವಿಮುಕ್ತ ಸಿದ್ಧಾಂತದೇವ, ಮೂಲಸಂಘ, ಕಾನೂರಗಣ, ತಗರಿಗಲ್ಲ ಗಚ್ಛ ಕ್ಕೆ ಭೂದಾನ ನೀಡಿದ ವಿವರ ರಾಜೇಂದ್ರ ಪೃಥ್ವಿಕೊಂಗಾಳ್ವ ಮುಖ್ಯಸ್ಥನ ಕಾಲಾವಧಿಯನ್ನು ಸೂಚಿಸುತ್ತದೆ. ಇದೊಂದು ಜೈನಶಾಸನವಾಗಿದ್ದು ಇದರಲ್ಲಿ ಶ್ಲೋಕ, ಮಹಾಸ್ರಗ್ಧರೆ, ಮತ್ತೇಭವಿಕ್ರೀಡಿತ, ಮಹಾಸ್ರಗ್ಧರೆ ಮುಂತಾದ ವೃತ್ತಗಳಲ್ಲಿ ಇಲ್ಲಿನ ಪದ್ಯಗಳಿವೆ.

ಜೈನ ಶ್ಲೋಕ ಪದ್ಯವೊಂದು ಹೀಗಿದೆ:

**ಶ್ರೀಮತ್ಪರಮಗಂಭೀರಸ್ಯಾದ್ವಾದಾಮೋಘಲಾಂಛನಂ**
**ಜಿಯಾತ್ತ್ರೈಳೋಕ್ಯನಾಥಸ್ಯ ಶಾಸನ ಜಿನಶಾಸನಂ ॥**

ಎಂದು ಜೈನಪರಂಪರೆಯಲ್ಲಿ ‘ಸ್ಯಾದ್ವಾದ’ ಅಥವಾ ‘ಅನೇಕಾಂತವಾದ’ವನ್ನು ಸ್ಮರಿಸಲಾಗಿದೆ.

**ಅಶುದ್ಧ ಮಹಾಸೃಗ್ಧರೆಗೆ ಒಂದು ಉದಾಹರಣ ಪದ್ಯವೊಂದು ಹೀಗಿದೆ:**

**ಅವನೀ ಚಕ್ರಕ್ಕೆ ಪೂಜ್ಯಂ ನಿಜಪದಮೆನಿಸಿತ್ತೆಯ್ದೆ**
**ಸನ್ಮಾರ್ಗ್ಗಗಣ್ಡ ವಿಮುಕ್ತೋಪಾತ್ತಸೈದ್ಧಾನ್ತಿಕನೆಸೆದಪನಮ್ಮಮ್ಮ**
**ಕಾಣೂರ್ಗ್ಗಣಪ್ರೊದ್ಭವನುಂ..ಗಜಭೂಧರ ಕುಳಿಶಧರ.....ಹ**
**ನ್ತ..ಚಾರಾಂಬೋದಿ ಜೈನಾಮಲಲಿತಸಿತೇಜನಿ ರಾಜಹಂಸಂ ॥**

ಮತ್ತೇಭವಿಕ್ರೀಡಿತಕ್ಕೆ ಒಂದು ಉದಾಹರಣ ಪದ್ಯ:

**ಜಗದಾಶ್ಚರ್ಯಮಿದತ್ಯಪೂರ್ವಮಿದಱಂದಕ್ಕಬ್ಜಜಂ**
**ಕೂಡಬಟ್ಟಿಗೆಯಂ ತಿಟ್ಟುಮಿಡಲ್ಕಿದೇನ್ನೆಱಿದನೇ ಪೇಳೆಂಬ**
**ಕೊಂಗಾಳ್ವಜೈನಗೃಹಂ ನಾಡೆ ಬೆಡಂಗುವೆತ್ತದಟರಾದಿತ್ಯಾ**
**ವನೀನಾಥಕೀರ್ತಿಗಡರ್ಪ್ಪಿರ್ಪ್ಪವೊಲಾರ್ಪ್ಪು ತೋರ್ಪ್ಪುದೆನೆ**
**ಮತ್ತೇವಣ್ಣಿಪಂ ಬಣ್ಣಿಪಂ ॥**

ಮಹಾಸ್ರಗ್ಧರೆಗೆ ಒಂದು ಉದಾಹರಣ ಪದ್ಯವೊಂದು ಇಂತಿದೆ:

**ಇನಿತಂ ಸಿದ್ಧಾನ್ತದೇವರ್ಗ್ಗನುನಯದಜಿದಾಚಂದ್ರತಾರಂ**
**ಸಲುತ್ತೆನ್ತೆನೆ ಧಾರಾಪೂರ್ವಕಂ ಕೊಟ್ಟುದನುಧಿ**
**ಜಳಸ್ಥೂಳಕಲ್ಲೋಳಲೀಳಾವನಿಚಕ್ರಕ್ಕೆಯ್ದೆ ಪರ್ಬ್ಬಿತ್ತದನಿ**
**ದನುದನೇನೆಂದಪೈ ದಾನದೊಳ್ಪಾವನುಮಂ ಮಿಕ್ಕಿರ್ಪ್ಪನಂ**
**ಮಾಡಿಸಿದನೆಸೆಯೆ ಸದ್ಧರ್ಮಿ ಕೊಂಗಾಳ್ವಭೂಪಂ ॥**

**ಮಂಗಿಮಯ (ಕ್ರಿ.ಶ.೧೦೭೯)**

ಆಂಧ್ರಪ್ರದೇಶದ ಅನಂಪುರ ಜಿಲ್ಲೆಯ, ಗುತ್ತಿ ತಾಲೂಕಿನ, ಹಾವಲಗಿ ಗ್ರಾಮದ ಕ್ರಿ.ಶ.೧೦೭೯ರ ಶಾಸನವನ್ನು[೫೯] 'ಮಂಗಿಮಯ ಬರೆದಂ' ಎಂದು ಶಾಸನಕವಿಯ ಹೆಸರ ಉಲ್ಲೇಖವಿದೆ. ಚಾಳುಕ್ಯದೊರೆ ತ್ರಿಭುವನಮಲ್ಲದೇವನ ರಾಜ್ಯಭಾರದ ಈ ಶಾಸನದಲ್ಲಿ ಮಹಾಮಂಡಳೇಶ್ವರ ಚೋಳವಂಶದ ಮಂಗರಸನು ರೊದ್ದ-೩೦೦ ಕಣಿಯಕಲ್ಲು-೩೦೦ ಈ ಎರಡು ನೂರನ್ನು ಆಳುತ್ತಿದ್ದಾಗ 'ಪಂಚಲಿಂಗಸಿದ್ಧೇಶ್ವರದೇವರ' ಆಚಾರ್ಯ 'ಬೇವಿನಜೀಯ' ಎಂಬುವವನಿಗೆ ದೇವರ ಸೇವೆಗಾಗಿ ಭೂಮಿ, ತೋಟ, ಗಾಣಗಳನ್ನು ದತ್ತಿಯಾಗಿ ಕೊಟ್ಟದ್ದನ್ನು ಇದು ದಾಖಲಿಸುತ್ತದೆ.

**ಕಾಸ್ಯಪ ಕುಳ ಪವಿತ್ರ ಸುಜನಯ್ಕಮಿತ್ರಂ ಕಂಬಳಪಜಿಕಿ**
**ಘೋಶಣಂ ಮಣ್ಡಳಿಕ ಭೂಶಣಂ ರಾಜಮಾನ್ಧಾತ**
**ನಿನ್ದಿಜಿವಾತ ವೀರನಾರಾಯಣ ಚತುರ್ಭಾರಾಯಣ**
**ರಿಪುನ್ರಿಪಕಾಳದಣ್ಡ ಸಿಖಿ ಸಿಖಧ್ವಜ ಶಿಂಘಲಾಂಛನ**
**ಬ್ರಾಜಿತ ಮಂಡಳಿಕ ..ಬಂಟರ ಭಾವ ಗಣ್ಡರ**
**ಚೋಳೇಸ್ವರದೇವ ಲಬ್ದವರಪ್ರಸಾದಂ ಮ್ರಿಗಮದಾಮೋದ**
**ಶ್ರೀಮನ್ಮಹಾಮಣ್ಡಳೇಶ್ವರ ಮಂಗರಸರು ರೊದ್ದ ಮೂನೂಱು**
**ಕಣೆಯಕಲ್ಲು ಮೂನೂರುಂ ಅನ್ತು ಎರಡನೂರುಂ**
**ಸುಖಸಂಕಥಾ ರಾಜ್ಯಂಗೆಯ್ಯುತ್ತಮಿರೆ ॥**

ಎಂದು ದಾನದ ವಿವರಗಳಿಂದ ಕೂಡಿದೆ.

**ಮಲ್ಲಿಕಾರ್ಜುನ (ಕ್ರಿ.ಶ.೧೦೮೦):**

ಧಾರವಾಡ ಜಿಲ್ಲೆಯ (ಅವಿಭಜಿತ) ಇಂದಿನ ಗದಗ ಜಿಲ್ಲೆಯ, ನರಗುಂದ ತಾಲೂಕಿನ, ನರಗುಂದ ಶಾಸನವನ್ನು[೬೦] ಮಲ್ಲಿಕಾರ್ಜುನ ಕವಿಯು ರಚಿಸಿದ್ದಾನೆ. ಕವಿಯ ಬಗ್ಗೆ ಈ ರೀತಿಯಾಗಿ ಹೇಳಿಕೊಂಡಿದ್ದಾನೆ.

ಬರೆದಂ ರಾವುರಸುತ ನಾ
ದರದಿಂದಂ ಮಲ್ಲಿಕಾರ್ಜುನಂ ಶಾಸನಮಂ
.......ತಿರ್ದಿ ಬರೆಸಿದಂ ಸಾ
ಕ್ಷರಿಕ ಕೊಲ್ಲರವು ನಾಗವಾರ ಕವೀಂದ್ರ

ಈ ಮೇಲಿನ ಕಂದಪದ್ಯದಿಂದ ರಾಮನ ಮಗನಾದ ಮಲ್ಲಿಕಾರ್ಜುನ ಕವಿಯು ಬರೆದಿದ್ದು, ಕೊಲ್ಲೂರಿನ ಸಾಕ್ಷರಿಕನಾದ (ಅಕ್ಷರಸ್ಥ) ನಾಗವಾರ ಕವೀಂದ್ರನು. ತಿದ್ದಿ ಬರೆಸಿಹನೆಂದು ತಿಳಿದುಬರುತ್ತದೆ. ಈ ಶಾಸನದಲ್ಲಿ 'ನಾಗವಾರ' ಎಂಬ ಶಾಸನೋಕ್ತ ಕವಿಯು ಮಲ್ಲಿಕಾರ್ಜುನ ಕವಿಗಿಂತ ಪ್ರಬುದ್ಧ ಕವಿಯಾಗಿರಬಹುದಾಗಿದೆ. ೬ನೇ ವಿಕ್ರಮಾದಿತ್ಯನ ಕಾಲವನ್ನು ಉಲ್ಲೇಖಿಸುವ ಈ ಶಾಸನದ ಕಾಲ ಕ್ರಿ.ಶ.೧೦೮೦. ಈ ಶಾಸನದಲ್ಲಿ ಸಂಕಪಯ್ಯನು ದೇವಾಲಯಕ್ಕೆ ಭೂಮಿಯನ್ನು ದಾನ ನೀಡಿದ್ದುದರ ಉಲ್ಲೇಖವಿದೆ. ಈ ಸಂದರ್ಭದಲ್ಲಿ ಚಾಲುಕ್ಯ ವಂಶ, ನರಗುಂದ, ಅಲ್ಲಿನ ದೊರೆ ಮೊದಲಾದವರ ವರ್ಣನೆ ಮಾಡಲಾಗಿದೆ.

**ಮಾಧವ ಭಟ್ಟೋಪಾಧ್ಯಾಯ (ಕ್ರಿ.ಶ. ೧೦೮೧):**

ಆಂಧ್ರಪ್ರದೇಶದ, ನಲ್ಗೊಂಡ ಜಿಲ್ಲೆಯ, ಭುವನಗಿರಿ ತಾಲೂಕಿನ, ಕೊನಲುಪಾಕ ಗ್ರಾಮದ[೬೧] ಶಾಸನವನ್ನು 'ಮಾಧವ ಭಟ್ಟೋಪಾಧ್ಯಾಯರ ಬರೆಪಂ' ಎಂದು ಶಾಸನಕವಿಯ ಹೆಸರು ಉಲ್ಲೇಖಗೊಂಡಿದೆ. ಇದರಲ್ಲಿ ಚಾಲುಕ್ಯದೊರೆ ತ್ರಿಭುವನಮಲ್ಲದೇವ (ವಿಕ್ರಮಾದಿತ್ಯ ೪) ಹಾಗೂ ಅವನ ಮಹಾಮಂಡಳೇಶ್ವರನಾದ ದೊರೆಯಿಂದ ತಾಮ್ರಶಾಸನದ ಮೂಲಕ 'ಕೊಳ್ಳಿಪಾಕೆ ೭೦೦೦' ಅನ್ನು ಪಡೆದು ರಾಜಧಾನಿ ಕೊಳ್ಳಿಪಾಕೆಯಿಂದ ಆಳುತ್ತಿದ್ದು ಕಾಮರಸನ ರಾಜ್ಯಭಾರವನ್ನು ಹೇಳಿದೆ. ಇದರಲ್ಲಿ ಕಾಮರಸನ ವಂಶಾವಳಿಯನ್ನು ಹೇಳಿದೆ. ದುರ್ಜಯ ವಂಶದ ಪಂಡ, ಪಂಡನ ಮಗ ಗಂಡ, ಗಂಡನ ಮಗ ಪುಂಡನೃಪ. ಈ ಪಂಡನೃಪನ ಮಗನೇ ಕಾಮರಸ. ಸಮುದ್ರತೀರದಲ್ಲಿ ಆಳುತ್ತಿದ್ದ ದುರ್ಜಯ ವಂಶದವರೆಂದೇ ತಮ್ಮನ್ನು ಕರೆದುಕೊಳ್ಳುವ ಪರಿಚ್ಛೇದಿ ದೊರೆಗಳ ವಂಶದಲ್ಲೂ ಇಂಥ ಹೆಸರುಗಳೇ ಕಂಡುಬರುತ್ತವೆ. ಹಾಗೂ ಅವರು ತಮ್ಮನ್ನು 'ಕೊಲ್ಲಿಪಾಕೆ ೭೦೦೦'ದ ದೊರೆಗಳೆಂದೇ ಹೇಳಿಕೊಳ್ಳುತ್ತಾರೆ. ಪ್ರಸ್ತುತ ಶಾಸನದಲ್ಲಿ ಭುಜಂಗಾವಳಿ ಗುಂಪಿಗೆ ಸೇರಿದ 'ಕಾಳಾಮುಖ ಶೈವಗುರು' ಗೋಕರ್ಣರಾಸಿಪಂಡಿತನ ಶಿಷ್ಯ ಈಶಾನಶಕ್ತಿ ಪಂಡಿತ, ಅವನ ಶಿಷ್ಯ ಶ್ರೀಕಂಠಪಂಡಿತದೇವರಿಗೆ 'ಕಾಮರಸ' ನು ಮಾನುಗಲು ಎಂಬ ಗ್ರಾಮವನ್ನು ಸರ್ವಮಾನ್ಯವಾಗಿ, ಚಡೆಯ ಮಲ್ಲೇಶ್ವರದೇವರ ಸೇವೆಗೆಂದು ದತ್ತಿಯಾಗಿ ನೀಡಿದುದನು ದಾಖಲಿಸಿದೆ. ಶ್ರೀಕಂಠಪಂಡಿತದೇವನು ತರ್ಕ ಹಾಗೂ ವ್ಯಾಕರಣದಲ್ಲಿ ಮಹಾಪಂಡಿತನಾಗಿದ್ದನೆಂದೂ ಹೇಳಿದೆ. ಈ ಶಾಸನವನ್ನು ಹೀಗೆ ಹೇಳಿದ್ದಾನೆ.

**ಭುಜಂಗವಳಿ ಭೂಷಣರಪ್ಪ ಶ್ರೀಕರಿಪಂಡಿತದೇವರ**
**ಪಾದಪ್ರಕ್ಷಾಳನಂ ಗೆಯ್ದು ಚಡೆಯ ಮಲ್ಲೇಶ್ವರದೇವರ್ಗೆ**
**ಖಣ್ಡಸ್ಫುಟಿತ ನಮಸುಧಾಕರ್ಮ್ಮಕ್ಕಮಂಗಭೋಗಕ್ಕಂ**
**ರಂಗಭೋಗಕ್ಕಂ ರಪೋಧನರ್ಗ್ಗೆ ವಿದ್ಯಾರ್ಥಿಗಳ್ಗಂ**
**ತ್ರಿಭೋಗಾಭ್ಯನ್ತರ ಸಿದ್ಧಿಯಂ ಸರ್ವನಮಸ್ಯಂ"**

ಎಂದು ದಾನ ನೀಡಿದ ವಿವರಗಳನ್ನು ನೀಡಿದ್ದಾನೆ.

**ಅಯ್ಯಪಯ್ಯ ಮತ್ತು ಶ್ರೀಧರ (ಕ್ರಿ.ಶ.೧೦೮೨)**

ಆಂದ್ರಪ್ರದೇಶದ ಎರಂಗಲ್ ಜಿಲ್ಲೆಯ, ನರಸ್ತಂಪೇಟ್ ತಲೂಕಿನ, ಬಾಣಾಜಪೇಟ್ ಗ್ರಾಮದ ಶಾಸನವನ್ನು[೭] ಅಯ್ಯಪಯ್ಯ ಮತ್ತು ಶ್ರೀಧರ ಎಂಬುವವರು ಈ ಶಾಸನವನ್ನು ಬರೆದರು. ಈ ಶಾಸನವು ಕ್ರಿ.ಶ.೧೦೮೨ಕ್ಕೆ ಸೇರಿದೆ. ಇದರಲ್ಲಿ ಚಾಲುಕ್ಯದೊರೆ ತ್ರಿಭುವನಮಲ್ಲದೇವ ಅವನ ಮಹಾಮಂಡಳೇಶ್ವರರಾದ ಉಗ್ರವಾಡಿಯ ಮೇಡರಸ ಹಾಗೂ ಕಾಕತಿಯ ಬೇತರಸದ ಆಳ್ವಿಕೆಯನ್ನು ಹೇಳಿದೆ. ಕಾಕತೀಯ ಬೇತರಸನು ಮೇಡರಸನು ಕಟ್ಟಿಸಿದ ವೀರಕಮಲ ಜಿನಾಲಯಕ್ಕೆ ನೀಡಿದ ಭೂಮಿ ದತ್ತಿಯನ್ನು ಇದರಲ್ಲಿ ದಾಖಲಿಸಿದೆ.

**"ಶ್ರೀ ಮನ್ಮಹಾಮಂಡಳೇಶ್ವರ ನುಗ್ರವಾಡಿಯ ಮೇಡರಸನ**

**ವೀರಮಲ್ಲಜಿನಾಲಯಕ್ಕೆ ಸಮಧಿಗತ ಪಂಚಮಹಾಶಬ್ದ**
**ಮಹಾಮಂಡಳೇಶ್ವರ ನಮ್ಮಕುಣ್ಡ ಪುರವರೇಶ್ವರ**
**ಪರಮಮಹೇಶ್ವರ ಪರಹಿತ ಚರಿತ ವಿನಯವಿಭೂಷಣ**
**ಶ್ರೀಮನ್ಮಹಾಮಂಡಳೇಶ್ವರ ಕಾಕತಿಯ ಬೇತರಸರ್"**

ಎಂದು ದಾನ ನೀಡಿದ ವಿವರಗಳು ಉಲ್ಲೇಖಗೊಂಡಿವೆ. ಶಾಸನದ ಕೊನೆಯಲ್ಲಿ

**"ಬರುದಮೇಳ ಮಹೀಸನೇವೀರವಿಸಿದ**
**ಜಿನಾಲಯಕ್ಕೊಸಾಸನಮಸೆಯಲು ಧರ**
**ಶಶಿ ರವಿ ನಿಲ್ಚುವರಂಬರದರ್ ಶ್ರೀ**
**ಅಯ್ಯಪಯ್ಯನುಂ .. ಶ್ರೀಧರನು"**

ಅಯ್ಯಪಯ್ಯನು ಹಾಗೂ ಶ್ರೀಧರ ಎಂಬ ಇಬ್ಬರು ಕವಿಗಳು ತಮ್ಮ ಕೌಶಲವನ್ನು ಮೆರೆದಿದ್ದಾರೆ.

**ನಾಗದೇವ (ಕ್ರಿ.ಶ.೧೦೮೨)**

ಅವಿಭಜಿತ ಧಾರವಾಡ ಜಿಲ್ಲೆಯ, (ಇಂದಿನ ಗದಗ ಜಿಲ್ಲೆ) ಗದಗ ತಾಲೂಕಿನ, ಕುರ್ತುಕೋಟಿಯ[೬೩] ಮೂರು ಶಾಸನಗಳನ್ನು ಶಾಸನಕವಿ ನಾಗದೇವ ರಚನೆ ಮಾಡಿದ್ದಾನೆ. ಈ

ಶಾಸನಗಳು ತ್ರಿಭುವನಮಲ್ಲ ೬ನೇ ವಿಕ್ರಮಾದಿತ್ಯನ ಕಾಲದಲ್ಲಿ ರಚಿತವಾಗಿವೆ. ಶಾಸನದ ಕೊನೆಯ ಭಾಗದಲ್ಲಿ ಅನುಕ್ರಮವಾಗಿ 'ವಿಪ್ರಗ್ರಾಮಂ ಪೊಂಬೊಳಲ ನಾಗದೇವಬುಧಂ ಬುಧತತಿ ಮೆಚ್ಚ ಕಾವ್ಯಮಂ ವಿರಚಿಸಿದಂ ಎಂದೂ 'ಇನ್ತಿ ಶಾಸನಗಬ್ಬಮನೆನ್ತು ವಿಚಾರಿಪೊಡೆ ವುಚಿತಮೆಂಬಂತಿರೆ ವಿಕ್ರಾನ್ತಧನಂ ಜಯಲಕ್ಷ್ಮೀಕಾನ್ತಂ ಪೊಂಬೊಳಲ ನಾಗದೇವಂ ಪೇಳ್ದಂ" ಎಂದು ಕಾಣಬರುವ ಮಾತುಗಳಿಂದ ಈಗಿನ ಹೊಂಬಳ ಗ್ರಾಮದ 'ನಾಗದೇವನೇ' ಕರ್ತೃ ಎಂದು ತಿಳಿದುಬರುತ್ತದೆ. ಅನುಕ್ರಮವಾಗಿ ಕ್ರಿ.ಶ.೧೦೮೨ ಮತ್ತು ೧೦೮೭ರಲ್ಲಿ ರಚಿತವಾದ ಈ ಎರಡು ಶಾಸನಗಳನ್ನು ವಿಸ್ತರಿಸಿ ಬರೆದವನು ಶಿವಭಕ್ತನಾದ ಕುಳಕರಣಿ ಮಾಬಳಾರ್ಯ.

"ಈ ಎರಡು ಶಾಸನಗಳಲ್ಲದೆ, ಅದೇ ಊರಿನಲ್ಲಿ ದೊರೆತ ಶಾಸನ (೧೦೮೨) ಕುಳಕರಣಿ ಮಾಬಳಾರ್ಯನೇ ಬರೆದಿದ್ದಾನೆ. ಅಲ್ಲಿನ ಈ ಉಲ್ಲೇಖ ಮತ್ತು ಶೈಲಿಗಳನ್ನು ಗಮನಿಸಿ ಆ ಶಾಸನದ ಕರ್ತೃವೂ ನಾಗದೇವನೇ ಇರಬೇಕೆಂದು ಶ್ರೀನಿವಾಸ ರಿತ್ತಿ ಊಹಿಸುತ್ತಾರೆ.[೬೪]

ಮೊದಲನೇ ಶಾಸನದಲ್ಲಿ ಯುವರಾಜ ಜಯಸಿಂಗದೇವನ ಮಂಡಲಾಧಿಪತಿಯಾಗಿದ್ದ ದಂಡನಾಯಕ ವಾಮದೇವಯ್ಯನು ಅಗ್ರಹಾರವಾದ 'ಕುಜಿತಕೊಂಟೆಯ ಊರೊಡೆಯನಿಗೂ ಇನ್ನೂರು ಮಹಾಜನರಿಗೂ ಕಡಲಗೆಱೆಯ ಕೆರೆಯ ಪ್ರಯೋಜನಾರ್ಥ ಕೆಲವು ಸುಂಕದಾಯವನ್ನು ದಾನವಾಗಿ ಬಿಟ್ಟ ಸಂಗತಿ ಇದೆ. ೫೬ ಸಾಲುಗಳ ಈ ಶಾಸನದಲ್ಲಿ ಗದ್ಯಪದ್ಯಾತ್ಮಕವಾದ ೧೬ ಪದ್ಯಗಳಿವೆ. ಇವುಗಳ ರಚನೆಯನ್ನು ಗಮನಿಸಿದರೆ, ಕವಿಯು ಒಳ್ಳೆಯ ಕವಿತಾಶಕ್ತಿಯಿದ್ದವನೆಂದು ತೋರುತ್ತದೆ.

**ಕಡಲಗೆಱೆಯ ತಟಾಕದ ವರ್ಣನೆ:**

**ಅತಿಮಧುರಂ ಪ್ರಸನ್ನಕವಿ ನಿರ್ಮಿಸಿದುನ್ನತ ಕಾವ್ಯದಂತೆ ನಿ**
**ರ್ವೃತಿಯುತಮೆಯ್ದೆ ಮೋಕ್ಷದವೊಲ್ಚಿತ್ತಜನಪ್ಪನ ಚಿತ್ತದಂತೆ ಸಂ**
**ತತಮತಿ ನಿರ್ಮಳಂ ಪೆಱರನೆಂದುಮಪೇಕ್ಷಿಸುತಿರ್ಪನಂತೆ ತಾ**
**ನತಿಲಘುವೆನ್ನದೀ ಚಣಕದುದ್ಘತಚಾಕಮನಾರೊ ಬಣ್ಣಿಪರ್ ॥**

ಎರಡನೆಯ ಶಾಸನದಲ್ಲಿ ಕುಜಿತಕೊಂಟೆ ಇನ್ನೂರು ಮಹಾಜನರಲ್ಲಿ ಒಬ್ಬನಾದ ಬೆಳ್ಳೆಯರೆಗನ ಎಮ್ಮೆಗನೂರು ಕುರಷುಪಟ್ಟಿಯಲ್ಲಿ ವಿಷ್ಣು ಸರಸ್ವತಿ, ದೇವಾಲಯಗಳನ್ನು ಕಟ್ಟಿಸಿದ ಸಿರಗುಪ್ಪೆಯಲ್ಲಿ ಮರಕಟ್ಟಿನ ಹಿರಿಯ ಬಾವಿ ಹಾಗೂ ಕೆರೆ ಮಾಡಿಸಿದ, ಎಱ ವಿಷ್ಣುಕೇಶವ ದೇವಾಲಯಕ್ಕೆ ಕ್ಷೇತ್ರ ದತ್ತಿಬಿಟ್ಟ ಸಂಗತಿ ಬಂದಿದೆ. ಈ ಶಾಸನದಲ್ಲಿ ಹೋಮ ಮಾಡುವವರು, ಅಗ್ನಿಹೋತ್ರಿಗಳು ಎಂಬರ್ಥದಲ್ಲಿ 'ಬೆಳ್ಕೆಯರ್' ಎಂಬ ಅಪೂರ್ವ ಪದ ಬಳಕೆಯಾಗಿದೆ.

**ಕುಱುತಕೊಂಟೆ ಊರಿನ ವರ್ಣನೆ:**

> **ವಾರಿಧಿವೇಷ್ಟಿತಾವನಿಲತಾಂಗಿಗೆ ಕುಂತಲದೇಶಮಾಸ್ಯಮಂ**
> **ತಾ ರಮಣೀಯಮಪ್ಪ ಮುಖಪಂಕರುಹಕ್ಕೆ ಲಲಾಟದಂತೆ ವಿ**
> **ಸ್ತಾರದಿನೊಪ್ಪಿ ತೋಱುವುದು ಬೆಳ್ವಲಮಲ್ಲಿ ಲಲಾಮದೊಂದಳಂ**
> **ಕಾರ ಸಮನ್ವಿತಂ ಕುಱುತಕೊಂಟೆ ವಿರಾಜಪುದೀ ಧರಿತ್ರಿಯೊಳ್ ॥**

**ನಗಿಬಂಟ್ಟ (ಕ್ರಿ.ಶ.೧೦೮೨)**

ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲೂಕಿನ ಜಮಖಂಡಿ ಗ್ರಾಮದ ಶಾಸನವು[೬೫] ಕ್ರಿ.ಶ. ೧೦೮೨ರಲ್ಲಿ ರಚನೆಗೊಂಡಿದೆ. ಶಾಸನದ ಆರಂಭದ ಭಾಗ ನಷ್ಟವಾಗಿದೆ. ಶಾಸನದಲ್ಲಿ ಒಟ್ಟು ೧೮ ಸಾಲುಗಳಿದ್ದು ಶಾಸನದಲ್ಲಿ ೧೭ನೇ ಸಾಲಿನಲ್ಲಿ ಶಾಸನಕವಿ 'ನಗಿಬಂಟ್ಟ' ಶಾಸನದಲ್ಲಿ ಜಂಬುಖಂಡಿಯ ಉತ್ತರೇಶ್ವರದೇವರಿಗೆ ಪೊರವೆಟ್ಟದಲ್ಲಿ ೫೦೦ ಮತ್ತರು ಭೂದಾನ ನೀಡಿದಂತೆ ಹೇಳಿದೆ.

> **"ಸೂರ್ಯಗ್ರಹಣದಂದು ಜಂಬುಖಣ್ಡಿಯ**
> **ಉತ್ತರೇಸ್ವರದೇವರ್ಗ್ಗೆ ಪೊಱವೆಟ್ಟದೊಳಯ್ನೂಱು**
> **ಮತ್ತರಂ ಬಿಟ್ಟರಿದು ಕಿಸುವೊಟಲ ಮಳಿಗೆ**
> **ಬಳಯ. ಅಮ ...ರಬರ... ಪಾಣಿ**
> **ಗ್ರಹಣಂ ಗೆಯ್ದು ಕೊಟ್ಟರಿದನಜಿವ**
> **ಬಾಣರಾಸಿಯೊಳು ಕವಿಲೆಯುಂ ಬ್ರಹ್ಮ**
> **ಣನುವನಟಿದ ಪಾತಕಂ ನಗಿಂಬಟ್ಟ**
> **ಬರದ ಮಂಗಳ ಮಹಾ ಶ್ರೀ"**

ಎಂದು ದಾನದ ವಿವರಗಳನ್ನು ನೀಡಿದೆ.

**ನನ್ನಪೈ (ಕ್ರಿ.ಶ.೧೦೮೩)**

ಬಿಜಾಪೂರ ಜಿಲ್ಲೆಯ, ಬಿಜಾಪುರ ತಾಲೂಕಿನ, ತಿಡಗುಂದಿ[೬೬] ಶಾಸನದ ಕರ್ತೃ 'ನನ್ನಪೈ'. ಶಾಸನದ ಲಿಪಿ ನಾಗರಿಯಾಗಿದ್ದು ಸಂಸ್ಕೃತ ಭಾಷೆಯಲ್ಲಿದೆ. ೫೦ ಸಾಲುಗಳಿಂದ ಕೂಡಿದೆ. ಆರಂಭದಲ್ಲಿ ವಿಷ್ಣು ಮತ್ತು ಶಿವನ್ ಸ್ತುತಿ ಬಂದಿದೆ.

> **ಜಯತ್ಯಾವಿಷ್ಕೃತಂ ವಿಷ್ಣೋರ್ವ್ವಾರಾಹಂ ಕ್ಷೋಭಿತಾರ್ಣ್ಣವಂ**
> **ದಕ್ಷಿಣೊನ್ನತ ದಂಷ್ಟ್ರಾಗ್ರ ವಿಶ್ರಾಂತ ಭುವನಂ ವಪುಃ ॥**
> **ವಪುರ್ದಲನ ಸಂಭ್ರಮಾತ್ಸ್ವನಖರಂದ್ರನಷ್ಟೇ ರಿಪೌ ಕ್ವ ಯಾತ ಇತು**
> **ವಿಸ್ಮಯಾತ್ತ್ರ ಹಿತ ಲೋಚನಸ್ಸರ್ವ್ವತಃ ವ್ರಿಧೇತಿ ಕರಧೂನನೆ**
> **ನಿಪತಿತಂ ಪುರೋ ರೇಣುವನ್ನಿರೀಕ್ಷ್ಯಾ ಭುವಿದಾನವಂ ಜಯತಿ ಜಾತ ಹಾಸೆ ಹರಿಃ ॥**
> **ಪಾಂಡು ಪಂಕಜ ಸಂತೀನ ಮಧುಪಾಲೀ ಸ ಮಂಗಲಂ**
> **ಯೋ ವಿಭರ್ತಿ ವಿಧೇಯಾತ್ತೆ ನಾ ಕಪಾಲೀ ಸ ಮಂಗಲಂ ॥**

ಕಲ್ಯಾಣ ಚಾಲುಕ್ಯ ತ್ರಿಭುವನಮಲ್ಲನು ಕಲ್ಯಾಣ ಪಟ್ಟಣದಲ್ಲಿ ನೆಲಸಿ ರಾಜ್ಯವನ್ನು ಆಳುತ್ತಿದ್ದಂತೆ ಹೇಳಿದೆ. ಇವನ ಸಾಮಂತ ಮುಂಜ. ಇವನು ಪ್ರತ್ಯಂಡಕ–೪೦೦೦'ವನ್ನು ಆಳುತ್ತಿದ್ದ. ಸಿಂಧವಂಶಕ್ಕೆ ಸೇರಿದ ಈತನು ಭೀಮ ಎಂಬುವವನ ಮೊಮ್ಮಗನೂ ಸಿಂಧರಾಜನ ಮಗನೆಂದೂ ಹೇಳಿಕೊಂಡಿದ್ದಾನೆ. 'ಕನ್ನಸಾಮಂತ' ಎಂಬುವವನು ತ್ರಿಭುವನಮಲ್ಲನ ಅನೇಕ ಅಧಿಕಾರಿಗಳಲ್ಲಿ ಒಬ್ಬ ಇವನನ್ನು ಶಾಸನವು ವಿಶೇಷವಾಗಿ ಪ್ರಶಂಸಿಸಿದೆ.

> **"ಸ್ವಸ್ತಿ ಶ್ರೀ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತಂ**
> **ವೀರಲಕ್ಷ್ಮೀಕಾಂತಂ ಪರಬಲ ಕ್ರಿತಾಂತ ಅದಟ ಸಾಮಂತಘನ**
> **ಪಟಲ ವಿಘಟನ ಪ್ರಭಂಜನಂ ವೈರಿಸಾಮಂತ ಗಜಕೇಸರಿ ಸಾಮಂತ**
> **ವೇಬೆಂಟೆಕಾರಂಮಗರ ಕೀರ್ತಿನವಸಾರಂ ಏಬಂಟರಭಾವಂ**
> **ರೇವಣದೇವನಾಂಕಕಾರ ಪತಿಹಿತಾಚಾರ್ಯನಚಲಲಿತಧೈರ್ಯ ಗೋತ್ರಪವಿತ್ರಂ**
> **ಸುಜನೈಕಮಿತ್ರಂ ಧರ್ಮಧರ್ಮಾತ್ಮಜಂ ಸತ್ಯರಾಧೇಯ**
> **ತುರಗರೇವನ್ತಂ ವಿಕ್ರಾಂತ ಕಂಠೀರವಂ ಶ್ರೀಮತ್ರಿಭುವನಮಲ್ಲದೇ**
> **ಪಾದಾರಾಧಕ ಶ್ರೀಮತ್ಕನ್ನಸಾಮಂತಃ ತಸ್ಯಾಶೀರ್ವಚನಮಿದಂ ॥**

ಇವನಿಗೆ (ಕನ್ನಸಾಮಂತ) ಮುಂಜನು ವ್ಯಾವಡ ೧೨ ಹಳ್ಳಿಗಳನ್ನು (ಟಕ್ಕಳಿಕ ಗ್ರಾಮವನ್ನು ಬಿಟ್ಟು) ಮಾರಾಟ ಮಾಡಿದ. ಈ ಮಾರಾಟಕ್ಕೆ ಖಂಬಯ್ಯನಾರ್ಯ ಮಧುಕರಿನಾಯಕ, ಸಂಧಿವಿಗ್ರಹಿ, ಭಮ್ಮೈಯನಾಯಕ ಮತ್ತು ನಿಂಬನಾಯಕರು ಸಾಕ್ಷಿಗಳಾಗಿದ್ದಾರೆ. ಇದನ್ನು ನನ್ನಪೈ' ಎಂಬುವವನು ಬರೆದಂತೆ ಹೇಳಿದೆ.

> **'ಬಮ್ಮೈಯ್ಯನಾಯಕಃ ನಿಂವಬಯನಾಯಕ ಏತೇಷಾಂ ಪುರತಃ**
> **ಸಂಧಿವಿಗ್ರಹಿ 'ನನ್ನಪೈಪ್ರತಿಹತ್ತೇನ' ಲಿಖಿತ್ವಾ ಶ್ರೀಮುಂಜಮಹೀಪತಿನಾ**
> **ಕನ್ನಸಾಮಂತಯ ॥ ಸ್ವಹಸ್ತೇನ ದತ್ತಮಿದಂ ತಾಮ್ರಶಾಸನಂ ॥**

ಎಂದು ದಾಖಲಿಸಿದೆ.

**ರಾಜಾದಿತ್ಯದೇವ (ಕ್ರಿ.ಶ.೧೦೮೩)**

ಆಂಧ್ರಪ್ರದೇಶದ ಕರೀಂನಗರ ಜಿಲ್ಲೆಯ, ಸಿರಿಸಿಲ್ಲ ತಾಲೂಕಿನ, ವೇಮುಲವಾಡ ಗ್ರಾಮದ ಶಾಸನವನ್ನು[೬೭] 'ರಾಜಾದಿತ್ಯದೇವ', ಎಂಬ ಶಾಸನಕವಿ ರಚಿಸಿದ್ದಾನೆ. ಇದರಲ್ಲಿ ಕಲ್ಯಾಣದಿಂದ ಆಳುತ್ತಿದ್ದ ಚಾಳುಕ್ಯದೊರೆ ತ್ರಿಭುವನಮಲ್ಲನ ರಾಜ್ಯಭಾರವನ್ನು ಹೇಳಿದೆ. ಕೊಸವಳ ಸವಲಬ್ಬೆಯಲ್ಲಿದ್ದ 'ಚಬ್ಬಿ ೨೧೦೦೦'ದ ದೊರೆ ಮಹಾಮಂಡಳೇಶ್ವರ ರಾಜಾಧಿತ್ಯನು ತನ್ನ ರಾಜ್ಯಧಾನಿ ಲೆಂಬುಳವಾಡಿಯಲ್ಲಿ ರಾಜಾದಿತ್ಯೇಶ್ವರ ದೇವಾಲಯವನ್ನು ಮಾಡಿಸಿ ದೇವರಸೇವೆಗೆ ತಪೋಧನರ ಆಹಾರಕ್ಕೆ ಉಪಾಧ್ಯಾಯರ ಜೀವಿತಕ್ಕೆ ಕುರುಮ ಮತ್ತು ಸಂಕಯಪಳ್ಳಿ ಎಂಬ

ಗ್ರಾಮಗಳನ್ನೂ ಲೆಂಬುಳವಾಡದ ತಳವೃತ್ತಿಯನ್ನು ದತ್ತಿಯಾಗಿ ನೀಡಿದುದನ್ನು ಇದರಲ್ಲಿ ದಾಖಲಿಸಿದೆ.

ಇದರಲ್ಲಿ ರಾಜಾದಿತ್ಯನ ವರ್ಣನೆಯನ್ನು ಹೀಗೆ ನೋಡಬಹುದು:

> **"ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರಂ**
> **ವಿರಥಮಣ್ಡಳಿಕ ಮದನಮಹೇಶ್ವರಂ ತೊಣ್ಡಮಣ್ಡಳಿಕ**
> **ಮಣ್ಡವಿ ಖಾಣ್ಡವ ಪಾಣ್ಡುನನ್ದನಂ ಸುಕವಿ ಪಿಕನಿಕರ ಕೋರಕಿತ**
> **ಸಹಕಾರ ನನ್ದನಂ ನಿಜವಿಜಯ ಭುಜಾಸಿಲತಾ ನರ್ತ್ತಕೀ ನರ್ತ್ತನ**
> **ವಿನೋದ ಲಾವಕಂ ಕುನಿಂಗಿಲ ಕೋಟಾಟವೀ ದಾವಪಾವಕಂ**
> **ರಾಜೇನ್ದ್ರಚೋಳ ಕೀರ್ತಿವಲ್ಲೀಪಲ್ಲವ ನಿದಾಹಸಮಯ ದಿವಸಕರಂ**
> **ವಿವೇಕರತ್ನ ರತ್ನಾಕರಂ ಕುಱುಂಬಕದಂಬ ನಿರ್ಮ್ಮೂಳನನಪ್ಪಾಗ**
> **ದರ್ಪ್ಪದಳನಂ ವಿಜಯರಾಯಸಂಹರಣಂ ಗಣ್ಡರಾಭರಣಂ**
> **ಚೋೞಕಟಕ ಸೂಱೆಕಾಱಂ ಪೆರ್ಮಾಡಿಯಂಕಕಾಱಂ**
> **ಕಾಂಚೀಪುರ ಪ್ರಬಲಬಲ ಪನ್ನಗ ವೈನತೇಯಂ ವಿವತರಣವಿನೋದ**
> **ರಾಧೇಯ ನರಸಕ್ಕೆ ಕೇಸರಿ ಮಣ್ಡಳಕ ದಿಕ್ಕರಿ ಪ್ರಚಣ್ಡಾರಿಮಣ್ಡಳಿಕ**
> **ಮಣ್ಡಳೀಕೃತಾನ್ತಂ ಚೋೞಯಿಯನ ಹನ್ಮನ್ತ ಸಾಮಾದಿ ಸಮಸ್ತ**
> **ಪ್ರಶಸ್ತಿ ಸಹಿತಂ ಶ್ರೀಮನ್ಮಹಾಮಣ್ಡಳೇಶ್ವರಂ ರಾಜಾದಿತ್ಯರಸರ್**
> **ಕೊಸವಳ ಸವಲಬ್ಬೆಯ ಭಾಗಮುಮಂ ಚಬ್ಬಿಯಿಪ್ಪತ್ತೊಂದು**
> **ಸಾಸಿರಮುಮಂ ದುಷ್ಟನಿಗ್ರಹ ವಿಶಿಷ್ಟಪ್ರತಿಪಾಟನದಿಂ**
> **ಪರಿಪಾಳಿಸುತ್ತಮಿರೆ ॥**

**ಕರ್ಪರಸ (ಕ್ರಿ.ಶ.೧೦೮೪)**

ಅವಿಭಜತ ಧಾರವಾಡ ಜಿಲ್ಲೆಯ, (ಇಂದಿನ ಗದಗ ಜಿಲ್ಲೆ) ನರಗುಂದ ತಾಲೂಕಿನ, ಹದಲಿ ಗ್ರಾಮದ[೬೮] ಶಾಸನಕವಿ. ಕರ್ಪರಸ ಈತನ ಬಗ್ಗೆ ಶಾಸನದ ಕೊನೆಗೆ ಉಕ್ತವಾದ 'ಶ್ರೀಮನ್ಮಹಾಸಂಧಿವಿಗ್ರಹಿ ದಂಡನಾಯಕಂ ಕಾಳಿದಾಸಭಟ್ಟರಳಿಯಂ ಕವಿತಾಮನೋಹರಂ ಕವಿದಿಳರ 'ಕರ್ಪರಸಂ' ಎಂಬ ವಾಕ್ಯದಿಂದ ತಿಳಿದುಬರುತ್ತದೆ. ಶಾಸನದ ಕಾಲ ಕ್ರಿ.ಶ. ೧೦೮೪. ಈತ ಬ್ರಾಹ್ಮಣ ಕವಿಯಾಗಿದ್ದು ತಂದೆ ಚಂದ್ರ, ತಾಯಿ ಚಾಮಾಂಬಿಕೆ, ಮಾವ ಕಾಳಿದಾಸಭಟ್ಟ ಎಂಬ ವಿಷಯಗಳು ಈ ಕೆಳಗಿನ ವೃತ್ತದಿಂದ ತಿಳಿದುಬರುವುದು.

> **ಜನಕಂ ವಿಪ್ರಕುಲಾಂಬರದ್ಯುಮಣಿ ಚಂದ್ರಂ ತಾಯ್ತುದಾಚಾರವ**
> **ರ್ತಿನಿ ಚಾಮಾಂಬಿಕೆ ನಿರ್ಮಲೋರ್ಜಿತಯಶಂ ಶ್ರೀಕಾಳಿದಾಸಂ ಧರಾ**
> **ವಿನುತಂ ಮಾಮನುಮಾವರಂ ಸಕಲಲೋಕಾರಾಧ್ಯನಾರಾಧ್ಯನೆಂ**
> **ದು ನಿತಾಂತಂ ಧರೆ ಬಣ್ಣಿಕುಂ ಬುಧಸಮೂಹಕ್ಕರ್ಪಣಂ ಕರ್ಪನಂ ॥**

'ಕವಿತಾಮನೋಹರ' ಎಂಬ ಬಿರುದಾಂಕಿತನಾದ ಕರ್ಪರಸನು 'ಮದನತಿಲಕ' ಕಾವ್ಯದ ಕರ್ತೃವಾದ ಚಂದ್ರರಾಜನ ಪುತ್ರನೆಂದು ಆರ್. ನರಸಿಂಹಾಚಾರ್ ಅವರು ಗುರುತಿಸಿದ್ದಾರೆ. ಈ ಶಾಸನದಲ್ಲಿ ಜ್ಞಾನಶಕ್ತಿಪಂಡಿತರು ಹದ್ಲಿ ಎಂಬ ಅಗ್ರಹಾರವನ್ನು ೪೨೦ ಬ್ರಾಹ್ಮಣರಿಂದ ಕೊಂಡು ಗವಱೇಶ್ವರದೇವರಿಗೆ ದತ್ತಿ ಬಿಟ್ಟ ವಿಷಯ ಉಲ್ಲೇಖವಾಗಿದೆ.

ಹದಳಿಯ ಬ್ರಾಹ್ಮಣರನ್ನು ವರ್ಣಿಸುವ ಪದ್ಯ:

**ಶರಣೆನೆ ಕಾವರೀವರೆರೆದರ್ಥಿಗೆ ವಿಪ್ರಕುಲಪ್ರದೀಪರೀ**
**ಶ್ವರಚರಣಾಬ್ಜಭೃಂಗರಧಿಕರ್ ಸಲೆ ಧರ್ಮದ ಮೇರುಗಳ್ ದಿಶಾಂ**
**ತರಯಶರುತ್ತಮರ್ ಗುಣಿಗಣಾಗ್ರಣಿಗಳ್ ಸರಸೀಜಜಾತನೊಳ್**
**ದೊರೆಯೆನೆ ಲೋಕದೊಳ್ ನೆಗೞ್ದ ಪಟ್ಟಿಲ ಸದ್ವಿಜರೇಂ ಕೃತಾರ್ಥರೋ ॥**

ಜ್ಞಾನಶಕ್ತಿ ಪಂಡಿತನ ಹಿರಿಮೆಯನ್ನು ವರ್ಣಿಸುವ ಪದ್ಯ ಹೀಗಿದೆ:

**ವರವೇದಾಗಮಶಾಸ್ತ್ರದ**
**ಪರಿಣತಿಯೊಳಜಂಗೆ ತಾಮೆ ದೊರೆ ಪದ್ಮಭವಂ**
**ದೊರೆ ತಮಗೆ ಪಱರೊಳಾವನೊ**
**ದೊರೆ ವಿಪ್ರಕುಲಪ್ರದೀಪರೊಳ್ ವಸುಮತಿಯೊಳ್ ॥**

**ದಾಮರಾಜ (ಕ್ರಿ.ಶ.೧೧೦೮)**

ಈತನು ಶಿವಮೊಗ್ಗ ಜಿಲ್ಲೆಯ, ಶಿವಮೊಗ್ಗ ತಾಲೂಕಿನ; ತಟ್ಟೆಕೆರೆ[೬೯] ಶಾಸನವನ್ನು ಬರೆದಿರುವನೆಂದು ಆ ಶಾಸನದ ಕೊನೆಯ ಭಾಗದಲ್ಲಿ "ಸಂಧಿವಿಗ್ರಹಿ ದಾಮರಾಜಂ ಸಾಸನಗಬ್ಬಮಂ ಪೇೞ್ದು ಬರೆದಂ" ಎಂಬ ವಾಕ್ಯದಿಂದ ತಿಳಿದುಬರುತ್ತದೆ. ಈತ ಜೈನಕವಿ. ಯಾರಲ್ಲಿ ಸಂಧಿವಿಗ್ರಹಿಯಾಗಿದ್ದನೆಂಬುದು ತಿಳಿಯುವುದಿಲ್ಲ.

ಚಾಲುಕ್ಯರಾಜ ವಿಕ್ರಮಾದಿತ್ಯನ ಸಾಮಂತ ಗಂಗಪೆರ್ಮಾನಡಿಯ ಮಹಾಪ್ರಧಾನ ಹೆಗ್ಗಡೆ ನೊಕ್ಕಯ್ಯನು ಬಸದಿಗಳನ್ನು ಕಟ್ಟಿಸಿದಂತೆಯೂ ಈ ಬಸದಿಗಳಿಗಾಗಿ ಗಂಗಪೆರ್ಮಾನಡಿ ದತ್ತಿ ಬಿಟ್ಟಂತೆಯೂ ಈ ಶಾಸನದಲ್ಲಿ ಕಂಡುಬಂದಿದೆ. ಈ ಶಾಸನದ ಕಾಲ ಕ್ರಿ.ಶ. ೧೧೦೮.

**ಗಂಗಪೆರ್ಮಾನಡಿಯ ಪ್ರಶಂಸೆ ಈ ಕೆಳಗಿನ ವೃತ್ತದಲ್ಲಿ ವ್ಯಕ್ತವಾಗಿದೆ :**

**ನುಡಿದುದೆ ನನ್ನಿ ಮಾಡಿದುದೆ ಶಾಸನಮಿತ್ತುದೆ ರಾಮರೇಸು ಮಾ**
**ರ್ಪಡಿದುದೆ ವಜ್ರಲೇಪಸಮುಱದೀೞ್ದುದೆ ಮೃತ್ಯು ಪರೋಪಕಾರದೊಳ್**
**ನಡೆದುದೆ ಬಟ್ಟೆ ಷಡ್ಗುಣಮೇ ಮೆಯ್ಯನೆ ಧರ್ಮದೊಳೊಂದಿ ನಿನ್ನವೋಲ್**
**ನಡೆವ ನೃಪೇಂದ್ರನಾವನಖಿಳಾವನಿಯೊಳ್ ಕಲಿಗಂಗ ಭೂಪತೀ ॥**

**ಪೆರ್ಗ್ಗಡೆ ನೊಕ್ಕಯ್ಯನ ಗುಣದ ಹಿರಿಮೆಗಳನ್ನು ಹೀಗೆ ಕಾಣಬಹುದು :**

> **ಪೆರ್ಗಡೆತನಮಂ ಬಲ್ಲರ್**
> **ಖಟ್ಗಿಮನಣಮಱಿಯರುಟಿದಮಾತ್ಯರ್ ನೊಕ್ಕಂ**
> **ಪೆರ್ಗಡೆ ಗಂಗರ ಮನೆಯೊಳ್**
> **ಮಾರ್ಗೆಡೆ ಸಂಗರದ ಮೊನೆಯೊಳೆನೆ ಮೆಚ್ಚದರಾರ್ ॥**

ಈ ಮೇಲಿನ ಪದ್ಯಗಳನ್ನು ಗಮನಿಸಿದರೆ ಈತ ಒಳ್ಳೆಯ ಕವಿಯಾಗಿದ್ದನೆಂದು ಹೇಳಬಹುದು. ಕೊನೆಯ 'ಕಂದದ' ಪ್ರಾಸಸ್ಥಾನ ಛಂದಸ್ಸಿನ ದೃಷ್ಟಿಯಿಂದ ಕುತೂಹಲಕಾರಿಯಾಗಿದೆ.

**ಮಾಳಪಯ್ಯ (ಕ್ರಿ.ಶ. ೧೦೮೫)**

ಧಾರವಾಡ ಜಿಲ್ಲೆಯ, ಕರ್ಜಗಿಯ ಕೊಳೂರು ಶಾಸನವನ್ನು[೭೦] 'ಮಾಳಪಯ್ಯ' ಎಂಬ ಶಾಸನಕವಿ ರಚಿಸಿದ್ದಾನೆ. ೬ನೇ ವಿಕ್ರಮಾದಿತ್ಯ (ತ್ರಿಭುವನಮಲ್ಲ)ನ ಕಾಲದ ಈ ಒಂದು ವೀರಗಲ್ಲು ಬಹುಭಾಗ ನಶಿಸಿಹೋಗಿದೆ. ಈ ಶಾಸನದಲ್ಲಿ ಒಟ್ಟು ೩೨ ಸಾಲುಗಳಿದ್ದು ೧ ರಿಂದ ೩ ರವರೆಗೆ ೨೮ ರಿಂದ ೩೧ ರವರೆಗೆ ಸಾಲುಗಳು ಪೂರ್ಣ ನಷ್ಟವಾಗಿವೆ. ಶ್ರೀಮತ್ ತ್ರಿಭುವನಮಲ್ಲದೇವರು ಸುಖಸಂಕಥಾ ವಿನೋದದಿಂದ ರಾಜ್ಯವನ್ನು ಆಳುತ್ತಿದ್ದಾಗ ಹನ್ನೆರಡು ಬಾಡವನ್ನು ರಾಜಗುರು ದೇವರೂ 'ಬಾಸವುರನೂರನಾಲ್ವತ್ತನ್ನು' ಕಲಿಯಮ್ಮರಸರು ಪಾಲಿಸುತ್ತಿದ್ದರು. ಆಗ ಗಾವುಂಡರೂ ನೀತಿವಿದರೂ ವೀರರೂ ಎನಿಸಿದ್ದ ಕೊಳೂರಿನ ಬಸವ ಕೇತಮಲ್ಲರು ಎಂಬುವವರಿದ್ದು ಸ್ವಾಮಿಕಾರ್ಯದಲ್ಲಿ ಸ್ವಾಮಿನಿಷ್ಠೆಯನ್ನು ಪರಿಪಾಲಿಸಲು ತಮ್ಮ ತಲೆಕೊಟ್ಟರು; ಅದಕ್ಕಾಗಿ ಈ ವೀರಗಲ್ಲನ್ನು ನಿಲ್ಲಿಸಲಾಗಿದೆ.

**ಅಳಿದುಳಿದ ಭಾಗಗಳಿಂದ ಕೆಲಸಾಲುಗಳನ್ನು ಹೀಗೆ ನೋಡಬಹುದು.**

> **.....ಬಸವ ಕೇತಮಲ್ಲ ..... ಕೊಳ್ಗರೊಳ್ ಗಾವುಂಡಗೆಯ್ದುಡು ಸುಖದಿನಿರಲ್**
> **ಪತಿಕಾಗ...ವರ್ ಮೆಚ್ಚಿ ಕಲಿಯಮ್ಮರಸಮ್ ದಯೆಯಿಯೆನಗೆ ತಲೆಗೊಟ್ಟ...**
> **ಎಂದು ಕಲಿಯಮ್ಮರಸಂ ಮನಮೊಸೆದೆರಡುಂ ಕೇರಿಯ ಮನೆ... ಇತ್ತು**
> **ವಿಗ್ರಹದೊಳ್ ತಲೆಗೊಟ್ಟನುಗ್ರಬಳಂ ಬಸವ .... ಗ್ರಹದಿಂದಂ**
> **ಸಮಸ್ತಪರಿಗ್ರಹಂ .... ಅದು ಪಿರಿದುಂ ಪುಣ್ಯಾರ್ಥದಾಪೇಕ್ಷತೆಯಿಂದ**
> **ರಿದು ನಡೆಗೆ ನಡೆವವರೆಲ್ಲ.**

**ಕಾಶ್ಮೀರಭಟ್ಟ ಮಲ್ಲಯ ಪಂಡಿತ (ಕ್ರಿ.ಶ.೧೦೮೭)**

ಬಳ್ಳಾರಿಯ, ಹರಪ್ಪನಹಳ್ಳಿ ತಾಲೂಕಿನ, ನೀಲಗುಂದ ಗ್ರಾಮದ ಶಾಸನವನ್ನು[೭೧] 'ಕಾಶ್ಮೀರಭಟ್ಟ ಮಲ್ಲಯ ಪಂಡಿತ' ಚಾಲುಕ್ಯ ರಾಜ ತ್ರಿಭುವನಮಲ್ಲನು ಕಲ್ಯಾಣಪುರದ ನೆಲೆವೀಡಿನಿಂದ ಆಳುತ್ತಿದ್ದಾಗ ಇವನ ಮಹಾಮಂಡಳೇಶ್ವರ ಪಲಿತಪಾಂಡ್ಯನು ಬ್ರಾಹ್ಮಣರಿಗೆ ನೀರ್ಗುಂದವನ್ನು ದಾನ ನೀಡುತ್ತಾನೆ. ಈ ಊರು ಕೋಗಳಿ 'ಬಿಕ್ಕಿಗ ೭೦' ರಲ್ಲಿತ್ತು. ರಾಜನು ಬನವಾಸಿಯಲ್ಲಿ ತಂಗಿದ್ದಾಗ ಅವನ ಸರ್ವಾಧ್ಯಕ್ಷನಾದ ಪಂಡಿತ ಪಾಂಡ್ಯನ ಮಗ ರಾಯಪಾಂಡ್ಯನ ಕೋರಿಕೆಯಂತೆ. ಕೃಷ್ಣಪಲ್ಲಿಕವನ್ನು ಬ್ರಾಹ್ಮಣರಿಗೆ ದಾನ ನೀಡಿದನು. ಅಲ್ಲದೆ ಆದಿತ್ಯ ಗ್ರಾಮಕ್ಕೆ ತೆರಿಗೆಯನ್ನು ಮಾನ್ಯ ಮಾಡುತ್ತಾನೆ. ಶಾಸನದ ಕೊನೆಯಲ್ಲಿ ಕವಿ ಆರ್ಯಸ್ವಾಮಿಯ ಮಗನಾದ ಕಾಶ್ಮೀರಭಟ್ಟ ಮಲ್ಲಯಪಂಡಿತನು ಬರೆದಂತೆಯೂ, ದಂಡನಾಯಕ ಕಾಲಿದಾಸನ ಮಗನಾದ ವಿಕ್ರಮಾದಿತ್ಯನು ಇದನ್ನು ಅನುಮೋದಿಸಿದಂತೆಯೂ ಉಲ್ಲೇಖವಿದೆ.

**ಆರಂಭದಲ್ಲಿ ಶ್ಲೋಕಪದ್ಯವೊಂದು ಹೀಗಿದೆ :**

**ಓಂ ಜಯತ್ಯಾವಿಷ್ಕೃತಂ ವಿಷ್ಣೋರ್ವಾರಾಹಂ ಕ್ಷೋಭಿತಾರ್ಣ್ಣವಂ**
**ದಕ್ಷಿಣೋನ್ನತದಂಷ್ಟ್ರಾಗ್ರವಿಶ್ರಾಂತ ಭುವನಂ ವಪುಃ**
**ಶ್ರೀಯುಮಪಹರತಾದ್ವಃ ಶ್ರೀಪತಿ ಕ್ರೋಡರೂಪೋ**
**ವಿಕಟ ವಿಶದಂಷ್ಟ್ರಾಪ್ರಾಂತವಿಶ್ರಾಂತಿಭಾಜಂ ।**
**ಅವಹದದಯ ದಂಷ್ಟ್ರಾಕೃಷ್ಟ ವಿಸ್ಪಷ್ಟಕಾಂಡ**
**ಪ್ರತನುವಿಸಜಟಾಗ್ರಗ್ರಂಥಿವದ್ಯೋ ದಾರಿತಂ ।**

**ಕೋವರಾಜ (ಕ್ರಿ.ಶ. ೧೦೮೮)**

ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ, ಗುತ್ತಿ ತಾಲೂಕಿನ, ಕೋವಕೊಂಡ್ಲ ಗ್ರಾಮದ[೭೨] ಶಾಸನವನ್ನು ಕೋವರಾಜ ಎಂಬುವವನು ರಚಿಸಿದ್ದಾನೆ. ಚಾಲುಕ್ಯದೊರೆ ತ್ರಿಭುವನಮಲ್ಲದೇವ ಹಾಗೂ ಅವನ ಮಹಾಮಂಡಳೇಶ್ವರ ಬಲ್ಲಯಚೋಳ ಮಹಾರಾಜನ (ಸಿಂದವಾಡಿ ೧೦೦೦ವನ್ನು ಆಳುತ್ತಿದ್ದ) ಆಳ್ವಿಕೆಯ ಶಾಸನ ಇದು. ಮಹಾಮಂಡಳೇಶ್ವರ ಬಾಣ ಕುಲಾದಿತ್ಯ ಹಾಂಬುಳಿಗೆಯ ಚಿಕ್ಕರಸನು ಕೊಟ್ಟ ಭೂಮಿದತ್ತಿಯನ್ನು ಇದು ಹೇಳುತ್ತದೆ. ಬಹುಶಃ ಈ ದತ್ತಿಯನ್ನು ಕಾರ್ಯಗತಗೊಳಿಸಿದವನು ಕೊಂಡಕುಂದೆಯ ಚಂದರಸ (ಮಹಾಸಾಮಂತ)

"ಸ್ವಸ್ತಿ ಚರಣ ಸರೋರುಹ ವಿಹತ
ವಿಳೋಚನ ತ್ರಿಲೋಚನ ಪ್ರಮುಖಾಖಿಳ
ಪ್ರೀತೀಸ್ವರ ಕಾರಿತ ಕಾವೇರಿತೀರ ಕಲಿಕಾಲಕುಲ
ರತ್ನ ಪ್ರದೀಪಾಹಿತ ಕುಮರಾಂ
ಕುಸ ಶ್ರೀಮನ್ಮಹಾಮಣ್ಡಳೇಶ್ವರ
ಬಲ್ಲಯಚೋಳ ಮಹಾಜನರು ಸಿಂದವಾಡಿ
ಸಾಸಿರಮುಮಂ ಸುಖಸಂಕಥಾವಿನೊದದಿಂ
ರಾಜ್ಯಂಗೆಯ್ಯುತ್ತಮಿರೆ ॥

ಮಹಾಮಂಡಳೇಶ್ವರ ವೈರಿಮದನ
ಮಹೇಶ್ವರಂ ಸಕಳಜಗತ್ತ್ರಯಾಭಿವನ್ದಿತ
ಸುರಾಸುರಾಧೀಸ ಪರಮೇಶ್ವರ ಪ್ರತೀಹಾರಿ ।
ಕ್ರಿತ ಮಹಾಬಲಿ ಕುಲೋದ್ಭವ ಕೃಷ್ಣ
ಧ್ವಜವಿರಾಜಿತ ಪೈಸಾಚಿಕ ಪಟಹ
ಭೂಷಣ ವ್ರಿಷಭಲಾಂಛನ ನಂದಗಿರಿನಾಥ
ಪಟುಟಿ ಪುರವರೇಶ್ವರ ॥

ಎಂದು ಮುಂತಾಗಿ ವರ್ಣಿಸಲಾಗಿದೆ.

**ದೇಪಣಭಟ್ಟ ಕ್ರಿ.ಶ.೧೦೯೦**

ಆಂಧ್ರಪ್ರದೇಶದ ವರಂಗಲ್ ಜಿಲ್ಲೆಯ, ವರಂಗಲ್ ತಾಲೂಕಿನ, ಕಾಜಿಪೇಟ್ ಗ್ರಾಮದ ಶಾಸನವನ್ನು[೭೩] ಇದರಲ್ಲಿ ಚಾಲುಕ್ಯದೊರೆ ತ್ರಿಭುವನಮಲ್ಲದೇವ ಮತ್ತು ಅವನ ಮಹಾಮಂಡಳೇಶ್ವರ ಕಾಕತಿಯ ಬೇತರಸನ ಆಳ್ವಿಕೆಯನ್ನು ಹೇಳಿದೆ. ಇದರಲ್ಲಿ ಬೇತರಸನ ವಂಶಾವಳಿಯನ್ನು ಹೇಳಿದೆ. ಈ ಬೇತರಸನು ಅನ್ಮಕುಂಡಪುರದ ನೈರುತ್ಯ ದಿಕ್ಕಿನಲ್ಲಿರುವ ಶಿವಪುರವನ್ನು ಮಾಡಿಸಿದನು. ಶ್ರೀಪರ್ವತದ ಮಲ್ಲಿಕಾರ್ಜುನ ಶಿಲಾಮಠದ ಪ್ರಸಿದ್ಧ ಆಚಾರ್ಯ ಪರ್ವತಾವಳಿಯ ಕಾಳಾಮುಖ ಮುನಿ ರಾಮೇಶ್ವರ ಪಂಡಿತರ ಕಾಲನ್ನು ತೊಳೆದು ಅವರ ಶಿಷ್ಯರಿಗೆ ಶಿವಪುರವನ್ನು ಅದರ ಉತ್ಪನ್ನ ನಿಧಿ, ನಿಧಾನ, ಶುಲ್ಕ, ದಂಡ, ಧನ, ಉಪಭೋಗಗಳನ್ನು ದತ್ತಿಯಾಗಿ ನೀಡಿದುದನ್ನು ಇಲ್ಲಿ ದಾಖಲಿಸಿದೆ. ದತ್ತಿಯನ್ನು ಕೊಟ್ಟ ಬೇತರಸನ ಸುಪುತ್ರ ಮಹಾಮಂಡಳೇಶ್ವರ ದುಗ್ಗನೃಪತಿ. ತ್ರಿಭುವನಮಲ್ಲನು ಈ ಶಾಸನವನ್ನು ಬಹುಧಾನ್ಯ ಸಂವತ್ಸರ ಉತ್ತರಾಯಣ ಸಂಕ್ರಾಂತಿಯಂದು ಹಾಕಿಸುತ್ತಾನೆ. ಆನ್ಮಕೊಂಡಪುರದ ನಕರರು ಚೇತೇಶ್ವರ ದೇವರ ನಂದಾದೀವಿಗೆಗೆ ನಿತ್ಯ ಒಂದು ಮಾನ ಎಣ್ಣೆಯನ್ನು ಸಲ್ಲಿಸಬೇಕೆಂದು ಇದರಲ್ಲಿ ಹೇಳಿದೆ. ಶಾಸನವನ್ನು ರಚಿಸಿದವನು ಒಂಟಿಕೊಂಡ (ಓರುಂಗಲ್ಲು) ಪ್ರಭುವಾಗಿದ್ದ

ದೇಪಣಭಟ್ಟ ಹೆಸರು ೩೪ನೇ ಸಾಲಿನಲ್ಲಿ "ಒಂಟಿಕೊಣ್ಡ ಪ್ರಭೋರ್ದೇಪಣಭಟ್ಟಸ್ಯ ಮಹಾಕವೇಃ ಕಾವ್ಯಮಿದಂ" ಎಂದು ಉಲ್ಲೇಖಿಸಿದೆ.

**"ಸ್ವಸ್ತಿ ಸಮಸ್ತ ಭುವನಾಶ್ರಯ**
**ಶ್ರೀ ಪೃಥ್ವೀವಲ್ಲಭ ಮಹಾರಾಜಾ**
**ಧಿರಾಜ ಪರಮೇಶ್ವರ ಪರಮ**
**ಭಟ್ಟಾರಕ ಸತ್ಯಾಶ್ರಯ ಕುಳತಿಳಕ**
**ಚಾಳುಕ್ಯಾಭರಣ ಶ್ರೀಮತ್ರಿಭುವನ**
**ಮಲ್ಲದೇವರ ವಿಜಯರಾಜ್ಯಾಭ್ಯುದಯ**
**ಮಾಚಂದ್ರಾರ್ಕ್ಕತಾರಂ ಸಲುತ್ತಮಿರೆ ॥**

**ತತ್ಪಾದ ಪದ್ಮೋಪಜೀವಿ ಸಮಧಿಗತ**
**ಪಂಚಮಹಾಶಬ್ದ ಮಹಾಮಣ್ಡಳೇಶ್ವರ**
**ನನ್ಮಕೊಣ್ಡಪುರವರೇಶ್ವರಂ ಪರಮ**
**ಮಾಹೇಶ್ವರಂ ಪತಿಹಿತ ಚರಿತ**
**ವಿನಯವಿಭೂಷಣಂ ಶ್ರೀ ಮನ್ಮಹಾಮಂಡಳೇಶ್ವರ**
**ಕಾಕತಿಯ ಚೇತರಿಸನನ್ಮಕೊಣ್ಡಪುರದ**
**ನೆಂತಿ ದಿಗ್ಭಾಗದೊಳು"**

ಕವಿಯ ಶಾಸನ ಕೌಶಲ್ಯಕ್ಕೆ ಪ್ರತಿಭೆಗೆ ಈ ಮೇಲಿನ ಸಾಲುಗಳು ಉದಾಹರಣೆಯಾಗಿದೆ.

**ಮಾಧವಭಟ್ಟ (ಕ್ರಿ.ಶ. ೧೦೯೧)**

ಅವಿಭಜಿತ ಧಾರವಾಡ ಜಿಲ್ಲೆಯ, ಗದಗ ತಾಲೂಕಿನ, ಸೊರಟೂರು[೭೪] ಗ್ರಾಮದ ಕಲ್ಲೇಶ್ವರ ದೇವರ ಎದುರು ನಿಂತಿರುವ ಶಿಲಾಶಾಸನವನ್ನು ರಚಿಸಿದ ಕವಿ ಮಾಧವಭಟ್ಟ. ಈ ಶಾಸನದ ಕಾಲ ಕ್ರಿ.ಶ. ೧೦೯೧ ಆಗಿದೆ.

ಈ ಶಾಸನ ಪದ್ಯವೊಂದರಲ್ಲಿ ಕವಿಯು ತನ್ನ ಬಗ್ಗೆ

**ಕೊಟ್ಟ ಕುಱುಪಿಂಗೆ ಬಗೆ ನೇ**
**ರ್ವಟ್ಟಿರೆ ರಸಭಾವಮರ್ಥ ಗೌರವದೊಳೊಡಂ**
**ಬಟ್ಟಿರೆ ಪೇಳ್ದಂ ಮಾಧವ**
**ಭಟ್ಟಂ ವಾಕ್ ಶ್ರೀಲಲಾಟಮಣಿದುಮಯ ಪಟ್ಟಂ ॥**

"ಈ ಚಿಕ್ಕ ಶಾಸನದ ಮಟ್ಟಿಗೆ ನೋಡಿದರೆ ಕವಿ ಹೀಗೆ ಹೇಳಿಕೊಂಡುದು ಹೆಚ್ಚೆಂದೇ ತೋರುತ್ತದೆ. ಆದರೆ ಒಳ್ಳೆಯ ಕಾವ್ಯದ ಲಕ್ಷಣಗಳೇನು ಎಂಬುದನ್ನು ಬಲ್ಲವನಾಗಿ ಚಂದವಾಗಿ

ತಿಳಿಸಿದ್ದಾನೆ. ಇವನು ಸಾಕಷ್ಟು ಓದಿಕೊಂಡವನೂ ಭಾಷಾಜ್ಞಾನ ಚೆನ್ನಾಗಿ ಉಳ್ಳವನೂ ಆಗಿದ್ದನೆಂಬುದರಲ್ಲಿ ಸಂದೇಹವಿಲ್ಲ.[೭೫]

ಮಾಧವಭಟ್ಟನ ಶಾಸನದ ಚಿಕ್ಕ ಗದ್ಯವನ್ನು ಉಳಿದ ಮೂರು ಪದ್ಯಗಳನ್ನು ಇಲ್ಲಿ ಕೊಟ್ಟಿದೆ.

**ಗದ್ಯಭಾಗಕ್ಕೆ ಉದಾಹರಣೆ :**

**ಸ್ವಸ್ತ್ಯನಂತಾನಂತಕಾಲಾಭ್ಯಂತರ ತಮತಮಂಧಕಾರ ವಿನಿರ್ಗತ**
**ಮಹಾಶಕ್ತಿಸ್ವರೂಪಸಮೂದ್ಭುತೆ, ತ್ರಿಜಗದ್ವಾಪ್ತಕೀರ್ತಿ ಪರಮಾದಾರಿಕ**
**ಮಹಾಮೂರ್ತಿ, ವಿಶಾಳಾಧಿಸಪ್ತಶತತೀರ್ಥ ಪವಿತ್ರಕೃತೋತ್ತಮೆ,**
**ಶ್ರೀಮತ್ಕೋಲ್ಲಾಪುರದ ಮಹಾಲಕ್ಷ್ಮೀದೇವಿಯ ಸೊರಟವುರಮಂ ದುಷ್ಟ**
**ನಿಗ್ರಹ ವಿಶಿಷ್ಟ ಪರಿಪಾಳನಯಿನಾಳ್ದು ಪರಿಕ್ಷಿಸುತ್ತಮಿರೆ .....**
**ಕ್ರಮದಿ ದೇವಣಸೆಟ್ಟಿಗಂ ಪತಿಹಿತಪ್ರಖ್ಯಾತೆ ಸಾಯಬ್ಬೆಗಂ**
**ಕ್ಷಮೆಯಂ ತಾಳ್ದಿದ ಜಕ್ಕಿಯಬ್ಬೆ ಸೋಱಿಟೂರಿನನ್ನೂರ್ಬರಂ ಬೇಡಿಕೊಂ**
**ಡು ಮನೋರಾಗದೆ ಪಾದಪೂಜೆವೆರಸಿಂತೀ ಸತ್ರಮಂ ಮಾಡಿದಳ್ ॥**

ಈ ಶಾಸನದಲ್ಲಿ ಜಕ್ಕಿಯಬ್ಬೆ ಎಂಬುವವಳು ಸೊರಟೂರಿನ ಮಹಾಲಕ್ಷ್ಮೀ ದೇವಾಲಯಕ್ಕೆ ಆ ಊರಿನ ಪ್ರಮುಖರಿಂದ ಸ್ವಲ್ಪ ಭೂಮಿಯನ್ನು ಪಡೆದು ಬ್ರಾಹ್ಮಣರಿಗೆ ಅನ್ನದಾನ ಮಾಡಲೆಂದು ಛತ್ರಕಟ್ಟಲು ಉಪಯೋಗಿಸಿದ್ದಳೆಂದು ತಿಳಿದುಬರುತ್ತದೆ. ಶಾಸನ ಕವಿ ಮಾಧವಭಟ್ಟನು ಜಕ್ಕಿಯಬ್ಬೆಯ ದಾನಕಾರ್ಯವನ್ನು ಕಂದಪದ್ಯದಲ್ಲಿ ಹೀಗೆ ವರ್ಣಿಸಿದ್ದಾನೆ.

**ಉತ್ತಮರಿನ್ನೂರ್ಬರು ಮೊಸೆ**
**ದಿತ್ತಡೆ ಕೈಕೊಂಡು ಪಾದಪೂಜಾವಿಧಿಯಂ**
**ಪೊತ್ತಾಱು ಮತ್ತರುಂ ಸ್ವಕು**
**ಳೋತ್ತಮೆ ಸತಿ ಜಕ್ಕಿಯಬ್ಬೆ ಸತ್ರಕ್ಕಿತ್ತಳ್ ॥**

**ದಾನದೊಳನ್ನಮೆ ಸಾರಂ**
**ದೀನಾನಾಥರ್ಗೆ ತುಷ್ಟಿದಾನಮೆನುತ್ತಂ**
**ತಾನಱಿದು ಜಕ್ಕಿಯಬ್ಬೆ ಯ**
**ಶೋನಿಧಿ ಸತ್ರಕ್ಕೆ ಭೂಮಿದಾನಮನಿತ್ತಳ್ ॥**

**ನಾಗಾರ್ಜುನ ಪಂಡಿತ (ಕ್ರಿ.ಶ. ೧೦೯೪)**

ಗುಲಬರ್ಗಾ ಜಿಲ್ಲೆಯ, ಇಂಗಳಗಿ ಗ್ರಾಮದ ಕ್ರಿ.ಶ. ೧೦೯೪ರ ಶಾಸನ ಹಾಗೂ ಧಾರವಾಡ ತಾಲೂಕಿನ ಮುಳಗುಂದದ ಕ್ರಿ.ಶ. ೧೧೨೫ರ ಶಾಸನವನ್ನು 'ನಾಗಾರ್ಜುನ ಪಂಡಿತನು' ರಚಿಸಿದ್ದಾನೆ. ಈತನು ಇಂಗಳಗಿಯ[೭೬] ಶಾಸನದಲ್ಲಿ "ವಾಗ್ವಧೂಮಂಡನಂ ಜನಪದಾಂಭೋಜಭೃಂಗಂ ನಾಗಾರ್ಜುನ ಪಂಡಿತಂ ಬರೆದಂ" ಎಂಬ ಶಾಸನಾಂತ್ಯ ಗದ್ಯ

ವಾಕ್ಯದಿಂದ ಈತ ಶಾಸನ ಕವಿಯೆಂದು ತಿಳಿದುಬರುವುದು. ೬ನೇ ವಿಕ್ರಮಾದಿತ್ಯನ ರಾಣಿ ಜಾಕಲದೇವಿಯು ಇಂಗುಳಿಗೆಯಲ್ಲಿ ಜಿನ ಗೇಹವನ್ನು ಕಟ್ಟಿಸಿ ಅಲ್ಲಿ ಮುಹುಮಾಣಿಕ್ಯ ಜಿನ ದೇವರ ಬಿಂಬವನ್ನು ಪ್ರತಿಷ್ಠಾಪಿಸಿದ್ದನ್ನು ಇಂದ್ರಸೇನ ಭಟ್ಟಾರಕರಿಗೆ ಕಾಲುತೊಳೆದು ಕ್ಷೇತ್ರದಾನ ಮಾಡಿರುವುದನ್ನು ಹೇಳುವುದು ಶಾಸನದ ವಸ್ತು. ಕವಿಯ ಕಾವ್ಯಶೈಲಿಗೆ ಉದಾಹರಣೆಗಳು ಇಂತಿವೆ.

**ಜಾಕಲದೇವಿಯ ವರ್ಣನೆ**

**ಜನಕಜೆಯಂತೆ ಸಜ್ಜನಜನಸ್ತುತೆ ಪಾರ್ವತಿಯಂತೆ ಜೀವಿತೇ**
**ಶನೋಳವಿಕಲ್ಪಭಾವೆ. ಧರೆಯಂತೆ ದೃತಕ್ಷಮೆ ರಂಭೆಯಂತೆ ರೂ**
**ಪಿನ ನೆಲೆ ಪೆಂಪುವೆತ್ತ ಮರಧೇನುವಿನಂತ ನಿಮಿತ್ತದಾನಿ ಕಾ**
**ಮನ ಸರಲಂತಿರೆಯ್ದೆ ಪರಿಭಾವಿಸೆ ಜಾಕಲದೇವಿ ಧಾತ್ರಿಯೊಳ್ ॥**

**ಜಿನ ಗೇಹ ನಿರ್ಮಾಣದ ವರ್ಣನೆ :**

**ಜಿನಬಿಂಬಂ ಪ್ರತಿಬಿಂಬಮಿಲ್ಲೆನಿಪ ಚೆಲ್ವಂ ತಾಳ್ದಿತೀದೆಯ್ವಮಂ**
**ನಿನಗೆಂತು ಕುಲದೆಯ್ವಮಿ ಪ್ರತಿಮೆಯಂ ನಿನ್ನಾಳ್ಕೆಯೂರೊಳ್ ವಿನೇ**
**ಯನಿಕಾಮಂ ಬಗೆಗೊಳ್ವಿನಂ ನಿಲಿಸೆನಲ್ ಚಾಳುಕ್ಯ ಚಕ್ರೇಶ ಶಾ**
**ಸನದಿಂ ತಜ್ಜಿನಬಿಂಬಮಂ ನಿಲಿಸಿದಳ್ ತನ್ನೊಳ್ಪು ನಿಲ್ವನ್ನೆಗಂ ॥**

ಮುಳಗುಂದ ಶಾಸನವು ಸುಮಾರು ಐವತ್ತು ಪದ್ಯಗಳಿರುವ ಪುಟ್ಟ ಚಂಪೂಕಾವ್ಯ ಈ ಶಾಸನದಲ್ಲಿ 'ನಾಕಿರಾಜನ' ಆಳ್ವಿಕೆಯನ್ನು ಬಹುಚೆನ್ನಾಗಿ ಈ ವೃತ್ತದಲ್ಲಿ ಚಿತ್ರಿಸಿದೆ.

**ಅರಿಸಾಮಂತರ ರಕ್ತಮೆಂಬ ನವಸಂಧ್ಯಾರಾಗ ಮುರ್ಬೇಳೆಸಾ**
**ಕ್ಷರ ನೀರೇ ಜವನಕ್ಕೆ ಪೊರ್ದೆಹರುಷಂ ಶಿಷ್ಟೇಷ್ಟಚಕ್ರಾಂತ ಮಾ**
**ದರದಿಂ ಪೊಂದೆ ಮುಗುಂದಮೆಂಬುದಯ ಶೈಳಸ್ಥಾನದೊಳೇಜಮಾ**
**ಗಿರೆ ಚೆಲ್ವಾರುದು ನಾಕಿರಾಜಭುವೆಂಬಾದಿತ್ಯ ನಿತ್ಯೋದಯಂ**

ಈ ಮುಗುಂದದಲ್ಲಿಯೇ ನಾಕಿರಾಜ ಬರೆಸಿದ ಮತ್ತೊಂದು ಶಾಸನವಿದೆ. ಅದು ಅಪೂರ್ಣವಾಗಿದ್ದು ಕವಿಯ ಹೆಸರು ಸರಿಯಾಗಿ ತಿಳಿಯುವುದಿಲ್ಲ. ಮೊದಲಿನ ಮತ್ತು ಎರಡನೆಯ ಶಾಸನಗಳಿಗೆ ಅನೇಕ ರೀತಿಯಲ್ಲಿ ಹೋಲಿಕೆಯಿರುವುದರಿಂದ ಈ ಶಾಸನದ ಕರ್ತೃವೂ ನಾಗಾರ್ಜುನ ಪಂಡಿತನೇ ಇರಬೇಕೆಂದು ವಿದ್ವಾಂಸರು ಊಹಿಸಿದ್ದಾರೆ.[೭೭] ಇಂಗಳಗಿ ಮತ್ತು ಮುಗುಂದ ಶಾಸನಗಳಿಗಿರುವ ಕಾಲದ ವ್ಯತ್ಯಾಸ ೩೦ ವರ್ಷಗಳು. ಶಾಸನದ ಶೈಲಿಯ ಹಿನ್ನೆಲೆಯಲ್ಲಿ ನಾಗಾರ್ಜುನನೇ ಮೂರು ಶಾಸನಗಳ ಕರ್ತೃ ಎನ್ನಬಹುದು.

**ಸೋಮರಾಶಿ ಪಂಡಿತ (ಕ್ರಿ.ಶ. ೧೧೯೮–೯೯)**

ಹಾಸನ ಜಿಲ್ಲೆಯ, ಅರಸಿಕೇರೆ ತಾಲೂಕಿನ, ಬಾಗವಾಳು ಗ್ರಾಮದ ಶಾಸನ[೭೮]ವು ಕ್ರಿ.ಶ. ೧೧೯೮–೯೯ಕ್ಕೆ ಸೇರಿದೆ. ಹೊಯ್ಸಳ ದೊರೆ ವಿನಯಾದಿತ್ಯನ ಆಳ್ವಿಕೆಯಲ್ಲಿ ಬೀಚಗಾವುಂಡನು ಹಾಗೂ ಅವನ ಮಗನಾದ ಬಾಚಿಗಾವುಂಡ ಶಿವದೇವಾಲಯ ಪ್ರತಿಷ್ಠಾಪಿಸಿ ಅದಕ್ಕೆ ಭೂದಾನ ನೀಡಿದ ವಿವರವಿದೆ.

**ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಸ್ವರಂ**
**ಮತಿಪರೋಳುಗಣ್ಡ ಬಿನಯಾಯ್ತ ಹೊಯ್ಸಳದೇವರ ರಾಜ್ಯದಲು ಬಹುಧಾನ್ಯ**
**ಸಂವತ್ಸರದಲು ಕೊಮಾರವ್ರಿತ್ತಿಯ ಬಾಗೆವಾಳ ಪಟ್ಟವತ್ತ**
**ನದಕುಲತಿಲಕ ಪ್ರಜೆಮಜ್ಜೆಗಣ್ಡ ಗಡಿಯಂಕ ಕೇಸರಿ**
**ನಂಟರ ಸನ್ನಾಹಗಾವುಣ್ಡನ ಮಗ ಬೀಚಗಾವುಣ್ಡಂ ಮತ್ತಂ**
**ಬೀಚಗವುಣ್ಡನ ಮಗ ಬಾಚಿಗವುಣ್ಡನು ಈ ಸಿವಾಲೆಯವ**
**ಬೀಚಗೌಣ್ಡನೆತ್ತಿಸಿ ದೇವರ್ಗ್ಗೆ ಹಿರಿಯಕೆರೆಯ ಕೆಳಗೆ ಬಿಟ್ಟಗದ್ದೆ** ॥ ಎಂದಿದೆ.

**ದುಗ್ಗಿಮಯ್ಯ (ಕ್ರಿ.ಶ.೧೧೯೮)**

ಬಳ್ಳಾರಿ ಜಿಲ್ಲೆಯ, ಬಳ್ಳಾರಿ ತಾಲೂಕಿನ, ಕುಡಿತಿನಿ ಗ್ರಾಮದ ಶಾಸನವನ್ನು[೭೯] ಶಾಸನಕವಿ 'ದುಗ್ಗಿಮಯ್ಯ' ಎಂಬುವವನ್ನು ರಚಿಸಿದ್ದಾನೆ. ಶಾಸನದ ಕಾಲ ಕ್ರಿ.ಶ. ೧೧೯೮. ಇದು ಚಾಲುಕ್ಯ ದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯ ಕಾಲದ್ದಾಗಿದ್ದು ಮಹಾಪ್ರಧಾನ ದಂಡನಾಯಕ ಸೋಮೇಶ್ವರ ಭಟ್ಟೋಪಾಧ್ಯಾಯ ಹಾಗೂ ದಂಡನಾಯಕ ಮಹಾವಿಷ್ಣುವರಸ, ವಿಶ್ವರೂಪ ಬ್ರಹ್ಮಚಾರಿ, ನಾನಾದೇಶಿಜನ  ಮತ್ತು ಐದು ವರ್ಗಗಳು ಸೇರಿ ಎರಣಿಗ ಮಾದೋಜನ ಮಗ ಸಾವಿವೋಜ ಹಾಗೂ ಬೇಚೂಜನ ಮಗ ಚಿಕ್ಕಮಾದೋಜನು ಸ್ವಾಮಿದೇವರ ಲೊಕ್ಕಿನಾಣ್ಯವನ್ನು ನವಿಲಚ್ಚಿನ ನಾಣ್ಯವಾಗಿ ಅದೇ ತೂಕದಲ್ಲಿ ಪರಿವರ್ತಿಸಿ ಕೊಟ್ಟಾಗ ಅವರು ಸ್ವಾಮಿದೇವರಿಗೆ ವರ್ಷಕ್ಕೆ ೧೨ ಗದ್ಯಾಣವನ್ನು ಕೊಡುವಂತೆ  ಒಪ್ಪಂದ ಮಾಡಿಕೊಂಡರು. ಮಹಾ ವಿಷ್ಣುವರಸನು ಸ್ವಾಮಿದೇವರಿಗೆ ಪನ್ನಾಯದ ಸುಂಕವನ್ನು ದಾನವಾಗಿ ಬಿಟ್ಟನು. ಇದನ್ನು ಶಾಸನವು ಹೀಗೆ ಹೇಳಿದೆ.

**"ಸ್ವಸ್ತಿ  ಸಮಸ್ತಪ್ರಶಸ್ತಿ ಸಹಿತಂ ಶ್ರೀಮದಚ್ಚುಪನ್ನಾಯದಧಿಷ್ಠಾಯಕಂ**
**ಶ್ರೀಮದ್ದಣ್ಣನಾಯಕಂ ಮಹಾವಿಷ್ಣುವರಸರು ಶ್ರೀಸ್ವಾಮಿದೇವರಂಗಭೋಗಕ್ಕೆ**
**ಕೊಟ್ಟತ್ತಣೆಯಲಿರ್ದ್ದ ಪನ್ನಾಯದ ಸುಂಕಮಂ ನೋರ್ಪ್ಪವರುಂ**
**ತಿಂಗಳ್ಗೆರಡು ಗದ್ಯಾಣ ಪೊನ್ನಂನಿಲ್ಲಿ ಮಾಚಿದ ಸ್ತಳವಿಕ್ರಮ**
**ಮೊದಲಾಗಿ ಯಲ್ಲಿಯಾದೊಡೊಂದಂ ಕೊಡುವುದು ಈನ್ತೀ ಧರ್ಮಮಂ**
**ಸ್ತಳದ ಹನ್ನವಣಿಗರುಂ ಕಡ್ಡಾಯದ ಕೋಲ್ಯಾವಿರುಂ ಪುರಸ್ಸಹರಾಗಿ ನಡೆಸುವುದು"**

ಎಂಬುದಾಗಿ ಶಾಸನದಲ್ಲಿ ಹೇಳಿದೆ.

ಶಾಸನದ ಕೊನೆಗೆ ಶಾಸನ ಕರ್ತೃವಿನ ಹೆಸರಿನ ಉಲ್ಲೇಖವಿದೆ.

“ಸಾಸನಮಂ ಬರದಂ ಹಿಣ್ಣಿಯ ಸಾವಿಮಯ್ಯಂಗಳ ಮಗಂ ದುಗ್ಗಿಮಯ್ಯಂ” ಎಂದಿದೆ.

**ಚಂದ್ರಭಟ್ಟ (ಕ್ರಿ.ಶ. ೧೦೯೯)**

ಗದಗ ಜಿಲ್ಲೆಯ, ಗದಗ ತಾಲೂಕಿನ, ಕೋಟವುಮ್ಮಚಗಿ ಗ್ರಾಮದ ಒಂದು ಶಾಸನ[೮೦] ಅಂತ್ಯದಲ್ಲಿ 'ಚಂದ್ರಭಟ್ಟಕವಿ ವಿರಚಿಸಿದ್ದಂ' ಎಂಬ ಹೇಳಿಕೆಯಿಂದ ಈ ಶಾಸನವನ್ನು ಚಂದ್ರಭಟ್ಟಕವಿ ರಚಿಸಿದನೆಂದು ತಿಳಿದುಬರುತ್ತದೆ. ಕಲ್ಯಾಣ ಚಾಲುಕ್ಯ ೬ನೇ ವಿಕ್ರಮಾದಿತ್ಯನ ಆಳ್ವಿಕೆಯನ್ನು ಉಲ್ಲೇಖಿಸುವ ಈ ಶಾಸನದ ಕಾಲ ಕ್ರಿ.ಶ. ೧೦೯೯. ಬಹುಭಾಗ ತ್ರುಟಿತವಾಗಿರುವ ಈ ಶಾಸನದಲ್ಲಿ ಮಹಾಸಾಮಂತ ಅನಂತಪಾರಸನ ಔದರ್ಯವನ್ನು ವರ್ಣಿಸಿದೆ.

ಹಲವು ಜನ 'ಚಂದ್ರಭಟ್ಟ' ಹೆಸರಿನ ಕವಿಗಳು ಸಾಹಿತ್ಯ ಚರಿತ್ರೆಯಲ್ಲಿ ದೊರೆಯುತ್ತಾರೆ. ಸುಮಾರು ಕ್ರಿ.ಶ.೧೦೦೦ದಲ್ಲಿ ಒಬ್ಬ ಚಂದ್ರಭಟ್ಟನೆಂಬ ಕವಿಯಿದ್ದು ಇವನನ್ನು ಕ್ರಿ.ಶ. ೧೦೪೯ರಲ್ಲಿದ್ದ ಶ್ರೀಧರಾಚಾರ್ಯನು ತನ್ನ 'ಜಾತಕ ತಿಲಕ' ಕೃತಿಯಲ್ಲಿ ಹೊಗಳಿದ್ದಾನೆ. ಅದೇ ರೀತಿ ರುದ್ರಭಟ್ಟ ಕೇಶಿರಾಜ, ರಟ್ಟ ಕವಿಗಳು ಚಂದ್ರಭಟ್ಟನನ್ನು ಹೊಗಳಿದ್ದಾರೆ. ಕ್ರಿ.ಶ.೧೦೬೭ರಲ್ಲಿ ಹೊಟ್ಟೂರಿನ ಶಾಸನವನ್ನು ಬರೆದ ರಾಜವಲ್ಲಭನ ಕಾವ್ಯವನ್ನು ವಿಸ್ತರಿಸಿ ತಿದ್ದಿ ಬರೆದ ವಾಕ್ಪತಿ ಚಂದ್ರಭಟ್ಟನೊಬ್ಬ ಕಾಣಿಸಿಕೊಳ್ಳುತ್ತಾನೆ. ಈ ಚಂದ್ರಭಟ್ಟನು ಪ್ರಸ್ತುತ ಶಾಸನಕವಿ ಚಂದ್ರಭಟ್ಟನೂ ಒಬ್ಬನೇ ಆಗಿರಬಹುದು ಎಂದು ಆರ್ ನರಸಿಂಹಾಚಾರ್ ಅಭಿಪ್ರಾಯಪಡುತ್ತಾರೆ.[೮೧]

**ಮಲ್ಲ (ಕ್ರಿ.ಶ. ೧೦೯೯)**

ಅವಿಭಜಿತ ಧಾರವಾಡ ಜಿಲ್ಲೆಯ, (ಇಂದಿನ ಗದಗ ಜಿಲ್ಲೆ) ಗದಗ ತಾಲೂಕಿನ, ಚಿಕ್ಕಹಂದಿಗೋಳದ, ಆಂಜನೇಯ ದೇವರಗುಡಿಯ ಶಾಸನವನ್ನು[೮೨] ಮಲ್ಲ ಎಂಬ ಕವಿಯು ರಚಿಸಿರುವಂತೆ ತಿಳಿಯುತ್ತದೆ. ಕಲ್ಯಾಣ ಚಾಲುಕ್ಯರ ೬ನೇ ವಿಕ್ರಮಾದಿತ್ಯನ ಉಲ್ಲೇಖವಿರುವ ಈ ಶಾಸನದ ಕಾಲ ಕ್ರಿ.ಶ. ೧೦೯೯.

**ದ್ರುಹಿಣ ವಿನಿರ್ಮಿತ ಮೆನೆ......**
**.....ಣಯುತಂ ಬಾಣಗದ್ಯ (ವ್ರಾಲಿಖಿತ ಪಿತಾ)**
**ಮಹನೆನ್ದೊರೆ ಯೊಳೊಪ್ಪಿರ**
**ಲಹರ್ಣ್ಣಿಶಂ ಬರೆದನೆ .....ಯ ಮಲ್ಲಂ**

ಈ ಪದ್ಯದಲ್ಲಿ ಮಲ್ಲನು ದ್ರುಹಿಣಿನೆಂಬ ಕವಿಯ ರಚನೆಯಂತೆ (ಈತ ಸಂಸ್ಕೃತ ಕವಿ ಇರಬಹುದು) ಸಂಸ್ಕೃತ ಕಾವ್ಯವಾದ 'ಕಾದಂಬರಿ'ಯ ಕರ್ತೃವಾದ ಬಾಣಕವಿಯ ಗದ್ಯಕ್ಕಿಂತ ಮಿಗಿಲಾದುದ್ದು ಎಂದು ಹೇಳಿಕೊಂಡಿದ್ದಾನೆ.

ಈ ಶಾಸನದಲ್ಲಿ ಮಲ್ಲನು ತನ್ನನ್ನು 'ಅಲಿಖಿತ ಪಿತಾಮಹ' ಎಂದು ಕರೆದುಕೊಂಡಿದ್ದಾನೆ. 'ಆಲಿಖಿತ' ಎಂಬುದನ್ನು ಶಾಸನ ಎಂಬಂರ್ಥದಲ್ಲಿ ಕವಿ ಬಳಸಿದ್ದಾನೆ. ಎಂದರೆ ಶಾಸನ ರಚನಾ ವಿದ್ಯೆಯಲ್ಲಿ 'ಬ್ರಹ್ಮ'ನೆಂಬುದು ಈತನ ಅಭಿಪ್ರಾಯ. ಈ ಪ್ರಶಂಸೆಗಳು ಸ್ವಯಂ 'ಉವಾಚಿತವಲ್ಲ' ದೊರೆಯಲ್ಲಿ ಒಪ್ಪಿತವಾದುವೆಂದು ತಿಳಿಯಪಡಿಸಿದ್ದಾನೆ. ಇದರಿಂದ ರಾಜನೇ ಈ ರೀತಿಯಾಗಿ ಪ್ರಶಂಸಿಸಿ 'ಮಲ್ಲನನ್ನು' ಸನ್ಮಾನಿಸಿರಬೇಕೆಂದು ಮೇವುಂಡಿ ಮಲ್ಲಾರಿಯವರ ಅಭಿಪ್ರಾಯವಾಗಿದೆ.[೮೩]

೬ನೇ ವಿಕ್ರಮಾದಿತ್ಯನ ಸೇನಾಧಿಪತಿಯಾಗಿದ್ದ ಅನಂತಪಾಲ ಈತನ ಕಾರ್ಯಕ್ಕೆ ಸಹಾಯಕನಾಗಿದ್ದವನು ಬೆಳ್ವಲದ ಅಧಿಕಾರಿ ಮಾಧವ. ಈ ಮಾಧವನ ಮಗ ಪ್ರತಿಕಂಠಚಂದನ. ಇವನ ಶೌರ್ಯವನ್ನು ಹಲವಾರು ಪದ್ಯಗಳಲ್ಲಿ ವರ್ಣಿಸಲಾಗಿದೆ.

**"ಪರಿಕಿಪೊಡೆಲ್ಲರಕ್ಕರ ಮುಮಕ್ಕರಮೇ । ಪ್ರತಿಕಣ್ಠಚನ್ದನ**
**ಕ್ಕರಮೆ ನೆಗರ್ತ್ತೆಯಕ್ಕರ ಮನೇಕರ್ಕಂಮಂ ಪೊರೆವಕ್ಕರಂ ಮಹೀ**
**ಶ್ವರರ ಸಭಾನ್ತರಾಳಮನಳಂಕರಿಪಕ್ಕರಮೆನ್ತು ಮಾಳ್ದನಂ**
**ಪಿರಿಯ ದಗುನ್ತಿಯೊಳ್ನಿಲಿಸುವಕ್ಕರಮುಪ್ಪರವಟ್ಟದಕ್ಕರಂ ॥**

**ಅನಂತಪಾಳನ ಶೌರ್ಯದ ವರ್ಣನೆ :**

**ಗಗನತಳಂಬರಂ ನೆಗೆದ ದಾಳಿಯ ಧೂಳಿಗೆ ಬೆರ್ಚಿ ದಾಳಿಗಂ**
**ತೆಗೆದು ವನಾನ್ತಮಂ ಪುಗೆ ಗುಹಾನ್ತರಮಂ ಪುಗೆ ಶೈಳಕುಂಜಮಂ**
**ಪುಗೆ ಪರಭೂಮಿಯಂ ಪುಗೆ ತಪೋವನಮಂ ಪುಗೆ ಸಿನ್ದುಕೂಟಮಂ**
**ಪುಗೆ ಚಲನ್ತಗುಳ್ದ ಭುಜಗರ್ವಮನನ್ತೆಮನನ್ತಪಾಳನಾ ॥**

ಒಂದು ಹಗಲು ಒಂದು ರಾತ್ರಿಯಲ್ಲಿ ಈ ಶಾಸನ ಕಾವ್ಯವನ್ನು ರಚಿಸಿದ ಮಲ್ಲನು ಆಶುಕವಿಯಾಗಿದ್ದನು. ಈ ಶಾಸನದಲ್ಲಿ 'ಮಲ್ಲ' ಎಂಬ ಹೆಸರಿನ ಉಲ್ಲೇಖವಿರುವ ಇನ್ನೆರಡು ಪದ್ಯದಿಂದ ಈತನ ವಿಶೇಷ ಪರಿಚಯ ನಮಗಾಗುತ್ತದೆ. ಧರ್ಮಿಯಾದ ಪ್ರತಿಕಂಠಚಂದನಿಗೆ 'ಮಲ್ಲ' ಎಂಬೊಬ್ಬ ತಮ್ಮನಿದ್ದನೆಂದು ಎರಡು ಪದ್ಯಗಳಲ್ಲಿ ಹೇಳಲಾಗಿದೆ.

**ದ್ವಿಜಕುಳತಿಳಕಂ ಚಂದ್ರಾ,**
**ನುಜನುತ್ತಮ ಪುರುಷ ನುತ್ತಮೋತ್ತಮ ನೀಪ**
**ದ್ಮಜ ಬಾಪ್ಪೆನವಿತ್ತದಿತಿಜ**
**ಕುಜನೆನಿಸಿದ ನರ್ಥಿಸಮಿತಿ ಗೆಲ್ಲಂ ಮಲ್ಲಂ ॥**

**ಜನಕಂ ಮಾಧವನಂಬಿಕೆ**
**ಜನವಂದಿತೆ ರೇವಕಬ್ಬೆ ತಮ್ಮಂ ಮಲ್ಲಂ**
**ವಿನಯನಿಧಿ ರೇವಣಂ ಮಿ**
**ತ್ರನೆನಲ್ ಕೃತಕೃತ್ಯನೆನಿಸಿ ಸಂದಂ ಚಂದಂ ॥**

ಮಾಧವನ ಮಗನಾದ ಪ್ರತಿಕಂಠಚಂದನಿಗೆ ಮಲ್ಲ ಎಂಬ ತಮ್ಮನಿದ್ದನೆಂದು ಈ ಶಾಸನದ ಎರಡು ಕಂದಪದ್ಯಗಳಿಂದ ತಿಳಿಯುತ್ತದೆ. ಆದ್ದರಿಂದ ಮಲ್ಲ ಮತ್ತು ಪ್ರತಿಕಂಠಚಂದನ ಇಬ್ಬರೂ ಅಣ್ಣ ತಮ್ಮಂದಿರಾಗಿದ್ದೂ ಇವರ ತಂದೆ ಬೆಳ್ವಲದ ಅಧಿಕಾರಿ ಮಾಧವ. ತಾಯಿ ರೇರಬ್ಬೆ, ಇವರ ಕುಲ ಆತ್ರೇಯ ಗೊತ್ರದ ಬ್ರಾಹ್ಮಣ ಕುಲ ಮಲ್ಲನ ಕುಟುಂಬದವರು ರಾಜನಿಗೆ ಹತ್ತಿರವಾಗಿದ್ದು ಮಲ್ಲನು ರಾಜಮಾನ್ಯ ಶಾಸನಕವಿಯಾಗಿದ್ದನೆಂದು ತಿಳಿದುಬರುತ್ತದೆ. ಕ್ರಿ.ಶ. ೧೦೫೭ರ ದೇಕಬ್ಬೆ ಶಾಸನವನ್ನು ಬರೆದ ಕವಿಯ ಹೆಸರು 'ಮಲ್ಲ' ಎಂದು ತಿಳಿದಿದೆ. ಇವರಿಬ್ಬರ ಕಾಲಘಟ್ಟ ಹೆಚ್ಚು ಕಡಿಮೆ (ಕ್ರಿ.ಶ.೧೦೫೭ ಮತ್ತು ೧೦೬೯) ಒಂದೇ ಆಗಿದೆ ಆದ್ದರಿಂದ ಇವರಿಬ್ಬರೂ ಒಬ್ಬನೇ 'ಮಲ್ಲ' ಆಗಿರುವ ಸಾಧ್ಯತೆಯಿದೆ.

**ಶ್ರೀಕಂಠಸೂರಿ (ಕ್ರಿ.ಶ.೧೦೭೯)**

ಬಳ್ಳಾರಿ ಜಿಲ್ಲೆಯ, ಹರಪನಹಳ್ಳಿ ತಾಲೂಕಿನ, ಕುರುವತ್ತಿ ಗ್ರಾಮದ ಕಲ್ಲೇಶ್ವರ ದೇವರ ಗುಡಿಯ ಬಳಿ ನಿಂತಿರುವ ಕ್ರಿ.ಶ.೧೦೭೯ರ ಒಂದು ಶಾಸನವನ್ನು[೪೪] ಶ್ರೀಕಂಠಸೂರಿ ಎಂಬ ಕವಿ ರಚಿಸಿದ್ದಾನೆ. ಕವಿ ತನ್ನ ಹೆಸರನ್ನು ಮಾತ್ರ ಒಂದು ಸಂಸ್ಕೃತ ಪದ್ಯದಲ್ಲಿ ಹೇಳಿಕೊಂಡಿದ್ದಾನೆ.

**ವಿದ್ಯಾವಧೂ ಭಾಸುರಕರ್ಣಪೂರಃ**
**ಶ್ರೀ ಕಾಳಿದಾಸ ವಿಬುಧಾಪತೇಸ್ತನೂಜಃ**
**ಸೋಮೇಶಶಾಸನವಚೋರಚನಾಂ ವಿಧಾಯ**
**ಶ್ರೀಕಂಠಸೂರಿರಲಿಖದ್ವಿಬುಧೈರ್ವಿಚಾರ್ಯಮ್ ॥**

ಇವನು ಬ್ರಾಹ್ಮಣ ಕವಿ. ಕಾಳಿದಾಸ ವಿಬುಧನ ಮಗ ಚಾಲುಕ್ಯರಾಜ ತ್ರಿಭುವನಮಲ್ಲನ ಆಳ್ವಿಕೆಯ ಕಾಲದಲ್ಲಿ ಈ ಶಾಸನ ರಚನೆಯಾಗಿದೆ. ತುಂಗಭದ್ರಾ ತೀರದಲ್ಲಿ ಸೋಮೇಶ್ವರ ಉದ್ಭವವಾದುದನ್ನು ಕೇಳಿದ ಕುಱುವರ್ತಿಯ (ಕುರುವತ್ತಿ) ಇರ್ನ್ನೂರ್ವರು ಅಲ್ಲಿ ಅಧಿಪತಿಯಾದ ಕಾಳಿದಾಸನೂ ಆ ದೇವರಿಗೆ ದೇಗುಲವನ್ನು ನಿರ್ಮಿಸಿ ದತ್ತಿಯನ್ನು ಬಿಟ್ಟು ಆ ದೇವಾಲಯದ ಆಡಳಿತವನ್ನು ಕಾಶ್ಮೀರದೇವ ವಂಶದ ಲಕುಳೀಶಪಂಡಿತರಿಗೆ ಒಪ್ಪಿಸಿದ ವಿಷಯ ಉಲ್ಲೇಖವಾಗಿದೆ. ಶಾಸನ ಗದ್ಯ ಪದ್ಯಾತ್ಮಕವಾಗಿದೆ. ಈ ಶಾಸನದಲ್ಲಿ ಕಾಳಿದಾಸನ ಪ್ರಶಂಸೆ ಹಾಗೂ ಕುರುವತ್ತಿಯ ಹಿರಿಮೆಯನ್ನು ಕುರಿತಾದ ಪದ್ಯಗಳಿವೆ.

**ಕುರುವತ್ತಿಯ ಇನ್ನೂರ್ವರ ಗುಣ ಪ್ರಶಂಸೆ:–**

> **ಶರಣಾಯಾತ ಜನಕ್ಕೆ ವಜ್ರಕವಚಂ ಮಾಱಾಂತ ವೀರಂಗೆ ಕೇ**
> **ಸರಿ ಬಾಯ್ವಿಟ್ಟೆರೆದಂಗೆ ಕಲ್ಪಮಹಿಜಂ ಶಾಸ್ತ್ರಕ್ಕೆ ತಾನಾಸ್ಪದಂ**
> **ಪುರುಷಾರ್ಥಕ್ಕೆ ತವರ್ ಶ್ರುತಿಸ್ಮೃತಿಗೆ ತಾಂ ಲೀಲಾಗ್ರಹಂ ಧರ್ಮದಾ**
> **ಕರಮಿಂತೀ ಕುಱುವರ್ತಿ ಮಹೀದೇವಾನೀಕಮಿನ್ನೂರ್ವರುಂ ॥**

**ಕುರುವತ್ತಿ ಊರಿನ ಪ್ರಶಂಸೆ :–**

> **ಕುಱುವರ್ತಿ ಆ ನಾಡೊಳಗ್ರಹಾರಂ**
> **ಭೂನಾರೀಹಾರಮಧಿಕವಿಬುಧಾಧಾರಂ**
> **ಶ್ರೀ ನಾರಿಗಿರಲಗಾರಂ**
> **ಭೂನಿಧಿ ಕುಱುವರ್ತಿ ನೋಡೆ ಸೊಗಯಿಸುತಿರ್ಕುಂ**

**ಸೋಮೇಶ್ವರ ಉದ್ಭವದ ಕಥನ :–**

> **ತ್ರಿಭುವನ ಸಂಭವಸ್ಥಿತಿಲಯಂಗಳಿಗೊರ್ವನೆ ಕರ್ತೃವೆಂದು ಸಂ**
> **ದ ಭವಿನಿ ಕಾಯ ಸಂಸರಣ ಘೋರಮಹಾರ್ಣವ ಕರ್ಣಧಾರನೆಂ**
> **ದಭಿಯಿಪಂತೆ, ದಕ್ಷಿಣಸುರಾಪಗೆಯೊಳ್ ನೆರೆಯಲ್ಕೆಬಂದನೊ**
> **ಲ್ದಭಿನವ ಸೋಮನಾಥನಮರೋತ್ಕರನಾಥನ ನಾಥನವಯ್ಯಂ ॥**

**ಸೋಮೇಶ್ವರ ದೇವರಿಗೆ ದಾನದ ವಿವರ :–**

> **ಗವಱೆಗಳಯ್ನೂರ್ವರುಮಭಿ**
> **ನವಸೋಮೇಶಂಗೆ ಮಿಂದಿನಲು ಪಣವೊಂದಂ**
> **ಧ್ರುವಮಾಗೆ ಪಸುಂಬೆಗೆ ಹಾ**
> **ಗವನೆಱಕತೆ ಕರ್ತೆಯಲ್ಲಿ ಬೇಳೆಯನಿತ್ತರ್ ॥**
>
> **ಅಂಗಡಿಯೊಳು ಸುಂಟಗೆ ಭ**
> **ತ್ತಂ ಗಾಣದೊಳೊಂದು ಸೊಟಿಗೆಯೆಣ್ಣೆಯನಿತ್ತ**
> **ರ್ಗಂಗಾತರಂಗ ಭಂಗಾ**
> **ಲಿಂಗಿತಜೂಟಂಗೆ ಪರದರುಂ ತೆಲ್ಲಿಗರುಂ ॥**
>
> **ಪೆಸಱುಪ್ಪು ಕಡಲೆ ಗೋಧುವೆ**
> **ಮಿಸುಪೆಳ್ಳೆಂಬಿವಱ ಪೇಱು ಮೂವತ್ತರ್ಕೊಂ**
> **ದೆಸವ ದವಸಕ್ಕಮಾರ್ಪಿಂ**
> **ದೊಸೆದಿರ್ಪತ್ತಕ್ಕೆ ಕೊಟ್ಟರೊಂದಂ ಮುದದಿಂ ॥**

**ರೇಚನ (ಕ್ರಿ.ಶ.೧೦೯೯)**

ಹಾಸನ ಜಿಲ್ಲೆಯ, ಬೇಲೂರು ತಾಲೂಕಿನ, ದಬ್ಬೆ ಅಗ್ರಹಾರದ ಶಾಸನ[೮೫] ಚಾಲುಕ್ಯ ತ್ರಿಭುವನಮಲ್ಲ (೬ನೇ ವಿಕ್ರಮಾದಿತ್ಯ) ಹಾಗೂ ಆತನ ಅದೀನ ಅಧಿಕಾರಿ ಮಹಾಮಂಡಲೇಶ್ವರ ತ್ರಿಭುವನಮಲ್ಲ ಹೊಯ್ಸಳದೇವನು 'ಗಂಗವಾಡಿ ೯೬೦೦೦' ವಿಭಾಗವನ್ನು ನೋಡಿಕೊಳ್ಳುತ್ತಿದ್ದನು.

ಈ ಸಂದರ್ಭದಲ್ಲಿ ಫಲವತ್ತಾದ ನೀರಾವರಿಯ ಭೂಮಿಯನ್ನು 'ದೇವರಾಸಿಪಂಡಿತ' ಸ್ಥಾನಾಧಿಪತಿಯರ ಉಲ್ಲೇಖವಿದೆ. ಕೋಬೇಶ್ವರ ದೇವರಿಗೆ ಕೋಬಿಗಾವುಂಡ ಮತ್ತು ದರವ್ವೆಯರು ಭೂದಾನ ನೀಡಿದೆ ವಿವರವಿದೆ.

**ಮಹಾಮಣ್ಡಳೇಶ್ವರ ದ್ವಾರಾವತೀಪುರವರಾಧೀಸ್ವರ**
**ಯಾದವಕುಳಾಂಬರ ದ್ಯುಮಣಿ ಸಮ್ಯಕ್ತ ಚೂಡಾಮಣಿ**
**ಮಲಪರೊಳ್ಗಣ್ಡಾದ್ಯನೇಕನಾಮಾವಳೀ ಸಮಾಳಂಕೃತರಪ್ಪ**
**ಶ್ರೀಮತ್ರಿಭುವನಮಲ್ಲ ಪೊಯ್ಸಳದೇವರು ಗಂಗವಾಡಿ**
**ತೊಂಬತ್ತಾರು ಸಾಸಿರಮುಮಂ ದುಷ್ಟನಿಗ್ರಹ**
**ಸಿಷ್ಟಪ್ರತಿಪಾಳನಂ ಗೆಯ್ದು ಸುಖಸಂಕಥಾವಿನೋದದಿಂದಾಳುತ್ತಮಿರೆ ॥**

ಎಂದು ವಿಕ್ರಮಾದಿತ್ಯನ ಆಳ್ವಿಕೆಯ ವಿವರಗಳನ್ನು ಶಾಸನಕವಿ ದಾಖಲಿಸಿದ್ದಾರೆ.

ಅಶುದ್ಧ ಕಂದ ಪದ್ಯದ ಉದಾಹರಣೆ :

**ಮತ್ತುಂ ದೇವರಿಗೆ ಕೊರಕೊಳದ**
**ಮೊಗೆಯ ಗಟ್ದೆ ಯೆರಡಂ ಬಿಟ್ಟ**
**ಮನಮೊಸೆದು ಕೋಬಿಗಾರಿಕಂಗನುನಯದಿಂ ಮಾಳ್ಕೆ**
**ಮಹಿಮೆಯಂ ಮದನಘನಾಘನಪಟಳಂ ಪವನನಗಜಾಂ**
**ಗಣನಿರೀಕ್ಷಣಲಂಪಟೋತ್ಕರಂ ನಿಟಳಾಕ್ಷಂ**

**ಅಡಿಟಿಪ್ಪಣಿಗಳು:**

೧. EC. Vol V No.೩೨೦, ಮೈಸೂರು (ಜಿ) ನರಸೀಪುರ (ತಾ) ಬಸವನಹಳ್ಳಿ ೧೦೦೦ AD, ಪುಟ-೬೭೦-೭೧.

೨. EC. Vol IV No.೧೭೪, ಮೈಸೂರು (ಜಿ) ಯಳಂದೂರು (ತಾ) ಗಣಿಗನೂರು, ೧೦೦೦ AD ಪುಟ ೩೭೫-೩೭೬.

೩. ದೇವರಕೊಂಡಾರೆಡ್ಡಿ (ಸಂ) ಕ.ವಿ.ಶಾ.ಸಂ. IX No.೨೭೬ ಬಾಗಲಕೋಟೆ (ಜಿ) ಬಾದಾಮಿ (ತಾ) ಪಟ್ಟದಕಲ್ಲು ೧೦೦೦ AD ಪುಟ- ೨೮೮.

೪. ಬಾ.ರಾ. ಗೋಪಾಲ (ಸಂ) EC. Vol IV No. ೧೨೨, ಮಂಡ್ಯ (ಜಿ) ನಾಗಮಂಡಲ (ತಾ) ಎಲೇಕೊಪ್ಪ ೧೦೦೦ AD ಪುಟ- ೧೨೨.

೫. ಕ.ವಿ.ಶಾ.ಸಂ. V ಭಾಗ- II. No-೪೨೦, ವರಂಗಲ್ (ಜಿ) ಜನಗಾಂ (ತಾ) ಚೆರಿಯಲ್ ೧೦೦೧ AD, ಪುಟ-೮೧-೮೨

೬. SII. Vol .IX. Part No.೫೨, ಗದಗ (ಜಿ) ಗದಗ (ತಾ) ಲಕ್ಕುಂಡಿ ೧೦೦೭ AD ಪುಟ- ೪೯.

೭. ತೀ.ನಂ. ಶ್ರೀಕಂಠಯ್ಯ ಸಮಾಲೋಕನ : ಪುಟ- ೧೫೬.

೮. ತೀ.ನಂ.ಶ್ರೀಕಂಠಯ್ಯ ಸಮಾಲೋಕನ : ಪುಟ- ೧೫೬.

೯. E.I. Vol. XVI ಧಾರವಾಡ (ಜಿ) ಮುಂಡರಗಿ (ತಾ) ಆಲೂರು ೧೦೧೦ AD, ಪುಟ-೨೮.

೧೦. ದೇವರಕೊಂಡಾರೆಡ್ಡಿ (ಸಂ) ಕ.ವಿ.ಶಾ.ಸಂ.VII No.೩೨, ರಾಯಚೂರು (ಜಿ) ಲಿಂಗಸೂರು (ತಾ) ಮಸ್ಕಿ ೧೦೧೦ AD, ಪುಟ- ೧೬೪-೬೫.

೧೧. ದೇವರಕೊಂಡಾರೆಡ್ಡಿ (ಸಂ) ಕ.ವಿ.ಶಾ.ಸಂ-X, No.೬೧, ಬಿಜಾಪುರ (ಜಿ) ಇಂಡಿ (ತಾ) ರೂಗಿ-೧೦೧೫ AD, ಪುಟ-೨೦೪-೨೦೭.

೧೨. Annual Report on South Indian Epigraphy – 1932, 33 appendixes- No- 124.

೧೩. ಬಿ.ಶಿವಮೂರ್ತಿಶಾಸ್ತ್ರೀ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂ-೪೫, ಸಂ-೧, ಜೂನ್-೧೯೬೦, ಪುಟ-೧.

೧೪. ದೇವರಕೊಂಡಾರೆಡ್ಡಿ (ಸಂ) ಕ.ವಿ.ಶಾ.ಸಂ.II, No.೯೪ ಕೊಪ್ಪಳ (ಜಿ/ತಾ/ಗ್ರಾ) ೧೦೨೩ AD. ಪು–೮೦–೮೨

೧೫. E.C. Vol. VIII No.೮ ಹಾಸನ (ಜಿ) ಆಲೂರು (ತಾ) ಕಣತೂರು, ೧೦೨೫ AD. ಪು–೪೩೮

೧೬. E.C. Vol. III No.೨೮ ಮೈಸೂರು (ಜಿ) ಗುಂಡ್ಲುಪೇಟೆ (ತಾ) ಹಸುಗೂಲಿ, ೧೦೨೯ AD ಪು–೨೬–೨೭

೧೭. E.C. Vol. VIII No.೧೮೪ ಶಿವಮೊಗ್ಗ (ಜಿ) ಸೊರಬ (ತಾ) ಕುಪ್ಪಗಡ್ಡೆ, ೧೦೩೭ AD ಪು–೮೦

೧೮. ಕ.ವಿ.ಶಾ.ಸಂ.I No.೨೪ ಬಳ್ಳಾರಿ (ಜಿ) ಹಗರಿಬೊಮ್ಮನಹಳ್ಳಿ (ತಾ) ಮೊರಿಗೇರಿ, ೧೦೪೫ AD ಪು.೨೮೨–೨೮೬

೧೯. ದೇವಕೊಂಡಾರೆಡ್ಡಿ (ಸಂ) ಬಳ್ಳಾರಿ ಜಿಲ್ಲೆ ಶಾಸನ ಸಂಪುಟ, ಹಡಗಲಿ (ತಾ) ಮೈಲಾರ No.೨೩, ೧೦೪೬ ಪು–೩೨೭

೨೦. ಕ.ವಿ.ಶಾ.ಸಂ. I, No.೨೭ ಬಳ್ಳಾರಿ (ಜಿ) ಹಗರಿಬೊಮ್ಮನಹಳ್ಳಿ (ತಾ) ಮೋರಿಗೇರಿ, ೧೦೪೬ AD ಪು.೨೮೭–೨೯೦

೨೧. ಕ.ವಿ.ಶಾ.ಸಂ. IV, No.೧೨೬ ರಾಯಚೂರು (ಜಿ) ಲಿಂಗಸೂರು (ತಾ) ಕೀಲಾರಟ್ಟಿ ೧೦೪೬ AD ಪು.೨೨೫–೨೨೭

೨೨. ಕ.ವಿ.ಶಾ.ಸಂ.V, ಭಾಗ–II, No.೫೫೬ ನೆಲ್ಗೊಂಡ (ಜಿ) ಭುವನಗಿರಿ (ತಾ) ಕೊನಲುಪಾಕ, ೧೦೪೬ A.D. ಪು.೨೩೦–೩೧

೨೩. E.C. Vol. VIII, Part-II ಶಿವಮೊಗ್ಗ (ಜಿ) ನಗರ (ತಾ) ಹುಂಚ (ಗ್ರಾ) ೧೦೫೦ A.D. ಪು.೩೫

೨೪. (ಸಂ) ಆರ್.ಎನ್. ಗುರುವ 'ಕರ್ನಾಟಕ ಭಾರತಿ', ಕ.ವಿ.ವಿ. ೧೯೭೦, ಪು–೪೫.

೨೫. ಕ.ವಿ.ಶಾ.ಸಂ.V, ಭಾಗ–II, ಮೆಹಬೂಬನಗರ (ಜಿ) ಆಲಂಪುರ (ತಾ) ಆಲಂಪುರ, ೧೦೫೧ A.D. ಪು.೧೧೪–೧೧೫

೨೬. E.I. Vol XVI, ಧಾರವಾಡ (ಜಿ) ಗದಗ (ತಾ) ಮುಳಗುಂದ ೧೦೫೩ A.D. ಪು.೫೧

೨೭. E.I. Vol XVI, ಗದಗ (ಜಿ)(ತಾ) ಲಕ್ಷ್ಮೇಶ್ವರ ೧೦೮೧ A.D. ಪು–೫೯

೨೮. ಮೇವುಂಡಿ ಮಲ್ಲಾರಿ: ಕನ್ನಡ ನಾಡಿನ ಕೆಲವು ಶಾಸನಕವಿಗಳು, ಪು.೪೮,

೨೯. ಅದೇ ಪುಟ–೪೯

೩೦. ಆರ್. ನರಸಿಂಹಾಚಾರ್: ಕರ್ನಾಟಕ ಕವಿಚರಿತೆ, ಸಂ. I ಪು.೯೬

೩೧. ಕ.ವಿ.ಶಾ.ಸಂ.V, ಭಾಗ–III, No.೪೧೪ ಕರೀಂನಗರ (ಜಿ)(ತಾ) ಸನಿಗರಂ (ಗ್ರಾ), ೧೦೫೩ A.D. ಪು.೬೭–೬೯

೩೨. ಕ.ವಿ.ಶಾ.ಸಂ.IX, No.೧೪ ಬಾಗಲಕೋಟ (ಜಿ) ಬಾದಾಮಿ (ತಾ) ಕೆಳವಡಿ, ೧೦೫೩ A.D. ಪು.೧೫೫–೧೫೭

೩೩. MAR, ೧೯೩೧, No.೭೪, ಶಿವಮೊಗ್ಗ (ಜಿ) ಹೊಸನಗರ (ತಾ) ಹೆಬ್ಬೈಲು (ಗ್ರಾ) ೧೦೫೩ A.D. ಪು.೭೪

೩೪. ಎಂ.ಮರಿಯಪ್ಪ ಭಟ್ಟ: ಕನ್ನಡ ಸಂಸ್ಕೃತಿ ಬೆಂಗಳೂರು–೧೯೬೭ ಪು–೧೯೧

೩೫. ಕ.ವಿ.ಶಾ.ಸಂ.I, No.೧೯೦ ಬಳ್ಳಾರಿ (ಜಿ) ಹರಪನಹಳ್ಳಿ (ತಾ) ನಂದಿಬೇವೂರು, ೧೦೫೩ A.D. ಪು.೬೩೫–೬೩೬

೩೬. ಕ.ವಿ.ಶಾ.ಸಂ.V, ಭಾಗ–೨, ಮೆಹಬೂಬನಗರ (ಜಿ) ಅಲಂಪುರ (ತಾ)ಗ್ರಾ) ೧೦೫೫ A.D. ಪು.೧೪೦–೧೪೧

೩೭. ಕ.ವಿ.ಶಾ.ಸಂ.V, ಭಾಗ–೨, No.೬೧೬ ನಿಜಾಮಾಬಾದ್ (ಜಿ) ಬೋಧನ್ (ತಾ)(ಗ್ರಾ) ೧೦೫೬ A.D. ಪು.೩೨೫

೩೮. E.C. Vol. III No.೬ ಮೈಸೂರು (ಜಿ) ಹೆಗ್ಗಡದೇವನಕೋಟೆ (ತಾ) ಬೆಳತೂರು ೧೦೫೭ A.D. ಪು–೪೬೪

೩೯. ತಿ.ತಾ. ಶರ್ಮ: ವೀರಗಲ್ಲು–ಮಾಸ್ತಿಗಲ್ಲು 'ಸಂಭಾವನೆ' ಬೆಂಗಳೂರು, ೧೯೪೧, ಪು–೧೬೭

೪೦. ಕ.ವಿ.ಶಾ.ಸಂ.V, ಭಾಗ–೨, No.೪೫೨ ಮೆಹಬೂಬನಗರ (ಜಿ) ಅಲಂಪುರ (ತಾ)ಗ್ರಾ) ೧೦೫೭ A.D. ಪು.೧೧೭–೧೧೮

೪೧. ಕ.ವಿ.ಶಾ.ಸಂ.I, No.೩೩ ಬಳ್ಳಾರಿ (ಜಿ) ಹರಪನಹಳ್ಳಿ (ತಾ) ಹಿರೇಮಾಗಳೇರಿ (ಗ್ರಾ) ೧೦೬೧ A.D. ಪು.೪೮೮-೮೯

೪೨. ಕ.ವಿ.ಶಾ.ಸಂ.II, No.೬ ಕೊಪ್ಪಳ (ಜಿ)(ತಾ) ಅಳವಂಡಿ (ಗ್ರಾ) ೧೦೬೧ A.D. ಪು.೧೨-೧೩

೪೩. BKI Vol. I Part-I, No.೯೭ ಧಾರವಾಡ (ಜಿ) ಗದಗ (ತಾ) ಮುಳಗುಂದ ೧೦೬೨ A.D. ಪು-೫೪

೪೪. ಹಾ.ಮಾ. ನಾಯಕ (ಸಂ)ಕನ್ನಡ ಸಾಹಿತ್ಯ ಚರಿತ್ರೆ-ಸಂ.೩ ಪು-೨೨೬

೪೫. E.C. Vol. VIII No.೫೭ ಶಿವಮೊಗ್ಗ (ಜಿ) ಹೊಸನಗರ (ತಾ) ಹುಂಚ ೧೦೬೨ A.D. ಪು-೩೮೪

೪೬. E.I. Vol:XVI No.೮೦, ಧಾರವಾಡ (ಜಿ) ಶಿಗ್ಗಾವ (ತಾ) ಹೊಟ್ಟೂರು ೧೦೬೭ A.D. ಪು.೮೦

೪೭. ಕ.ವಿ.ಶಾ.ಸಂ.V, ಭಾಗ-೧, No.೩೬೧ ಕರ್ನೂಲ (ಜಿ/ತಾ) ಪಂಚಲಿಂಗಾಲ ೧೦೬೮ A.D. ಪು.೪೦೫-೪೦೭

೪೮. BKI Vol. I Part-I, No.೩ ಗದಗ (ಜಿ) ಸೊರಟೂರು ೧೦೭೧ A.D. ಪು-೬೦

೪೯. ಮೇವುಂಡಿ ಮಲ್ಲಾರಿ: ಕನ್ನಡ ನಾಡಿನ ಕೆಲವು ಶಾಸನಕವಿಗಳು, ಪು-೬೦.

೫೦. KI No.೧೦ ಧಾರವಾಡ (ಜಿ) ನರಗುಂದ (ತಾ) ನರಗುಂದ ೧೦೭೪ A.D. ಪು-೨೮

೫೧. ಮೇವುಂಡಿ ಮಲ್ಲಾರಿ: ಕನ್ನಡ ನಾಡಿನ ಕೆಲವು ಶಾಸನಕವಿಗಳು, ಪು-61

೫೨. E.C. Vol. VIII No.26 ಶಿವಮೊಗ್ಗ (ಜಿ) ಸೊರಬ (ತಾ) ಕುಪ್ಪಟೂರು, 1075 A.D. ಪು-11

೫೩. ಕ.ವಿ.ಶಾ.ಸಂ.IX, No.೧ ಬಾಗಲಕೋಟ (ಜಿ) ಬೀಳಗಿ (ತಾ) ಎಸ್.ಕೆ. ಕೊಪ್ಪ ೧೦೭೫ A.D. ಪು.೫೭-೬೧

೫೪. ಮೇವುಂಡಿ ಮಲ್ಲಾರಿ: ಕನ್ನಡ ನಾಡಿನ ಕೆಲವು ಶಾಸನಕವಿಗಳು, ಪು-೬೨

೫೫. ಕ.ವಿ.ಶಾ.ಸಂ.V, ಭಾಗ-೨, No.೪೫೬, ಮೆಹಬೂಬನಗರ (ಜಿ) ಆಲಂಪುರ (ತಾ/ಗ್ರಾ) ೧೦೭೬ A.D. ಪು.೧೨೨-೨೪

೫೬. ಕ.ವಿ.ಶಾ.ಸಂ.VIII, No.೧೩ ಬೀದರ (ಜಿ) ಬಾಲ್ಕಿ (ತಾ) ಅಳವಾಯಿ ೧೦೭೭ A.D. ಪು.೧೦೪–೧೦೫

೫೭. KI Vol. V No.೧೧ ಧಾರವಾಡ (ಜಿ) ನರಗುಂದ (ತಾ) ನರಗುಂದ ೧೦೭೮ A.D. ಪು–೬೬

೫೮. E.C. Vol. VIII No.೧೩೩ ಹಾಸನ (ಜಿ) ಅರಕಲಗೂಡು (ತಾ) ಸುಳಗೋಡು ೧೦೭೯ A.D. ಪು–೧೮೬–೮೭

೫೯. ಕ.ವಿ.ಶಾ.ಸಂ.V, ಭಾಗ–೧, No.೧೬೬ ಅನಂತಪುರ (ಜಿ) ಗುತ್ತಿ (ತಾ) ಹಾವಲಗಿ ೧೦೭೯ A.D. ಪು.೧೮೧–೮೨.

೬೦. KI Vol. III, No.೧೨ ಧಾರವಾಡ (ಜಿ) ನರಗುಂದ (ತಾ) ನರಗುಂದ ೧೦೮೦ A.D. ಪು–೩೭

೬೧. ಕ.ವಿ.ಶಾ.ಸಂ.V, ಭಾಗ–೨, No.೫೭೩ ನಲ್ಗೊಂಡ (ಜಿ) ಭುವನಗಿರಿ (ತಾ) ಕೊನಲುಪಾಕ ೧೦೮೧ A.D. ಪು.೨೬೧–೬೩

೬೨. ಕ.ವಿ.ಶಾ.ಸಂ.V, ಭಾಗ–೨, No.೪೧೬ ವರಂಗಲ್ (ಜಿ) ನರಸ್ಸಂಪೆಟ್ (ತಾ) ಬಾಣಾಜಪೆಟ್ ೧೦೮೨ A.D. ಪು.೭೦–೭೧

೬೩. BKI Vol. III, No.೧೨೭ ಧಾರವಾಡ (ಜಿ) ಗದಗ (ತಾ) ಕುರ್ತುಕೋಟಿ ೧೦೮೨ A.D. ಪು–೧೩೩–೩೪

೬೪. ಹಾ.ಮಾ. ನಾಯಕ (ಸಂ) ಕನ್ನಡ ಸಾಹಿತ್ಯ ಚರಿತ್ರೆ ಸಂ.೩ ಮೈಸೂರು ವಿಶ್ವವಿದ್ಯಾಲಯ, ೧೯೭೬, ಪು–೨೩೨

೬೫. ಕ.ವಿ.ಶಾ.ಸಂ.IX, No.೧೪ ಬಾಗಲಕೋಟ (ಜಿ) ಜಮಖಂಡಿ (ತಾ) ಜಮಖಂಡಿ ೧೦೮೨ A.D. ಪು.೧೦೩–೦೪

೬೬. ಕ.ವಿ.ಶಾ.ಸಂ.X, No.೭೨ ಬಿಜಾಪುರ (ಜಿ) ಬಿಜಾಪುರ (ತಾ) ತಿಡಗುಂಡಿ ೧೦೮೩ A.D. ಪು.೧೦೮–೧೦೯

೬೭. ಕ.ವಿ.ಶಾ.ಸಂ.V, ಭಾಗ–೨ No.೩೯೫ ಕರೀಂನಗರ (ಜಿ) ಸಿರಿಸಿಲ್ಲ (ತಾ) ವೇಮುಲವಾಡ ೧೦೮೩ A.D. ಪು.೩೯

೬೮. BKI Vol. IV, No.೫೭ ಧಾರವಾಡ (ಜಿ) ನರಗುಂದ (ತಾ) ಹದಳಿ ೧೦೮೪ AD. ಪು–೧೩೭

೬೯. ಬಿ.ಎಲ್. ರೈಸ್ (ಸಂ). E.C.Vol-XIII No.೧೦, ಶಿವಮೊಗ್ಗ (ಜಿ) ಶಿವಮೊಗ್ಗ (ತಾ) ತಟ್ಟೆಕೇರೆ ೧೦೮೫ AD ಪುಟ–೮೮–೯೧.

೭೦. E.I. Vol-XIX No.೧೯೦, ಧಾರವಾಡ (ಜಿ) ಕಜನಗಿ (ತಾ) ಕೊಳೂರು (ಗ್ರಾ) ೧೦೮೫ AD ಪುಟ– ೧೯೦

೭೧. ಕ.ವಿ.ಶಾ.ಸಂ.1, No.೮೯, ಬಳ್ಳಾರಿ (ಜಿ) ಹರಪನಹಳ್ಳಿ ನೀಲಗುಂದ (ಗ್ರಾ) ೧೦೮೭ AD, ಪುಟ–೫೪೫.

೭೨. ಕ.ವಿ.ಶಾ.ಸಂ–V, Part- I No.೧೨೩, ಅನಂತಪುರ (ಜಿ) ಗುತ್ತಿ (ತಾ) ಕೊನಕೊಂಡ್ಲ ೧೦೮೮ AD, ಪುಟ ೧೩೨–೧೩೪.

೭೩. ಕ.ವಿ.ವಿ. ಶಾಸಂ.–V ಭಾಗ–೨ No.೪೨೯ ವರಂಗಲ್ (ಜಿ) ಕಾಜಿಪೇಟ್ (ಗ್ರಾ) ೧೦೯೦ AD, ಪುಟ–೯೪–೯೬.

೭೪. B.K.I. Vol-I Part-೩, No.೧೩೭, ಧಾರವಾಡ (ಜಿ) ಗದಗ (ತಾ) ಸೊರಟೂರು ೧೦೯೧ AD, ಪುಟ– ೨೩೬–೩೯.

೭೫. ಮೇವುಂಡಿ ಮುಲ್ಲಾರಿ: ಕನ್ನಡ ನಾಡಿನ ಕೆಲವು ಶಾಸನಕವಿಗಳು ಪುಟ–೮೦.

೭೬. B.K.I. Vol-I, Part-3, No.೧೩೭, ಗುಲ್ಬರ್ಗ (ಜಿ)(ತಾ) ಇಂಗಳಗಿ (ಗ್ರಾ) ೧೦೯೪ AD, ಪುಟ–೧೭೪.

೭೭. ಹು.ಕ. ಜಯದೇವ ಶಾಸನ ಮತ್ತು ಗದ್ಯ ಪುಟ– ೧೨೨.

೭೮. E.C. Vol-X No.190, ಹಾಸನ (ಜಿ) ಅರಸೀಕೆರೆ (ತಾ) ಬಾಗವಾಳು ೧೦೯೮ AD, ಪುಟ–೨೪೬–೪೭.

೭೯. ಕ.ವಿ.ಶಾ.ಸಂ–೧, No.೨೦, ಬಳ್ಳಾರಿ (ಜಿ)(ತಾ) ಕುಡಿತಿನಿ ೧೦೯೮ AD ಪುಟ ೨೯–೩೧.

೮೦. ಎಚ್.ಕೃಷ್ಣಶಾಸ್ತ್ರೀ (ಸಂ) SII. Vol-XI, Part No.೩, ನಂ.೧೪೬, ಗದಗ (ಜಿ)(ತಾ) ಕಟವುಮ್ಮಚಗಿ ೧೦೯೯ AD, ಪುಟ–೮೧.

೮೧. ಆರ್ ನರಸಿಂಹಚಾಯ್ ಕರ್ನಾಟಕ ಕವಿಚರಿತೆ–1, ಅನುಬಂಧ ಪುಟ–12.

೮೨. B.K.I. Vol-I, Part-2, No.೧೪೭, ಧಾರವಾಡ (ಜಿ) ಗದಗ (ತಾ) ಚಿಕ್ಕಹಂದಿಗೋಳ ೧೦೯೯ AD, ಪುಟ-೧೪೭.

೮೩. ಮೇವುಂಡಿ ಮಲ್ಲಾರಿ: ಕನ್ನಡದ ಕೆಲವು ಶಾಸನ ಕವಿಗಳು ಪುಟ-೮೯.

೮೪. ಕ.ವಿ.ಶಾ. ಸಂ.೧. No.೧ ಬಳ್ಳಾರಿ (ಜಿ) ಹಡಗಲಿ (ತಾ) ಕುರುವತ್ತಿ, ೧೦೯೯ AD ಪು-೩೦೭-೩೧೧

೮೫. E.C.Vol IX No. ೧೯೧; ಹಾಸನ (ಜಿ) ಬೇಲೂರು (ತಾ) ದಬ್ಬೆ ಅಗ್ರಹಾರ, ೧೦೯೯. AD ಪು-೧೭೯-೧೮೦.

# ಅಧ್ಯಾಯ–೫

## ೧೧ನೇ ಶತಮಾನದ ಶಾಸನಕವಿಗಳು

**ನಾಗವರ್ಮ್ಮ (ಕ್ರಿ.ಶ.೧೧೦೦)**

ಹಾಸನ ಜಿಲ್ಲೆಯ, ಶ್ರವಣಬೆಳಗೊಳ ತಾಲೂಕಿನ, ಚಿಕ್ಕಬೆಟ್ಟದ ೧೧೦೦ರ ಶಾಸನವೊಂದನ್ನು 'ನಾಗವರ್ಮಬರೆದಂ'[೧] ಎಂದಿದೆ. ಇದು ಇರುವೆ ಬ್ರಹ್ಮದೇವರ ದೇವಸ್ಥಾನದ ಮುಂದೆ ೧೯೩ ನೇ ಶಾಸನ ಪಕ್ಕದಲ್ಲಿ ಬರೆದಿದೆ. ಶಾಸನ ವಿವರಗಳಿಲ್ಲ.

**ದುಗಣ (ಕ್ರಿ.ಶ.೧೧೦೦)**

ಅದೇರೀತಿ ಚಿಕ್ಕಬೆಟ್ಟದಲ್ಲಿ ಕಂಚಿನದೂನೆಯ ಈಶಾನ್ಯದಲ್ಲಿ[೨] ೨೧೪ನೇ ಶಾಸನದ ಹತ್ತಿರ ೧೧೦೦ ಕಾಲದ 'ದುಗಣ ಬರೆದ ಶಾಸನ' ಎಂದಿದೆ.

**ಮೂಕರಾಜ (ಕ್ರಿ.ಶ.೧೧೦೦)**

ಬೀದರ ಜಿಲ್ಲೆಯ, ಬಸವಕಲ್ಯಾಣ ತಾಲೂಕಿನ, ಬಸವಕಲ್ಯಾಣ[೩] ಶಾಸನವನ್ನು 'ಮೂಕರಾಜ' ಎಂಬ ಶಾಸನಕವಿಯು ರಚಿಸಿದ್ದಾನೆ. ಶಾಸನದ ೧೫ನೇ ಸಾಲಿನಲ್ಲಿ 'ಮೂಕರಾಜ ರಚಿತಂ' ಎಂದು ಉಲ್ಲೇಖಗೊಂಡಿದೆ. ಚಾಲುಕ್ಯ ವಿಕ್ರಮದ ಕ್ರಿ.ಶ.೧೧೦೦ರ ಕಾಲಕ್ಕೆ ಸೇರಿದ ಈ ಶಾಸನದಲ್ಲಿ ಚಂದ್ರಪ್ರಭ ಜಿನಾಲಯವನ್ನು ಕಟ್ಟಿಸಿದ ಕಲ್ಯಾಣದ ಗೋಷ್ಠಿ ಶಾಶ್ವತವಾಗಿರಲಿ ಎಂದಿದೆ. ಹಿಂದೆ ಅನೇಕರು ಬಸದಿಗಳನ್ನು ಕಟ್ಟಿಸಿದ್ದರು. ಕಾಲಾಂತರದಲ್ಲಿ 'ದಾನಚಿಂತಾಮಣಿ', ಈಗ ರಚ್ಚಮಲ್ಲ ಪೆರ್ಮಾಡಿ ಮತ್ತು ರವಿಯಣ ಎಂಬುವರು ಬಕ್ತಿಯಿಂದ ಚಂದ್ರನಾಥ ಬಸಿದಿಯನ್ನು ಮಾಡಿಸಿದರು. ದೇವಪಾರ್ಯ್ಯ ಮತ್ತು ಚಟ್ಟಪ್ಪ, ಭರತ, ಶ್ರೀಪತಿ, ಮತ್ತು ರಾವದೇವನೆಂಬುವವರು. ಈ ಗೋಷ್ಠಿಯಲ್ಲಿದ್ದಂತೆಯೂ, ಇವರೆಲ್ಲರೂ ಈ ಬಸದಿಯ ನಿರ್ಮಾಣಕ್ಕೆ ಸಹಾಯ ಮಾಡಿದಂತೆಯೂ ತಿಳಿಯುತ್ತದೆ.

ಜಕ್ಕಣಬ್ಬೆ ಎಂಬುವಳು ಈ ಕಾರ್ಯದಲ್ಲಿ ಭಾಗವಹಿಸಿ ಮುನಿಗಳಗೆ ಆಹಾರ ದಾನದ ವ್ಯವಸ್ಥೆಯನ್ನು ಮಾಡಿದಳು. ಬಸದಿಯ ಸಹಸ್ರಕೂಟ ಬಿಂಬವನ್ನು ವೈಜಪಯ್ಯನ ಹಿರಿಯ ಮಗನಾದ ಹೀರಪಾಂಕ ಎಂಬುವವನು ಮಾಡಿಸಿದ, ಈಶ್ವರಶೆಟ್ಟಿ ಎಂಬುವವನು ಮಾನಸ್ತಂಭವನ್ನು ಮಾಡಿಸಿದ. ಶಾಸನದಲ್ಲಿ ಮುಂದೆ ಈಶರಾಂಕ, ಪೆರ್ಮಾಡಿ, ರಚ್ಚಮಲ್ಲ, ರವಿಯಣ, ಮುಂತಾದವರ ಹೊಗಳಿಕೆಯ ಪದ್ಯಗಳಿವೆ.

"ಎನೆ ಪೆಂಪಂ ಪೊಂಬಳಿಗೆಟ್ಟ ನರಕಿ ಕಟೆಂಬ ತಕ್ಕಿನಾಳಂ
ಬೆಂಕೊಳ್ವನಿನ್ನಂ ದಾನಗಜದುದ್ದಾನಿಯನೀಶ್ವರ ಸಮನ್ತು ಬಣ್ಣಿಸಲಳವೇ ॥
ಧರೆಯಂ ವ್ಯಾಪಿಸಿ ಸಪ್ತಭೂಧರಮುಮಂ....ಯ್ದೆತ್ತ ವಾರಾಸಿಯಂ
ಭರದಿಂ ದಾಂಟಿ ಬಳಿಕ್ಕೆ ದಿಗ್ಗಜದ ಬೆನ್ನೊಳ್ನಿನ್ದ ಕುಂನ್ದೇನ್ದು
ಸುಂದಿರ ತಾರಾಚಳತಾರಹಾರ ಹರಹಾಸಾಕಾಶ ಸಂಕಾಶ ಭಾಸುರ
ಕೀರ್ತಿಪ್ರಿಯನೀಶ್ವರಾಂಕ ನೆಸೆದಂ ವಿಶ್ವಂಭರಾ ಭಾಗದೊಳ್ ॥

ಪೆರ್ಮಾಡಿಯ ವರ್ಣನೆ

ವಿತರಣ ವಿನೋದಂ....ತತಿಜನಾಹ್ಲಾದ ನೀತಿರತ್ನಾಕರಂ
ನಿನ್ನತಿಶಯ ವಿಶೇಷ ಗುಣದುನ್ನತಿಯಂ ಪೆರ್ಮ್ಮಾಡಿ
ಪೊಗಳಲೆಮ್ಮೊಳಳವೆ ॥

ರಚ್ಚಮಲ್ಲ, ರವಿಯಣನ ಪ್ರಶಂಸೆ

ಪರಮಾಗಮಾರ್ತ್ಥಭಾವನೆ ನಿರತಿಶಯಾಹಾರದಾನ ಪರಿಣತಿ
ಲೋಕೊತ್ತರವೆನಿಸಿ ರಚ್ಚಮಲ್ಲಂ ಧರೆಗೆಸೆದಂ ದಿವ್ಯಭವ್ಯ ಚೂಡಾರತ್ನಂ ॥
ಮಿತ್ರಂ ಚೆಲ್ವಾಗಿರೆ ಶತಪತ್ರಮನೊನ್ದನೆಯಲದ್ಭುವಂ
ರವಿಯಣನೀಧಾತ್ರಿಯೊಳ್ವೀಸಪಯ್ಯನ ಮಿತ್ರಂ ಕುವಳಯಕೆ
ಪಡೆಸನೊದವಿದ ಮುದಮುಂ ॥

ಚಾವರಾಜ (ಕ್ರಿ.ಶ.೧೧೦೦)

ಬಳ್ಳಾರಿ ಜಿಲ್ಲೆಯ, ಹರಪನಹಳ್ಳಿ ತಾಲೂಕಿನ, 'ಉಚ್ಚಂಗಿದುರ್ಗ' ಶಾಸನವು[೪] ಚಾಲುಕ್ಯ ತ್ರಿಭುವನಮಲ್ಲನ ಕಾಲದಲ್ಲಿ ನೊಳಂಬವಾಡಿ ೩೨೦೦೦ ನ್ನು ಆಳುತ್ತಿದ್ದ ತ್ರಿಭುವನ ಮಲ್ಲ ಪಾಂಡ್ಯದೇವನು ಉಚ್ಚಂಗಿಯಿಂದ ಆಳುತ್ತಿದ್ದು ಉಚ್ಚಂಗಿಕೋಟೆಯಲ್ಲಿನ ಉಚ್ಚಂಗಿದೇವಿಗೆ ದತ್ತಿ ನೀಡಿದ ವಿವರವಿದೆ. ಅಲ್ಲದೆ ಕೂಡಲೂರ ಶಂಕರನಾರಾಯಣ ದೇವರ ತೀರ್ಥವನ್ನು ಹೆಸರಿಸುತ್ತದೆ.

"ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮನ್ತ
ವೀರಲಕ್ಷ್ಮೀಕಾನ್ತ ಗೋತ್ರಪವಿತ್ರ ಸುಜನಯ್ಕಮಿತ್ರ
ಅನಾಗತ ವ್ಯಾಸಕೀರ್ತಿ ವಿಳಾಸಂ ಪರೋಪಕಾರಾರ್ತಿ
ವಿಶದಯಶೋಮೂರ್ತಿ ಗುರುಪಾದಾಂಭೋಜಮಧುಕರ
ಶಿವಪಾದ ಶೇಖರ ಕೋದಣ್ಡರಾಮ ಕಾಮಿನೀಕಾಮ
ಭಾನ್ದವಸರೋವರಣ್ಡರಾಜಹಂಸ ಸ್ವಾಮಿವಂಚಕರಂಕುಸಂ"

ಎಂದು ಪಾಂಡ್ಯದೇವನನ್ನು ಹೊಗಳಲಾಗಿದೆ.

**"ಶ್ರೀಮನ್ಮಹಾಸಾಮನ್ತನುಂ ಬಳನಾಡಾಳ್ವರು ಶ್ರೀಪಾಂಡ್ಯದೇವರ್ಗ್ಗೆ**
**ಬಿನ್ನಪಂಗೆಯ್ಯಲು ಅನಾದಿ ಸಂಸಧ್ಧಿಯ ಪಟ್ಟಣಂ ಉಚ್ಚಂಗಿ**
**ಕೋಟೆಯ ಕಾಪೆಯವ್ವೆ ಉಚ್ಚಂಗಿದೇವಿಗೆ ಪಾಂಡ್ಯದೇವರು**
**ಧಾರಾಪೂರ್ವಕಂಮಾಡಿ ಸರ್ವನಮಸ್ಯವಾಗಿ ಬಿಟ್ಟರು"** ಎಂದು ವಿವರಗಳಿವೆ.

**ಚಟ್ಟಯ್ಯ (ಕ್ರಿ.ಶ. ೧೧೦೦)**

ಬಳ್ಳಾರಿ ಜಿಲ್ಲೆಯ, ಶಿರಗುಪ್ಪಿ ತಾಲೂಕಿನ, ಬಲ್ಲಕುಂದೆ ಗ್ರಾಮದ ಶಾಸನವನ್ನು[೫] ಪುಟೆಯಮ್ಮನ ಮಗ 'ಚಟ್ಟಯ್ಯ' ಕಾಲದ ಉಲ್ಲೇಖವಿಲ್ಲದ ಈ ಶಾಸನದ ಅಕ್ಷರಗಳನ್ನು ಗಮನಿಸಿ ೧೧೦೦ ಕಾಲಕ್ಕೆ ಸೇರಿರಬಹುದೆಂದು ಸಂಪಾದಕರು ಗುರುತಿಸಿದ್ದಾರೆ. ಸಿಂದುರಾಜನು ಬಲಕುನ್ದೆ ವಿಷಯವನ್ನು ಆಳುತ್ತಿದ್ದಾಗ ಸಿಂದರಾಜನ ಪತ್ನಿ ಕುನ್ದಬ್ಬೆ ಕೆಲವು ದಾನಗಳನ್ನು ಬಲ್ಲಕುನ್ದೆಯಲ್ಲಿ ಮಾಡುತ್ತಾಳೆ. ಬಲ್ಲಕುಂದೆಯಲ್ಲಿ ಆಗ ಕುಂದಕುಂದಾನ್ವಯದ ನಂದಿಸಂಘದ, ದೇಸಿಗಣದ ವೀರನಂದಿಮುನೀಂದ್ರನಿದ್ದ. ಈ ಎಲ್ಲ ವಿವರಗಳಿವೆ.

ವೀರನಂದಿಮುನೀಂದ್ರನ ಬಗ್ಗೆ ಶಾಸನವು ಹೀಗೆ ಹೇಳಿದೆ

**ಸತ್ಯ ತೀರ್ತ್ಥಾಚಾರ್ಯಃ ಕುನ್ದಕುನ್ದಾನ್ವಯೇ ಭೂತ್**
**ಭವ್ಯಾನನ್ದೇ ನನ್ದಿಸಂಘೇ ಪ್ರಸಿದ್ಧಃ ಖ್ಯಾತಃ**
**ಶುದ್ಧೇ ದೇಶಿಕಾಲ್ಯೆ ಗಣೇಸ್ಮಿನ್ ಶಿಷ್ಯಾನೂನಾಃ**
**ವೀರಣನ್ದಿಮುನೀನ್ದ್ರಃ॥**

**ಕಾಳಿಮಯ್ಯ (ಕ್ರಿ.ಶ.೧೧೦೦)**

ಬಳ್ಳಾರಿ ಜಿಲ್ಲೆಯ, ಶಿರಗುಪ್ಪ ತಾಲೂಕಿನ, ಕುರುವಳ್ಳಿಯ ಶಾಸನವನ್ನು[೬] ಕ್ರಿ.ಶ.೧೧ನೇ ಶತಮಾನಕ್ಕೆ ಸೇರಿರಬಹುದಾದ ಈ ಶಾಸನದಲ್ಲಿ ಮಲ್ಲಿಕಗಾಮುಣ್ಡನಿಗೆ ಭೂದಾನ ನೀಡಿದ ಉಲ್ಲೇಖವಿದೆ. ಅಲ್ಲದೆ ಊರಾಳಿಗೆ ವರುಷಕ್ಕೆ ಎರಡು ಬಟ್ಟೆಯ ಜವಳಿ ನೀಡಬೇಕೆಂದಿದೆ. ರಾರಾವಿಯ ಕುಲಕರ್ಣಿ 'ಕಾಳಿಮಯ್ಯ' ಎಂಬುವವನು ಈ ಶಾಸನವನ್ನು ಬರೆದಿದ್ದಾನೆ. ಈ ಶಾಸನದ ವಿವರಗಳು ಹೀಗಿವೆ.

**ಕ್ರೆಯ್ಯ.....ಯ್ಯ ಪಡೆದಮ್ಮಲ್ಲಿಕ ಗಾಮುಣ್ಡಮ**
**ಊರಾಳಿಗೆ ವರಿಸವರಿಸಕ್ಕೆರಡುವಟ್ಟಡ**
**ಜವಳಿ ನಡೆಯಿಸುವರಿನ್ತಾಪುದಕ್ಕೆ**
**ಅವದಾರಿಸಿ ವಾರಣಾಸಿಯೊಳು ಕು**
**ರುಕ್ಷೇತ್ರವು ವಾಗೆ ಕೆಯಂ ನಡೆಯಿಸುವುದು.**
**ನಡೆಯಿಸದನ್ನು ಅವನಳಿದ ಪಾಪಮಕ್ಕುಂ ॥** ಎಂದಿದೆ.

**ಮಲ್ಲಿಕಾರ್ಜುನ (ಕ್ರಿ.ಶ.೧೧೦೨)**

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯದ ಮುಂದಿರುವ ಎರಡು ಶಾಸನಗಳನ್ನು ಮಲ್ಲಿಕಾರ್ಜುನಭಟ್ಟ ಕವಿಯು ರಚಿಸಿದನೆಂದು ತಿಳಿಯುತ್ತದೆ. ಎರಡೂ ಶಾಸನಗಳಲ್ಲಿ ಚಾಲುಕ್ಯರ ೬ನೇ ವಿಕ್ರಮಾದಿತ್ಯನ ಉಲ್ಲೇಖವಿದ್ದು ಮೊದಲನೆಯ[೭] ಶಾಸನದ ಕಾಲ ಕ್ರಿ.ಶ.೧೧೦೨ ಎರಡನೇ[೮] ಶಾಸನದ ಕಾಲ ಕ್ರಿ.ಶ.೧೧೧೨.

ಕವಿ ತನ್ನ ಎರಡೂ ಶಾಸನಗಳ ಕೊನೆಯಲ್ಲಿ ಹೀಗೆ ಹೇಳಿದ್ದಾನೆ.

**ವಿನುತ ಮಧುರೋಕ್ತಿಯಿಂ ತ**
**ನ್ನನತಿಯ ವಚೋವಿಭೂತಿಯಿದುವೆ ಯಶಶಾ**
**ಸನ ಮಾದುದೆಂಬಿನಂ ಶಾ**
**ಸನ ಮಿನಿದಂ ಬರೆಶುಕವಿ ನಿಟಿಲಾಕ್ಷಂ**

**ಕವಿನುತ ಮೆನಲೊರೆದತಿಪಟು**
**ಕವಿ ಸಾರಸ್ವತ ಮರೋದಯನ ಕಿಂಕರನೀ**
**ಶಿವಧರ್ಮ ಶಾಸನ ಮನಭಿ**
**ನವಮಾಗಿದೆ ಮಲ್ಲಿಕಾರ್ಜುನಾರ್ಯಂ ಬರೆದಂ**

ಈ ಎರಡೂ ಶಾಸನಗಳೂ ಚಾಲುಕ್ಯರಾಜ ತ್ರಿಭುವನಮಲ್ಲದೇವನ ಕಾಲಕ್ಕೆ ಸೇರಿವೆ ಮೊದಲನೆಯದರಲ್ಲಿ ಗೋವಿಂದದಂಡನಾಯಕನು ಕೇದಾರೇಶ್ವರ ದೇವರ ಧೂಪ ದೀಪ ನೈವೇದ್ಯಕ್ಕೆಂದು ದತ್ತಿಯನ್ನು ಬಿಟ್ಟ ವಿಷಯವೂ, ಎರಡನೆಯ ಶಾಸನದಲ್ಲಿ ಕೊಂಕಣಾಧಿಪ ಚಂದ್ರನೃಪಕುಮಾರನಾದ ಕಾಮದೇವರಸನು ಕೇದಾರೇಶ್ವರ ದೇವರ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆಂದು ಬಿಟ್ಟ ದತ್ತಿಯ ವಿಷಯವೂ ಉಲ್ಲೇಖಗೊಂಡಿದೆ. ಕವಿಗೆ ಸಂಬಂಧಿಸಿದಂತೆ ಹೇಳುವಾಗ ಈತನಿಗೆ 'ಆಶುಕವಿನಿಟಿಲಾಕ್ಷ' ಎಂಬ ಬಿರುದಿತ್ತು. ಇಬ್ಬರು ಎರಡು ಪಕ್ಕಗಳಲ್ಲಿ ಕುಳಿತು ಬರೆದುದನ್ನು ಒಮ್ಮೆಗೆ ಬರೆಯುವ, ಹೊಸಕಾವ್ಯವನ್ನು ಹೇಳುವ, ಕೇಳುವ, ಕೇಳಿದುದನ್ನು ಆ ಕೂಡಲೇ ಹೇಳುವ ಮತಿಪ್ರೌಢಿಮೆ ಆತನದು. ಆತ ಶ್ರೀಮತ್ ಸಹಜ ಸಾರಸ್ವತ, ವಾಚಕ ವಾರಿಜಾಸನ, ನಾನಾ ವಿಧಾವಧಾರಣಾ ಚಕ್ರವರ್ತಿ, ತಾನು ಕವಿಸಾರಸ್ವತ ಮಹೋದಯನ ಕಿಂಕರನೆಂದು ಬರೆದ ಶಾಸನ ಶಿವಧರ್ಮಶಾಸನವೆಂದೂ ಹೇಳಿದ್ದಾನೆ. ಈತ 'ಗೊಬ್ಬುರ ಧಾರಣಾ ಸಾರ್ವಭೌಮ' ಸುಕವೀಂದ್ರ ಷಣ್ಮುಖಂ ಎಂದೂ ತನ್ನನ್ನು ಕರೆದುಕೊಂಡಿದ್ದಾನೆ. ಈತನ ಊರು

ಗೊಬ್ಬೂರು. ಈತ 'ಸಾರಸ್ವತ ಮಹೋದಯ' ಎಂಬ ಬಿರುದುಳ್ಳ ಸೋಮೇಶ್ವರ ಪಂಡಿತನ ಶಿಷ್ಯ 'ಮಲ್ಲಿದೇವವಿಭು' ಎಂದು ಹೇಳಿಕೊಂಡಿರುವುದರಿಂದ ಈತನು ದೊರೆಯ ಕೈಕೆಳಗೆ ಒಬ್ಬ ಅಧಿಕಾರಿಯಾಗಿದ್ದಂತೆ ಆರ್. ನರಸಿಂಹಾಚಾರ್ ಅಭಿಪ್ರಾಯ.[೯] ಈತನು ಪ್ರೌಢಕವಿಯಾಗಿದ್ದನೆಂಬುದು ಶಾಸನ ಪದ್ಯಗಳಿಂದ ತಿಳಿಯುತ್ತದೆ.

ಶಾಸನಗಳಲ್ಲಿ ಪ್ರಾಸಂಗಿಕವಾಗಿ ಗೋವಿಂದದಂಡನಾಯಕ, ಕಾಮರಸದೇವ ಮೊದಲಾದವರ ವರ್ಣನೆ ಬಂದಿದ್ದು ಎರಡನ್ನು ಇಲ್ಲಿ ಉದಾಹರಿಸಲಾಗಿದೆ. ಗೋವಿಂದ ದಂಡನಾಯಕನ ಶೌರ್ಯದ ವರ್ಣನೆ:

**ಬಱಿಸಿಡಿಲಂ ತುಡುಂಕುವ ಮದಾನ್ಧಗಜಕ್ಕಿದಿರಾಗಿ ಕೋಳ್ಕಳಂ**
**ಮುಱಿವುದದಿನ್ದ ಪೆರ್ಬುಲಿಯ ಮೀಸೆಯೊಳುಯ್ಯಲನಾಡುವೊಂದು ಪೇ**
**ರಱಿಕೆಯ ಬೀರರಾನ್ತಡಮದೇವೆಸಗೊಣ್ಡಪೆ ನೆತ್ತರಂ ನೆಲ**
**ಕ್ಕೆಱೆಯದೆ ಮಾಣ್ಬುಮಿೊ ಸಮರರಂಗದೊಳೀ ರಣರಂಗಭೈರವಂ ॥**

**ಪರಶುರಾಮನ ಮಹಿಮೆಯ ವರ್ಣನೆ**

**ಧರಣೀ ಮಂಡಲದೊಳ್ ಧರಾಭುಜರನಿರ್ಪತ್ತೊಂದು ಸೂಟಿಙ್ ಕೊಂದು ತ**
**ದ್ಧರಣೀಮಂಡಲಮಂ ಸಮಸ್ತ ಧರಣೀದೇವರ್ಗೆ ವಾದ್ರ್ಯಂತಿಕಂ**
**ಬರಮಿತ್ತಲ್ಲಿ ಧರಾಮರಸ್ವದೊಳಿರಲ್ಕಾಗೆಂದು ಪೋಗೊತ್ತಿ ಸಾ**
**ಗರಮಂ ಚಾಪದ ಕೊರ್ಪಿನೊಳ್ ಬುಧನುತಂ ಶ್ರೀ ರೇಣುಕೀ ನಂದನಂ ॥**

**ಅಚರಾಜ ಮಲ್ಲಿದೇವ (ಕ್ರಿ.ಶ.೧೧೦೪)**

ಧಾರವಾಡ ಜಿಲ್ಲೆಯ, ಹಿರೇಕೆರೂರು ತಾಲೂಕಿನ, ಅಬ್ಬಲೂರಿನಲ್ಲಿರುವ ಒಂದು ಶಾಸನದಲ್ಲಿ[೧೦] "ಸುಕರಸುಕವಿಯಪ್ಪಚರಾಜನುಂ ಸಹಜಕವಿ ಮಲ್ಲಿನಾಥದೇವನುಂ ಬರೆದರ್" ಎಂಬ ಉಲ್ಲೇಖದಿಂದ ಈ ಶಾಸನವನ್ನು ಅಚರಾಜ ಮತ್ತು ಮಲ್ಲಿನಾಥದೇವ ಇಬ್ಬರೂ ರಚಿಸಿದ್ದಾರೆಂದು ತಿಳಿಯಬಹುದು ಕಲ್ಯಾಣ ಚಾಳುಕ್ಯ ಚಕ್ರವರ್ತಿ ೬ನೇ ವಿಕ್ರಮಾದಿತ್ಯನನ್ನು ಉಲ್ಲೇಖಿಸಿರುವ ಶಾಸನದ ಕಾಲ ಕ್ರಿ.ಶ.೧೧೦೪.

ಈ ಶಾಸನದಲ್ಲಿ ಮಹಾಸಾಮಂತಾಧಿಪತಿ ಗೋವಿಂದರಸನು 'ಏಚಗಾವುಂಡ'ನ ಪ್ರಾರ್ಥನೆಯಂತೆ, ಅಬ್ಬಲೂರು ಬ್ರಹ್ಮೇಶ್ವರ ದೇವಾಲಯಕ್ಕೆ ನಾಗರಖಂಡಕ್ಕೆ ಸೇರಿದ ಮುರಿಗನಹಳ್ಳಿಯನ್ನು ಶೈವಾಚಾರ್ಯನಾದ ಸೋಮೇಶ್ವರ ಪಂಡಿತರಿಗೆ ದಾನ ಬಿಟ್ಟದ್ದನ್ನು

ವರ್ಣಿಸಲಾಗಿದೆ. ಈ ಸಂದರ್ಭದಲ್ಲಿ ಸೋಮೇಶ್ವರ ಪಂಡಿತರನ್ನು ಶಾಸನದಲ್ಲಿ ಈ ರೀತಿ ವರ್ಣಿಸಲಾಗಿದೆ.

**ಕೆಲಬರ್ ತರ್ಕವಿಶಾರದರ್ ಕೆಲಬರಾಪ್ತಾಳಾಪಸಂಬೋಧಕರ್**
**ಕೆಲಬರ್ ನಾಟಕಕೋವಿದರ್ ಕೆಲಬರೊಳ್ಗಬ್ಬಂಗಳಂ ಬಲ್ಲವರ್**
**ಕೆಲಬರ್ ವ್ಯಾಕರಣಜ್ಞರಿಂತಿನಿತುಮಂ ಬಲ್ಲನ್ನರಿಲ್ಲೆಲ್ಲಮಂ**
**ಸಲೆ ಸೋಮೇಶ್ವರಸೂರಿ ಬಲ್ಲನನಘಂ ನೈಯಾಯಿಕಾಗ್ರೇಸರಂ ॥**

**ಲಕ್ಷ್ಮಣ (ಕ್ರಿ.ಶ.೧೧೦೭)**

ಬೆಳಗಾವಿ ಜಿಲ್ಲೆಯ, ಪರಾಸಗಡ ತಾಲೂಕಿನ, ಹೊಸೂರು ಗ್ರಾಮದಲ್ಲಿರುವ ಶಾಸನವನ್ನು[೧೧] ಈ ಶಾಸನದ ರಚನೆಯ ಕಾಲ ಕ್ರಿ.ಶ.೧೧೦೭ ಲಕ್ಷ್ಮಣ ಕವಿಯ ತಂದೆ 'ಚಂದ್ರಪ್ರಭಪುರಾಣ'ವನ್ನು ಬರೆದ ಅಗ್ಗಳ. ಅಗ್ಗಳವನ್ನು ಶಾಸನದಲ್ಲಿ 'ವಿಬುಧವಂದ್ಯ ಅಗ್ಗಳ' ಎಂದು ಕರೆಯಲಾಗಿದೆ. ಆ ಪದ್ಯ ಹೀಗಿದೆ.

**ಆವರಿಸೆ ನಿಜಗುಣೋನ್ನತಿ**
**ಭೂವಳಯಮಭಿವಿನುತ ಜಿನಶಾಸನಮಂ ।**
**ಶ್ರೀ ವಿಭುವಂದ್ಯನಗ್ಗಳ**
**ದೇವಪ್ರಿಯಸೂನು ಲಕ್ಷ್ಮಣಂ ವಿರಚಿಸಿದಂ ॥**

ಲಕ್ಷ್ಮಣನು ರಚಿಸಿದ ಈ ಶಾಸನದಲ್ಲಿ ಒಬ್ಬ ಗಾವುಂಡನು ಬಸದಿಗೆ ಜೀರ್ಣೋದ್ಧಾರ ಮಾಡಿರುವುದನ್ನು ಹೇಳಿದೆ. ಈ ಶಾಸನ ಬಹುವಾಗಿ ನಶಿಸಿಹೋಗಿದೆ. ಒಂದೆರಡು ಪದ್ಯಗಳು ಹೀಗಿವೆ.

**ನೇಮಿಚಂದ್ರ ಮುನಿಯ ಪ್ರಶಂಸೆ;**

**ಸರಸೀಜೋದ್ಭವಗರ್ವ್ವ ಪರ್ವ್ವತಬೃಹದ್ದಂಬೋಳಿ ಚಾರ್ವ್ವಾತ ಭೀ**
**ಕರಗಂಧೇಭಜಾಂತಕಂ ಕಪಿಲಕಾಂತಾರಾಂತರೋಗ್ರಾಗ್ನಿ ದು**
**ರ್ದ್ಧರ ಚಾದ್ಧಾಭ್ರಪಮೀರಣಂ ಪ್ರವಿಲಸನ್ನೈಯಾಯಿಕಧ್ವಾಂತ ಘ**
**ಸ್ಮರ ರೋದೋಮಣಿ ನೇಮೀಚಂದ್ರನೆಸೆದಂ ತ್ರೈವಿಧ್ಯವಿದ್ಯಾಧರಂ**

**ದೊರೆವೆತ್ತ ನೇಮಿಚಂದ್ರಂ ಭವನವಿಧಿತರಾದ್ಧಾಂತ ವಾರಾಶಿಚಂದ್ರಂ.**
**ಸ್ಮರರಾಜಾಂಭೋಜಚಂದ್ರಂ ಪ್ರಥಿತಬುಧವಿಧುಸ್ವಾಮಿಹೃದ್ವ್ಯೋಮಚಂದ್ರಂ ।**
**ದುರಘಾಘಧ್ವಾಂಚಂದ್ರಂ ಸುಕೃತಸುರಹರಿಚ್ಚಂದ್ರನುದ್ಯಚ್ಚಕೋರೀ**
**ಪರಿಪೂರ್ಣಾನಂದಚಂದ್ರಂ ವಿಬುಧಬುಧಸಭಾನೀಳನೀರೇಜಚಂದ್ರಂ ॥**

**ಪ್ರಭಾಚಂದ್ರ ಮುನಿಗಳ ವರ್ಣನೆ :**

> **ಸ್ವಾಂತೋದ್ಭೂತ ಭುಜಪ್ರತಾಪಜಳಜಂ ಸಂಕೋಚಿಸಲ್ ದುರ್ಮದಾ**
> **ಕ್ರಾಂತ ಧ್ವಾಂತ ಕದಂಬಕಂ ಮಸುಳ್ದಿರಲ್ ಕಂಡೂರ್ಗಣಾಂಭೋನಿಧಿ**
> **ಪ್ರಾಂತಂ ವೃದ್ಧಿಯನಾಂತಿರಲ್ ಬೆಳಗುಗುಂ ಶ್ರೀಮತ್ಪ್ರಭಾಚಂದ್ರ ರಾ**
> **ದ್ಧಾಂತೇಶಾಂಘ್ರಿ ನಖೇಂದುವಾನತ ವಿನೇಯಸ್ತೋಮ ಹೃದ್ವ್ಯೋಮಮಂ ॥**

ಕಂದ ಹಾಗೂ ವೃತ್ತಗಳಲ್ಲಿ ಬರೆದ ಈ ಶಾಸನದ ಭಾಷೆ ಸಂಸ್ಕೃತಬೂಯಿಷ್ಠವಾಗಿದ್ದು ಕವಿಯು ಉಭಯಭಾಷಾ ವಿಶಾರದನಾಗಿದ್ದನೆಂದು ಶೃತಪಡಿಸುತ್ತದೆ.

**ದಾಮರಸ (ಕ್ರಿ.ಶ.೧೧೦೭)**

ಆಂಧ್ರಪ್ರದೇಶದ ಕರೀಂನಗರ ಜಿಲ್ಲೆಯ, ಕರೀಂನಗರ ತಾಲೂಕಿನ, ಸನಿಗರಂ[೧೨] ಗ್ರಾಮದ ಶಾಸನವನ್ನು ದಾಮರಸ ಎಂಬುವವನು ಬರೆದಿದ್ದಾನೆ. ಈ ಶಾಸನವು ಕಲ್ಯಾಣ ಚಾಲುಕ್ಯ ದೊರೆ ತ್ರಿಭುವನಮಲ್ಲದೇವ ಹಾಗೂ ಅನುಮಕುಂಡ ಪುರವರೇಶ್ವರ ಮಹಾಮಂಡಳೇಶ್ವರ ಕಾಕತೀಯ ಬೇತರಸರ ಆಳ್ವಿಕೆಯನ್ನು ಹೇಳಿದೆ. ಇನ್ನೊಬ್ಬ ಮಹಾಮಂಡಳೇಶ್ವರ ಜಗದ್ದೇವರಸನ ದಂಡನಾಯಕ ಕೊಂಡಮಯ್ಯ ಎಂಬುವವನು 'ಪುಲ್ಗನೂರು ೭೦' ರ ಬಳಿಯ ಸನಗರದ ರಲೆಯಗಾವುಂಡನನ್ನು ಒಪ್ಪಿಸಿ ಅಲ್ಲಿಯ ಸ್ವಯಂಭು ಭೀಮೇಶ್ವರ ದೇವರ ಸೇವೆಗೆ ಒಂದು ರಾಟಣವನ್ನು ಭೂಮಿಯನ್ನು ದತ್ತಿಯಾಗಿ ಕೊಟ್ಟದ್ದನ್ನು ಇದರಲ್ಲಿ ದಾಖಲಿಸಲಾಗಿದೆ. ಇಲ್ಲಿ ಉಲ್ಲೇಖಗೊಂಡ ಕಾಕತೀಯ ಬೇತನನ್ನು ಎರಡನೇಯ ಬೇತ ಎಂದೂ ಜಗದ್ದೇವರಸನನ್ನು ಪರಮಾರರ ಜಗದ್ದೇವ ಎಂದು ಹೇಳಬಹುದು. ಈ ಎಲ್ಲ ವಿವರಗಳನ್ನು ಗದ್ಯದಲ್ಲಿ ಹೀಗೆ ಹೇಳಲಾಗಿದೆ.

**"ಪುಲ್ಗನೂರು ೭೦ರ ಬಳಿಯ ಸನಗರದ ರಲೆಯಗಾವುಣ್ಡನ್ಮನೊಡಂಬಡಿಸಿ ಅಲ್ಲಿಯ ಸ್ವಯಂಭು ಭೀಮೇಶ್ವರದೇವರ್ಗ್ಗೆ ಪೂರ್ವದಲು ನಡವ ಬಾಡನ ಪರಿಗಿಯೆಂಬ ರಾಟಣಮಂ ದೇವರ ಪಡುವಣ ದೆಸೆಯ ಹನ್ನೆರಡು ಮತ್ತುರ್ಕ್ಕರಂಬದ ಕೆಯ್ಯಂ ಸರ್ವಬಾದಪರಿಹಾರವಾಗಿ ಪ್ರತಿಪಾಳಿಸಿ ಖಣ್ಡಸ್ಫಟಿತ ನವಸುಧಾಕರ್ಮ್ಮಕ್ಕಂ ದೇವರ ನಿವೇದ್ಯಕಂ ಕೊಟ್ಟರ್ ॥ ಎಂದಿದೆ.**

ಶಾಸನದ ಕೊನೆಯಲ್ಲಿ "ದಾಮರಸನ ಬರಹ ಮಂಗಳ ಮಹಾಶ್ರೀ ಶ್ರೀ" ಎಂದಿದೆ.

**ಕಾಳಯ (ಕ್ರಿ.ಶ.೧೧೦೮)**

ಬಳ್ಳಾರಿ ಜಿಲ್ಲೆಯ, ಹರಪನಹಳ್ಳಿ ತಾಲೂಕಿನ, ಬಾಗಳಿ ಗ್ರಾಮದ ಶಾಸನವನ್ನು[೧೩] 'ಕಾಳಯ' ಎಂಬುವವನು ಬರೆದಿದ್ದಾನೆ. ಈ ಶಾಸನದ ಕಾಲ ಕ್ರಿ.ಶ.೧೧೦೮ ಕಲ್ಯಾಣ ಚಾಳುಕ್ಯ ತ್ರಿಭುವನ ಮಲ್ಲದೇವನ ಆಳ್ವಿಕೆಯಲ್ಲಿ ತ್ರಿಭುವನಮಲ್ಲ ಪಾಂಡ್ಯದೇವನು 'ನೊಳಂಬವಾಡಿ ೩೨೦೦೦' ವನ್ನು ಆಳುತ್ತಿದ್ದಾಗ ಮಲಯಾಳ ವಡ್ಡವ್ಯವಹಾರಿ ಕೊಮರಮೂರ್ಕ್ಕನು ಸ್ವಯಂಭೂಕಲಿದೇವರ ನಂದಾದೀವಿಗೆಗೆ ಐದು ಗದ್ಯಾಣವನ್ನು ನೀಡಿ ಅದರ ಬಡ್ಡಿಯಲ್ಲಿ ನಂದಾದೀವಿಗೆ ನಡೆಯುವ ವ್ಯವಸ್ಥೆ ಮಾಡುತ್ತಾನೆ ಇದನ್ನು ಶಾಸನಗದ್ಯದಲ್ಲಿ ಹೀಗೆ ಹೇಳಿದೆ.

ತ್ರಿಭುವನಮಲ್ಲ ಪಾಂಡ್ಯದೇವರ ವರ್ಣನೆ:

> **ಸ್ವಸ್ತಿಸಮಧಿಗತ ಪಂಚಮಹಾಸಬ್ದ ಮಹಾಂಡಳೇಶ್ವರಂ**
> **ಕಾಂಚೀಪುರವರೇಸ್ವರಂ ಯದ್ವಂಸಾಂಬರದ್ಯುಮಣಿ ಸುಭಟಚೂ**
> **ಡಾಮಣಿ ನಿಜಕುಳಕಮಳಮಾರ್ತ್ತಣ್ಡ ಪರಿಚ್ಛೇದಿಗಣ್ಡ ರಾಜನಚೋಳಮ**
> **ನೋಭಂಗಂ ಶ್ರೀಮತ್ರಿಭುವನಮಲ್ಲದೇವ ಪಾದಾಬ್ಜಭ್ರಿಂಗಂ ನಾಮಾದಿ**
> **ಸಮಸ್ತಪ್ರಸಸ್ತಿಸಹಿತಂ ಶ್ರೀಮನ್ಮಹಾಮಂಡಳೇಶ್ವರ ತ್ರಿಭುವನಮಲ್ಲ**
> **ಪಾಂಡ್ಯದೇವರು ನೊಳಂಬವಾಡಿ ಮೂವತ್ತಿಚ್ಛಾಸಿರಮುಮಂ**
> **ದುಷ್ಟನಿಗ್ರಹವಿಸಿಷ್ಟಪ್ರತಿಪಾಳನದಿಂ ನಾಟ್ಟು ಸುಖದಿ ರಾಜ್ಯಂಗೆಯ್ಯುತ್ತಮಿರೆ ॥**

ಎಂದು ಬಗೆಬಗೆಯಾಗಿ ವರ್ಣಿಸಿದ್ದಾರೆ.

**ನಾರಣದೇವ (ಕ್ರಿ.ಶ. ೧೧೧೯)**

ಅವಿಭಜಿತ ಧಾರವಾಡ ಜಿಲ್ಲೆಯ, ಹಾವೇರಿ ತಾಲೂಕಿನ, ಹಾವೇರಿಯ[೧೪] ಶಾಸನವೊಂದನ್ನು ಶಾಸನ ಕವಿ ನಾರಣದೇವ ರಚಿಸಿದ್ದಾನೆ. ತಾನು ವಿಶ್ವಾಮಿತ್ರ ಗೋತ್ರದವನೆಂದು ಕವಿಗಳ ಮೆಚ್ಚುಗೆಗೆ ಪಾತ್ರನಾದವನೆಂದೂ ಅದರಲ್ಲಿ ಹೇಳಿದ್ದಾನೆ: ಹಾಗೆಯೇ ಈ ವೃತ್ತ ಪದ್ಯದಲ್ಲಿ ಹೀಗೆ ಹೇಳಿದ್ದಾನೆ.

> **ಪ್ರಣುತಾರ್ತ್ಥಂ ಹೃದ್ಯಮೀ ಪದ್ಯನಿಚಯಮನೆ ಪೇಳ್ದಂ ಮನಂಗೊಂಡು ವಿದ್ವ**
> **ದ್ಗಣಮತ್ಯಾನಂದದಿಂ ಬಣ್ಣಿಸೆ ಬರೆದನಿದಂ ಸತ್ಯವೀಂದ್ರಸ್ತುತಂ ನಾ ।**
> **ರಣದೇವಂ ಪಾರ್ವತೀವಲ್ಲಭಪದಯುಗಳಾರಾಧಕಂ ವಿಪ್ರವಂಶಾ**
> **ಗ್ರಣಿ ವಿಶ್ವಾಮಿತ್ರಗೋತ್ರಾಂಬುರುಹವನಪತಂಗಂ ವಿಶುದ್ಧಾಂತರಂಗಂ ॥**

ಮಹದೇವಭಟ್ಟನೆಂಬವನ ಮಗ ನಿಂಬರಾಜನು ಹಾವೇರಿಯಲ್ಲಿ ಸಿದ್ದೇಶ್ವರ ದೇವಾಲಯದಲ್ಲಿ ಗೀತ, ನೃತ್ಯ, ವಾದ್ಯಗಳ ಸೇವೆ ನಿರಂತರವಾಗಿ ನಡೆಯಬೆಕೆಂಬ ಉದ್ದೇಶದಿಂದ ದಾನಗಳನ್ನು ಕೊಡುತ್ತಾನೆ. ಈ ಮಹದೇವಭಟ್ಟ ಕಲ್ಯಾಣ ಚಾಳುಕ್ಯ ಮನೆತನದ ೬ನೇ ವಿಕ್ರಮಾದಿತ್ಯನ ದಂಡನಾಯಕನಾದ ಅನಂತಪಾಳನ, ಅಧೀನನಾದ ಒಬ್ಬ ಅಧಿಕಾರಿ. ನಾರಣದೇವ ಈ ಮಹದೇವಭಟ್ಟನನ್ನು ಅವನ ಪತ್ನಿ ಕಾಳಿಕಬ್ಬೆಯನ್ನು ಅವರೀರ್ವರ ಮಗ ನಿಂಬರಾಜನನ್ನು ಹೊಗಳಿ ಪದ್ಯಗಳನ್ನು ರಚಿಸಿದ್ದಾನೆ. ವರ್ಣನೆ ಸಾಂಪ್ರದಾಯಕವಾಗಿದ್ದರೂ ಶಬ್ದ ಜೋಡಣೆ, ಕಲ್ಪನೆ, ಉತ್ಪ್ರೇಕ್ಷೆಗಳು ಸುಂದರವಾಗಿವೆ. ರೂಪು, ಗುಣ, ಕಲೆಗಳ ತವರಾದ,

ಕಾಳಿಕಬ್ಬೆಯ ಪ್ರಶಂಸೆಯ ವೃತ್ತ ಪದ್ಯ ಈ ರೀತಿಯಿದೆ:

**ಸರಸಿಜಸಂಭವಂ ಬರೆದು ನಿರ್ಮ್ಮಿಸಿದಂ ಸ್ಮರನರ್ಕ್ಕರಿಂದೆ ವಿ**
**ಸ್ತರಿಸಿದನೆಯ್ದೆ ಸಂಪದವನುದ್ಭವಮಂ ಸೊಬಗಂ ವಿಳಾಸಮಂ ।**
**ಸರಸಕಳಾಪ್ರವೀಣತೆಯ ನಂಬಿನಮುನ್ನತಿವೆತ್ತ ಕಾಳಿಕ**
**ಬ್ಬರಸಿಯ ರೂಪನಾಂ ನೆಱಿಯೆ ಬಣ್ಣಿಪೆನೆಂಬವನೆಗ್ಗನಲ್ಲನೇ ॥**

ಸದ್ಗುಣಗಳ ಖನಿಯಾದ ಕಾಳಿಕಬ್ಬೆಯ ಮಗ ನಿಂಬನನ್ನು ಕುರಿತು ಈ ವೃತ್ತಪದ್ಯವೊಂದು ಹೀಗಿದೆ:

**ಪತಿಹಿತನೆ ಮರುತ್ತನಯನಾಹವಧೀರನೆ ಸವ್ಯಸಾಚಿ ಮಿ**
**ಕ್ಕತಿಶಯರೂಪನೇ ಕುಸುಮಸಾಯಕನುನ್ನತನೇ ಸುರಾಚಳಂ ।**
**ವಿತರಣಶೀಲನೆ ರವಿಜನುತ್ತಮನೇ ಮನುಮಾರ್ಗ್ಗನೆಂದು ಪಂ**
**ಹಿತಜನಮೆಯ್ದೆ ಬಣ್ಣಿಪುದು ನಿಂಬಿನನೀ ವಸುಧಾತಳಾಗ್ರದೊಳ್ ॥**

**ದಾನದಲ್ಲಿ ಈತನನ್ನು ಮೀರಿಸಿದವರಿಲ್ಲ, ಶಿಬಿ, ಕರ್ಣರಿಗೆ ಸಮಾನ:**

**ಪಂಬಲಿಸಲ್ಕೆವೇಡ ಶಿಬಿ ಭಾನುಸುತ ಪ್ರಭು ಖೇಚರಾಧಿರಾ**
**ಜಂ ಬಲಿಯೆಂಬ ದಾನಿಗಳನಾದರದಿಂದಮೆ ವಂದಿ ಬೇಡು ನೀಂ।**
**ಶಂಬರಸೂದನಪ್ರತಿಮರೂಪನನಪ್ರತಿಮಪ್ರತಾಪನಂ**
**ನಿಂಬನನಾನತದ್ವಿಟಕದಂಬನನುದ್ಧಗುಣಾವಳಂಬನಂ**

ನಿಂಬನ ಸತಿಯ ವರ್ಣನೆಯನ್ನು ಕಂದಪದ್ಯದಲ್ಲಿ ನೋಡಬಹುದು :

**ಕಂಬುಗ್ರಿವದ ಪೀನನಿ**
**ತಂಬದ ತೆಳ್ವಸಿಱ ಪಲ್ಲವಾದರದ ಚಕೋ**
**ರಾಂಬಕಯುಗಳದ ಸುದತಿಗೆ**
**ಶಂಖರಹರ ಶರಸಮೂಹನಲ್ಲನೆ ನಿಂಬ ॥** ಎಂದಿದೆ.

**ಸೋಮನಾಥಯ್ಯ (ಕ್ರಿ.ಶ. ೧೧೧೧)**

ಬಳ್ಳಾರಿ ಜಿಲ್ಲೆಯ, ಹಗರಿಬೊಮ್ಮನಹಳ್ಳಿ ತಾಲೂಕಿನ, ಹನಶಿ ಗ್ರಾಮದ ಶಾಸನ[೧೫]ವನ್ನು ಶಾಸನಕವಿ 'ಸೋಮನಾಥನು' ರಚಿಸಿದ್ದಾನೆ. ಈ ಶಾಸನವು ಚಾಲುಕ್ಯ ತ್ರಿಭುವನ ಮಲ್ಲನ ಸಾಮಂತನಾದ ತ್ರಿಭುವನಮಲ್ಲ ಪಾಂಡ್ಯದೇವನ, ನೊಳಂಬವಾಡಿ–೩೨೦೦೦ ವನ್ನು ಆಳುತ್ತಿದ್ದಾಗ ಇವನ ಸಾಮಂತನಾದ ಹೊಳ್ಳೆಯನು 'ಕೊಗಳಿ–೫೦೦' ರ ಹನಸೆಯ ಪರಶುರಾಮೇಶ್ವರ ದೇವರಿಗೆ ಚಿಕ್ಕಲಬ್ಬೆಗೇಜಿ‍ಯನ್ನು ಸೋಮಕರ್ತ್ಥರ ಪಂಡಿತರ ಕಾಲನ್ನು ತೊಳೆದು ದಾನ ನೀಡುತ್ತಾನೆ. ಇದೇ ಈ ಶಾಸನದ ವಸ್ತು. ಇದನ್ನು ಶಾಸನ ಗದ್ಯದಲ್ಲಿ ಹೀಗೆ ಹೇಳಿದೆ.

> **"ತ್ರಿಭುವನ ಮಲ್ಲ ದೇವರ ವಿಜಯರಾಜ್ಯಮು ಪ್ರವರ್ಧಮಾನಚಂದ್ರಾರ್ಕ್ಕತಾಂಬರಂ**
> **ಸಲುತ್ತಮಿರೆ ತತ್ಪಾದಜೀವಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರ**
> **ಕಾಂಚೀ ಯದುವಂಶಾಂಬರದ್ಯುಮಣಿ ಸುಭಟಚೂಡಾಮಣಿ ನಿಜ ಮಾರ್ತಣ್ಡ**
> **ಪರಿಚ್ಛೇದಿಗಣ್ಡ ರಾಜಗಚೋಳಮನೋಭಂಗಂ ಶ್ರೀವನಮಲ್ಲಪಾದಾಬ್ಜಬ್ರಿಂಗಂ**
> **ಶ್ರೀಮನ್ಮಹಾಮಂಡಳೇಶ್ವರ ತ್ರಿಭುವನ ಪಾಂಡ್ಯದೇವರು ನೊಳಂಬವಾಡಿ**
> **ಮೂವತ್ತಿರ್ಚ್ಛಾಸಿರಮಂ ಸುಖಸಂಕಥಾವಿನೋದ......ಮಿರೆ"**

ಎಂದು ದಾನ ನೀಡಿದ ವಿವರಗಳನ್ನು ಕಾಣಬಹುದಾಗಿದೆ.

ಸಾಮಂತ ಹೊಳ್ಳೆಯನನ್ನು ಕುರಿತು ಪ್ರಶಂಸೆಯ ನುಡಿಗಳು ಹೀಗಿವೆ. :

> **"ಸಮಸ್ತದುಷ್ಟಾರಾತಿಕಾಳಾನಳ ವಿರೋಧಿಬಳಜಳಧಿಬಡವಾ (ನಲ)...**
> **ಮುರಾರಿ ಪಗೆವರಮಾರಿ ಪೊಣರ್ಚ್ದರ ಭೀಮ ಚಲದಂಕ (ರಾಮ)...**
> **ಮಲೆಮದಾಯಿಗರಂ ಬೆಂಕ್ವೊಳ್ವ ಕೂಡಿತಪ್ಪುವ ನಾಯಕ, ಪ್ರಚಣ್ಡದಾಯಿಗ**
> **ಪರಬಾಧ ಕದಳೀವನ ಕುಂಜರ ತುರಗರೇವನ್ತ ವೈರಿಕ್ರಿತಾಂತ ದಾಯಿಗಮ್ರಿಗ**
> **ಶ್ರೀಪರಸುರಾಮೇಶ್ವರದೇವ ಲಬ್ದವರಪ್ರಸಾದ ಮ್ರಿಗ ಘಟ್ಟಿಯಂಕಕಾರ**
> **ಮಲ್ಲನಸಿಂಹ........ಮಾದಿಸಮಸ್ತಪ್ರಶಸ್ತಿಸಹಿತಂ ಶ್ರೀಮನ್ಮಹಾಸಾಮನ್ತ**
> **ಹೊಳ್ಳೆಯಂ ಸ್ತಿರಂ ಜೀಯತ್ ॥** ಎಂದಿದೆ.

**ಕವಿಕಂಠಾಭರಣ (ಕ್ರಿ.ಶ. ೧೧೧೧)**

ಬಳ್ಳಾರಿ ಜಿಲ್ಲೆಯ, ಹಡಗಲಿ ತಾಲೂಕಿನ, ಹೂವಿನಹಡಗಲಿ ಗ್ರಾಮದ ಶಾಸನವನ್ನು[೧೬] 'ಕವಿಕಂಠಾಭರಣ' ರಚಿಸಿದ್ದಾನೆ. ಚಾಲುಕ್ಯದೊರೆ ತ್ರಿಭುವನಮಲ್ಲ (೬ನೇ ವಿಕ್ರಮಾದಿತ್ಯ) ಕಲ್ಯಾಣದಿಂದ ಆಳುತ್ತಿರುವಾಗ ಆತನ ಮಾಂಡಲಿಕ ತ್ರಿಭುವನಮಲ್ಲ, ಪಾಂಡ್ಯದೇವನು 'ನೊಳಂಬವಾಡಿ ೩೨೦೦೦' ಆಳುತ್ತಿದ್ದ, ಆತನ ಮಾಂಡಲಿಕ (ಮುದ್ದ)ರಸನು, 'ನೊಳಂಬವಾಡಿ ೩೨೦೦೦' ತೆರಿಗೆ ಅಧಿಕಾರಿಯಾಗಿದ್ದಾಗ ಪೂವಿನಪಡಂಗಿಲಿಯ ೧೨೦ ಮಹಾಜನಗಳ ಮುಂದೆ

ಕಲಿದೇವ ಸ್ಥಾನಿಕ ಖಳೇಶ್ವರಪಂಡಿತನ ಕಾಲು ತೊಳೆದು ಸೋಮೇಶ್ವರದೇವರಿಗೆ ಪನ್ನಾಯದ ತೆರಿಗೆಯನ್ನು ದಾನ ಮಾಡುತ್ತಾನೆ. ಖಳೇಶ್ವರ ಪಂಡಿತನ ಸನ್ಯಾಸ ಮತ್ತು ಮುದ್ದರಸನ ಕೆಲಸಗಳನ್ನು ಶಾಸನದಲ್ಲಿ ವರ್ಣಿಸಿದೆ.

> **"ಕೆರೆಯಂ ಕಟ್ಟಿಸುತಿರ್ಪ್ಪ ದೇಗುಲಮನಾರಯ್ದೆತ್ತಿಸುತಿರ್ಪ್ಪಾಮನ್ತೋಜೆಯಂಬಾರದು**
> **ರ್ಮಾನಸರ್ವ್ವದೆನಿರಾಭಾರಂಗಳಂಮಾರ್ಪ್ಪನಿರ್ವ್ವಾಜಿಹಾರದಲ್ಲಿ ಜಲಂಗಳಂ, ಪಡೆದು**
> **ಧರ್ಮತಂಗಳಂಮಾರ್ಪ್ಪ ಕೊಳ್ವಜಿನ ಬಾರಿಸುತಿರ್ಪ್ಪ ಮುದ್ದರಸನಂ ಪೋಲ್ವನ್ನನಾ**
> **ವೊನ್ನರಂ॥ ಸನ್ದನಾರದನನ್ನೊವಂ ಸನ್ದ... ಕಂ...ಭೀಷ್ಮನಿಖಳೇಶ್ವರ**
> **ಮುನಿಪಂ ಕುನ್ದದಿಬಸ್ಸೆದಾಂ ಶುಚಿಯನ್ದಜುವರ್ ಬ್ರಹ್ಮಚಾರಿಗಳ ನೆಲೆ ಪೊಗಳ್ಗುಂ ॥**

ಎಂದು ಹಲವು ವಿಧವಾಗಿ ಪ್ರಶಂಸಿಸಿದ್ದಾರೆ.

**ಚಟ್ಟಪಾರ್ಯ (ಕ್ರಿ.ಶ.೧೧೧೨)**

ಅವಿಭಜಿತ ಧಾರವಾಡ ಜಿಲ್ಲೆಯ, (ಇಂದಿನ ಗದಗಜಿಲ್ಲೆ) ಲಕ್ಷ್ಮೇಶ್ವರ ಶಾಸನವನ್ನು[೧೭] ಗದಗ ಜಿಲ್ಲೆಯ ಗದಗ ತಾಲೂಕಿನ, ಹೊಂಬಳ[೧೮] ಶಾಸನವನ್ನು ಈ ಎರಡೂ ಶಾಸನಗಳನ್ನು ಚಟ್ಟಪಾರ್ಯ ಎಂಬ ಕವಿ ರಚಿಸಿದ್ದಾನೆ. ಮೊದಲನೇ ಶಾಸನದಲ್ಲಿ 'ಪೊಂಬೊಳಂ ಕರ್ತುವಾದಿ ಚೂಡಾಮಣಿ ಕನ್ದೆಯ ದೇವರ ಪುತ್ರಂ ಚಟ್ಟಪಾರ್ಯಂ ಪೇಳ್ದ' ಮತ್ತು ಎರಡನೇ ಶಾಸನದಲ್ಲಿ 'ಶ್ರೀ ಕನ್ದೆಯ ಗುರುಗಳ ಶಿಷ್ಯ' ಹರವಿಯರ ಚಟ್ಟಪಾರ್ಯಂ ಪೇಳ್ದು ಬರೆದಂ ಎಂದು ಉಲ್ಲೇಖವಿರುವುದರಿಂದ ಚಟ್ಟಪಾರ್ಯನು ವಾದಿಚೂಡಾಮಣಿ ಕನ್ದೆಯ ದೇವರ ಮಗ. ಈತನ ಗುರು ಕನ್ದೆಯದೇವ ಎಂದು ಗುರ್ತಿಸಬಹುದು. ಈ ಶಾಸನದಲ್ಲಿ ಕನ್ದೆಯದೇವರ ಪುತ್ರ ಎಂದಿರುವುದರಿಂದ ಇನ್ನೊಂದು ಶಾಸನದಲ್ಲಿ ಶ್ರೀ ಗುರುಗಳ ಶಿಷ್ಯ ಎಂದಿರುವುದನ್ನು ಗಮನಿಸಬಹುದು. ಮೊದಲನೆಯ ಶಾಸನ ಕ್ರಿ,ಶ.೧೧೧೬ ಕಾಲಕ್ಕೆ ಸೇರಿದೆ.

ಚಾಳುಕ್ಯ ೬ನೇ ವಿಕ್ರಮಾದಿತ್ಯನ ದಂಡನಾಯಕನ ಅನಂತಮಯ್ಯನು ಸೋಮೇಶ್ವರ ದೇವರ ಸೂಳೇಗೆರಿಗೆ ಕೊಟ್ಟ ದತ್ತಿಗಳ ವಿಷಯ ಈ ಶಾಸನವಸ್ತು. ಅನಂತಮಯ್ಯನು ಈ ದತ್ತಿಯನ್ನು ನೀಡಿದಾಗ ಅವನ ಭಾವಮೈದುನನಾದ ಶ್ರೀಪತಿಯರಸನು 'ಎರಡು ೬೦೦ರ ವಿಭಾಗ' 'ಬೆಳವೊಲ ೩೦೦' ಮತ್ತು 'ಪುರಿಗೆರೆ ೩೦೦' ಇವುಗಳನ್ನು ಆಳುತ್ತಿದ್ದನೆಂದೂ ಪುರಿಗೆರೆಯ ನಗರದ ಮಹಾಜನರಿಂದ ಮತ್ತು ಗಾವುಂಡರಿಂದ ಈ ದತ್ತಿ ಭೂಮಿಯನ್ನು ಅನಂತಮಯ್ಯನು ಕೊಂಡಿದ್ದನೆಂದೂ ಶಾಸನದಿಂದ ತಿಳಿದುಬರುತ್ತದೆ. ಈ ಶಾಸನದಲ್ಲಿ ೧೧ ಪದ್ಯಗಳನ್ನು ಒಳಗೊಂಡ ೪೪ ಸಾಲುಗಳಿವೆ.

ಚಟ್ಟಪಾರ್ಯನ ಕಾವ್ಯಪ್ರೌಢಿಮೆಯನ್ನು ತಿಳಿಯಲು ಈ ಪದ್ಯಗಳನ್ನು ನೋಡಬಹುದು:

**ಶ್ರುತಲಕ್ಷ್ಮಿ ಬುಧ ಸಭಾ ಮು**
**ದ್ರಿತಮಾದುದು ಸುಜನವೃತ್ತಿ ದುರ್ಜನಮುಖಮು**
**ದ್ರಿತಮಾದುದೀ ಜಗನ್ಮು**
**ದ್ರಿತಮಾದುದು ಪೆಂಪನನ್ತದಂಡಾಧಿಪನಾ ॥**

**ಅದಟರನಾಂತು ಕೊಲ್ವದಟನಣ್ಮೆದರಂ ಬಱುಕೆಯ್ವ ಮಿರ್ತು ಮಿ**
**ಱಿದರನಡುರ್ತು ಹೊಯ್ವ ಸಿಡಿಲುದ್ಧತರಂ ನೋಣೆಉಗ್ರರಾಹುವೆಂ**
**ಬುದನೆನೆ ಮತ್ತನಂತನೊಳನಂತಪರಾಕ್ರಮನೊಳ್ ಪೊಡರ್ಪುಗೆ**
**ಯ್ದಿದಿರಿಡುವೊಡ್ಡಿ ನಿತ್ತರಿಪ ಕಾದುವ ಮೆಯ್ಗಲಿಯಾರ್ಧರಿತ್ರಿಯೊಳ್ ॥**

ಧಾರವಾಡ ಜಿಲ್ಲೆಯ, ಗದಗ ತಾಲೂಕಿನ, ಹೊಂಬಳದಲ್ಲಿರುವ ಒಂದು ಶಾಸನವನ್ನು ಚಟ್ಟಪಾರ್ಯ ರಚಿಸಿದ್ದಾನೆ. ಈ ಶಾಸನದಲ್ಲಿ ಪೂರ್ಣವಾಗಿರುವ ಒಂದು ಕಂದಪದ್ಯವನ್ನು ವೃತ್ತವನ್ನೂ ಕೆಳಗೆ ಕೊಡಲಾಗಿದೆ.

ವರೇಶ್ವರಾಚಾರ್ಯ ಮತ್ತು ದುದ್ದಿಮಯ್ಯರ ಪ್ರಶಂಸೆ:

**ಧರೆಗೆಸೆದರ್ತತ್ಪುತ್ರ**
**ರ್ವರೇಶ್ವರಾಚಾರ್ಯರವರ ಸನ್ತಾನಕ್ಕಾ**
**ದರದಿ ನಮಿಪ್ಪ ಶಿಷ್ಯ**
**ರ್ಪರಮಾರ್ಥ ಬ್ರಹ್ಮಚರ್ಯಮುಳ್ಳಹರಿಹರೇ ॥**

**ನೆಟ್ಟನೆ ಕಾಳಿದಾಸ ವಿಭುಗಂ ವಿನಯಾನ್ವಿತ ಜಾತಿಕಬ್ಬೆಗಂ**
**ಪುಟ್ಟ ಬುಧಾಳಿ ಬಣ್ಣಿಸುವಿನಂ ಪ್ರಭು ಚಮರ ದುದ್ದಿಮಯ್ಯ**
**ನಿಟ್ಟಳಮಾಗೆ ತೇಜಮಳವಟ್ಟರೆ ಸತ್ಯದ ಶೌಚದೊಳ್ಪೊಡಂ**
**ಬಟ್ಟರೆ ಚಂದ್ರನಮಳ ಯಶೋನ್ನತಿಯಂ ತಳೆದಂ ಧರಿತ್ರಿಯೊಳ್ ॥**

**ಸರ್ವಾಶಿಭಟ್ಟ (ಕ್ರಿ.ಶ.೧೧೧೨)**

ಆಂಧ್ರಪ್ರದೇಶದ ಮೆಹಬೂಬ್‌ನಗರ ಜಿಲ್ಲೆಯ, ಅಲಂಪುರ ಗ್ರಾಮದ[೯೯] ಶಾಸನವನ್ನು ಸರ್ವಾಶಿಭಟ್ಟ ರಚಿಸಿದ್ದಾನೆ. ಚಾಲುಕ್ಯದೊರೆ ತ್ರಿಭುವನಮಲ್ಲದೇವನ ಪಟ್ಟ ಮಹಾದೇವಿಯೊಬ್ಬಳ ಆದೇಶದಂತೆ, ಜಿಮೂತವಾಹನಕುಲದ ಮಹಾಮಂಡಳೇಶ್ವರ ಬಿಕ್ಕರಸ ಎಂಬುವವನು ಅಲಂಪುರದ ಬ್ರಹ್ಮೇಶ್ವರದೇವರ ಸೇವೆಗೆ ಕೆಲವು ದತ್ತಿಗಳನ್ನು ನೀಡಿದಂತೆ ಇದರಲ್ಲಿ ತಿಳಿಸಿದೆ. ಬ್ರಹ್ಮೇಶ್ವರದ ಮಹಾಸ್ಥಾನಾಧಿಪತಿ ಧರಣೀಂದ್ರರಾಸಿ ಪಂಡಿತನ ಕಾಲನ್ನು ತೊಳೆದು ಈ ದತ್ತಿಯನ್ನು ಕೊಡಲಾಯಿತು. ಇದನ್ನು ಶಾಸನವು ಗದ್ಯದಲ್ಲಿ ಹೀಗೆ ಹೇಳಿದೆ.

“ಶ್ರೀಮತ್ರಿಭುವನಮಲ್ಲದೇವರ ಪಟ್ಟಮಹಾದೇವಿಯರ ನಿಯೋಘದಿಂ
ತ್ತಪಾದಪದ್ಮೋಪಜೀವಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರಂ
ತಗರಪುರವರೇಶ್ವರಂ ಮೃದಂಗಾದಿಘೋಷಣಂ ರಿಪುಕುಲಶೋಷಣಂ
ಸುವರ್ಣಗರುಡಧ್ವಜಂ ಜೀಮೂತವಾಹನಕುಲಸಂಭವ ಧೂ ಡಂಕ
ನೀಱಂ ಸತಿನನಂಕಕಾರಂ ಸಾಹಸೋತ್ತುಂಗಂ ಶ್ರೀ ಮಲ್ಲಿಕಾರ್ಜುನ
ಪಾದಾಬ್ಜಬೃಂಗಂ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾ
ಮಂಡಳೇಶ್ವರಂ ಬಿಕ್ಕರಸರು ಚಾಳುಕ್ಯ ....ಶ್ರೀ ಪರ್ವ್ವತದ ಪಶ್ಚಿಮದ್ವಾ
ರಾಧಿಷ್ಠಿತಮಪ್ಪಳಂ ಪುರದ ಶ್ರೀಬ್ರಹ್ಮೇಶ್ವರದೇವರ ರಂಗಭೋಗಕ್ಕಂ ॥  ಎಂದಿದೆ.

**ಅಯ್ಚರಾಜ (ಕ್ರಿ.ಶ.೧೧೧೩)**

ಅವಿಭಜಿತ ಧಾರವಾಡ ಜಿಲ್ಲೆಯ, ರೋಣ ತಾಲೂಕಿನ, ಅಬ್ಬಿಗೇರಿಯ ಶಾಸನವನ್ನು ಅಯ್ಚರಾಯ[೨೦] ರಚನೆ ಮಾಡಿದನೆಂದು ತಿಳಿದುಬರುತ್ತದೆ. ಕಲ್ಯಾಣ ಚಾಳುಕ್ಯರ ೬ ನೇ ವಿಕ್ರಮಾದಿತ್ಯನನ್ನು ಉಲ್ಲೇಖಿಸುವ ಈ ಶಾಸನದ ಕಾಲ ಕ್ರಿ.ಶ.೧೧೧೩. ಕವಿಯಾದ ಅಯ್ಚರಾಜನು ಜೈನಧರ್ಮಿಯನಾಗಿದ್ದನು. ಇವನ ತಂದೆ ಬರ್ಮದೇವ, ಇವನ ಭಾವನ ಹೆಸರು (ಅಕ್ಕನಗಂಡ) ಅಯ್ಚರಾಜ.

ಬಹುಭಾಗ ತ್ರುಟಿತವಾಗಿರುವ ಈ ಶಾಸನದಲ್ಲಿ ಅಬ್ಬಿಗೇರಿಯ ಬಸದಿ, ದೇವಾಲಯಗಳ ಜೀರ್ಣೋದ್ಧಾರಕ್ಕಾಗಿ ಕೊಟ್ಟ ದಾನಗಳನ್ನು ಹಾಗೂ ಹಲವು ಕಾಲದಿಂದ ನಿಂತುಹೋಗಿದ್ದ ಪುನರ್ ದತ್ತಿಯನ್ನು ಅಬ್ಬಿಗೇರಿಯ ಶಾಸನಕವಿ ಅಯ್ಚರಾಜನ ಅಕ್ಕನ ಗಂಡನು ಮಹಾಮಂಡಳೇಶ್ವರ ಆಚರಸನ ಹತ್ತಿರ ಹಾಗೂ ಊರಿನ ಇತರ ಮುಖಂಡರ ಹತ್ತಿರ ಪಡೆದು ದೇವಾಲಯಕ್ಕೆ ನೀಡಿದುದರ ಉಲ್ಲೇಖವಿದೆ. ಒಟ್ಟಿನಲ್ಲಿ ನಿಂತು ಹೋಗಿದ್ದ ದಾನಗಳನ್ನು ಪುನಃ ಆಚರಣೆಗೆ ತಂದವನು ಈ ಶಾಸನ ಕವಿಯ ಸಂಬಂಧಿಕ (ಭಾವ)ನಾಗಿರುವುದು ಈ ಶಾಸನದ ವಿಶೇಷವಾಗಿದೆ.

**ಈ ಶಾಸನದ ಕೊನೆಯಲ್ಲಿ ಶಾಪಾಶಯನನ್ನು ಕವಿ ಕಂದಪದ್ಯದಲ್ಲಿ ಕಟ್ಟಿದ್ದಾನೆ**

**ಅರಸರ್ಗೆ ಸೇನೆಯನ್ದರ**
**ಸರ ಕಾಣಿಕೆಗಾಯ ಧರ್ಮಮುಣ್ಬಂದೆಱಿಯೆಂ**
**ದರುವಣ ಮೇಗಳ್ವಣಮೆ**
**ನ್ದೆರೆಗಾಣಿಯನಕ್ಕೆ ಕೊಣ್ಡ ವರ್ಚಾಣ್ಡಾಳರ್.**

**ವಿಷ್ಣುಭಟ್ಟ (ಕ್ರಿ.ಶ.೧೧೧೫)**

ಆಂಧ್ರಪ್ರದೇಶದ ನಲ್ಗೊಂಡ ಜಿಲ್ಲೆಯ, ಭುವನಗಿರಿ ತಾಲೂಕಿನ, ಚಂದುಪಟ್ಲ ಗ್ರಾಮದ[೨೧] ಶಾಸನವನ್ನು 'ವಿಷ್ಣುಭಟ್ಟ' ಎಂಬ ಶಾಸನಕವಿ ರಚಿಸಿದ್ದಾನೆ. ಕಲ್ಯಾಣ ಚಾಳುಕ್ಯದೊರೆ ತ್ರಿಭುವನಮಲ್ಲದೇವನ ರಾಜ್ಯಭಾರವನ್ನು ಹೇಳಿದೆ. ಇದರಲ್ಲಿ ದೊರೆಯ ಮಹಾಪ್ರಧಾನ ಕರಹರದಧಿಷ್ಟಾಯಕ ಹಡಪವಳ ದಂಡನಾಯಕ ಮಲ್ಲಿಯಣಭಟ್ಟಣ ವಂಶಾವಳಿಯನ್ನು ವಿವರವಾಗಿ ಕೊಟ್ಟಿದೆ. ಮಲ್ಲಿಯಣಭಟ್ಟನ ಸೋದರಮಾವನಾದ ವಿದ್ದರಾಜ ದಂಡನಾಯಕನನ್ನು ಆತಿಶಯವಾಗಿ ಹೊಗಳಿದೆ. ವಿದ್ದರಾಜ ದಂಡನಾಯಕನು ವಿದ್ದೇಶ್ವರ ದೇವಾಲಯವನ್ನು ಕಟ್ಟಿಸಿ 'ವಿದ್ಯಾಧರತೀರ್ಥ' ಎಂಬ ಬಾವಿಯನ್ನು ತೋಡಿಸಿದನೆಂದು ಹೇಳಿದೆ.

ಶಾಸನದ ೨೯ನೇ ಸಾಲಿನಲ್ಲಿ ಕವಿಯ ಬಗ್ಗೆ ಈ ರೀತಿಯಾಗಿ ಹೇಳಿದೆ.

> **ಶಿವಭದ್ರೋಪಮ ಕೇಶವಾರ್ಯ್ಯರನವದ್ಯರ್ಭ್ಬಾವಿಪ್ರಖ್ಯ ಮಾಧವಧೀರಕ್ಕುಶಲ ತ್ರಿವಿಕ್ರಮ ಬುಧರ್ವಿದ್ಯಾವಿನೋದಾಭಿದಾನ ವಿಳಾಸರ್ಕ್ಕವಿರತ್ನವಿಭೂಷಣ ವಿಶೇಷರ್ವಿಷ್ಣುಭಟ್ಟರ್ಮ್ಮ ಹಾಕವಿಗಳ್ ನನೆಬಣ್ಣಿಸಗ್ಧರೆಯೊಳೇಂ ವಿದ್ಯಾಧರಂ ಧನ್ಯನು ॥**

ಎಂದು ಶಾಸನ ಕವಿಯ ಬಗ್ಗೆ ವರ್ಣಿಸಲಾಗಿದೆ.

**ಚಾವರಾಜ (ಕ್ರಿ.ಶ.೧೧೧೫):**

ಹಾಸನ ಜಿಲ್ಲೆಯ, ಶ್ರವಣಬೆಳಗೊಳ ತಾಲೂಕಿನ, ಎರಡು ಕಟ್ಟೆ ಬಸದಿಯ ಎರಡನೇ ಕಂಬದ ಶಾಸನ[೨೨] ಹಾಗೂ ಚಾಮುಂಡರಾಯ ಬಸದಿಯ ದಕ್ಷಿಣಭಾಗ ಮಂಟಪದಲ್ಲಿರುವ ಎರಡನೇ ಕಂಬದ ಶಾಸನ[೨೩] ಈ ಎರಡೂ ಶಾಸನಗಳನ್ನು ಚಾವರಾಜ ರಚಿಸಿದ್ದಾನೆ. ಈ ಎರಡೂ ಶಾಸನಗಳು ನಿಸಿದಿ ಶಾಸನಗಳಾಗಿದ್ದು, ಮೊದಲನೇ ಶಾಸನವು ಕ್ರಿ.ಶ.೧೧೧೫ಕ್ಕೆ ಸೇರಿದ್ದರೆ; ಎರಡನೆ ಶಾಸನವು ಕ್ರಿ.ಶ.೧೧೨೦ರ ಕಾಲಕ್ಕೆ ಸೇರಿದೆ. ಮೊದಲನೇ ಶಾಸನವು ಸಂಸ್ಕೃತ ಶಾಸನವಾದರೆ, ಎರಡನೇ ಶಾಸನವು ಕನ್ನಡ ಶಾಸನವಾಗಿದೆ. ಹೊಯ್ಸಳದಂಡನಾಯಕ ಗಂಗರಾಜನ ಕುಟುಂಬಕ್ಕೆ ಸಂಬಂಧಿಸಿದ ಮೊದಲನೆಯ ಶಾಸನದಲ್ಲಿ.

ಗಂಗರಾಜನ ಪತ್ನಿಯಾದ ಲಕ್ಷ್ಮೀಮತಿ ದಂಡನಾಯಕಿತಿ ದಂಡನಾಯಕ ತನ್ನ ಗುರುವಾದ ಪ್ರಭಾಚಂದ್ರಸಿದ್ಧಾಂತದೇವರ ಗುರುವಾದ ಮೇಘಚಂದ್ರ ತ್ರೈವಿದ್ಯದೇವರು ಸ್ವರ್ಗಸ್ಥರಾಗಲು ಅವರಿಗೆ ನಿಸಿದಿ ಮಾಡಿಸಿದ್ದನ್ನು ಹೇಳಿದೆ.

ಎರಡನೇ ಶಾಸನವು ಮಹಾಪ್ರಧಾನ ದಂಡನಾಯಕನಾದ ಗಂಗರಾಜನು ತನ್ನ ತಾಯಿಯಾದ ಪೋಚಾಂಬಿಕೆ ಸ್ವರ್ಗವಾಸಿಯಾದಾಗ ನಿಸಿದಿಯನ್ನು ಮಾಡಿಸಿದ್ದು ಹೇಳುತ್ತದೆ. ಈ ಎರಡೂ ಶಾಸನಗಳು ಸಂಸ್ಕೃತ, ಕನ್ನಡಗಳ ಗಂಭೀರ ಬಂಧದಲ್ಲಿ ರಚಿತವಾಗಿದೆ. ಸಂಸ್ಕೃತ, ಭೂಯಿಷ್ಠ ಶೈಲಿ ರಥೋದ್ಧತ, ಚಂಪಕಮಾಲೆ, ಶಾರ್ದೂಲ ವಿಕ್ರೀಡಿತ, ಇಂದ್ರವಜ್ರ, ವಿಪರೀತಾಖ್ಯಾನಕಿ, ವಸಂತತಿಲಕ, ಮಾಲಿನಿ, ಸ್ರಗ್ಧರೆಗಳು, ಅವನು ಛಂದಃಕುಶಲಿ ಎಂಬುದನ್ನು ತಿಳಿಸಿಕೊಡುತ್ತದೆ. ಚಾವರಾಜನ ಕಾವ್ಯನೈಪುಣ್ಯಕ್ಕೆ ಒಂದೆರಡು ಉದಾಹರಣೆಗಳಿವೆ.

**ಜನವಿನುತ್ ನೇಚಿಗಾಂಕನ**
**ಮನಸ್ತ ರೋಹಂಸಿ ಗಂಗರಾಜ ಚಮೂನಾಥನ**
**ಜನನಿ ಜನನಿ ಭುವನಕ್ಕೆ**
**ನೆನೆಗಳ್ದಐಳ್ಪೋಚಿಕಬ್ಬೆ  ಗುಣದುನ್ನತಿಯಂ**

ಇದು ಪೋಚಿಕಬ್ಬೆಯ ಗುಣದುನ್ನತಿಗೆ ನಿದರ್ಶನ ಪದ್ಯವಾಗಿದೆ.

**ಪೋಚಾಂಬಿಕೆಯನ್ನು ವರ್ಣಿಸಿದ ಪದ್ಯ :**

**ಅದನಿನ್ನೇನೆಂಬೆನಾನೊಂದಮಱ್ದಿ ಸುಕೃತಂ ನೋಡೆ ರೋಮಾಂಚವಾದ**
**ಪ್ಪುದು ಪೇಳ್ವುದ್ಯೋಗದಿಂದಂ ಸ್ಮರಿಯಿಪಡೆ ನಮೋ ವೀತರಾಗಾಯ ಗಾರ್ಹ**
**ಸ್ಥ್ಯದ ಯೋಶಿದ್ಬಾವದೀ ಕಾಲದ ಪರಿಣತಿಯಿಂ ಗೆಲ್ದು ಸಲ್ಲೇಖನಂ ಸೂ**
**ಪದದಿಂದಂ ದೇವಿ ಪೋಚಾಂಬಿಕೆ ಸುರಪದಮಂ ಲೀಲೆಯಿಂ ಸೂಱೆಗೊಂಡಳ್ ॥**

**ಮೇಘಚಂದ್ರ ವ್ರತಿಗಳ ವರ್ಣನೆ:**

**ಕ್ಷಮೆಗೀಗಳ್ ಜೌವನಂ ತೀವಿದುದತುಳ ತಪಃಶ್ರೀಗೆ ಲಾವಣ್ಯಮೀಗಳ್**
**ಸಮಸಂದಿರ್ದತ್ತು ತನ್ನೀ ಶ್ರುತವಧುಗಧಿಕಪ್ರೌಢಿಯಾಯ್ತಿಗಳಿಂದಂ**
**ದೆ ಮಹಾವಿಖ್ಯಾತಿಯಂ ತಾಳ್ದಿದನಮಳ ಚರಿತ್ರೋತ್ತಮಂ ಭವ್ಯಚೇತೋ**
**ರಮಣಂ ತ್ರೈವಿದ್ಯವಿದ್ಯೋದಿತ ವಿಶದಯಶಂ ಮೇಘಚಂದ್ರ ವ್ರತೀಂದ್ರಂ ॥**

**ಶಾಂತಿನಾಥ (ಕ್ರಿ.ಶ. ೧೧೨೦)**

ಆಂಧ್ರಪ್ರದೇಶದ ಗುಂಟೂರು ಜಿಲ್ಲೆಯ, ಬಾಪಟ್ಲ ತಾಲೂಕಿನ, ಚೆಬ್ರೋಲು ಗ್ರಾಮದ[೨೪] ಶಾಸನವನ್ನು ಶಾಸನಕವಿ ಶಾಂತಿನಾಥ ಬರೆದಿದ್ದಾನೆ. ಶಾಸನಾಂತ್ಯದಲ್ಲಿ ರಾಯದೇವೇಂದ್ರನಾದ ಶ್ರೀಮತ್ತ್ರಿಭುವನಮಲ್ಲನದೇವರೂ ದಂಡನಾಯಕ ಚೂಡಾಮಣಿ ಅನಂತಪಾಳನು ಸುಖದಿಂದಿರಲು "ಅವರ ಕೀರ್ತನೆಯಂ ಬರೆದಂ ಸಂಧಿವಿಗ್ರಹಿ ಪಾರ್ಶ್ವನಾಥನ ತನಯಂ ಶಾಂತಿನಾಥಂ" ಎಂದು ಹೇಳಿಕೊಂಡಿದ್ದಾನೆ. ಕಲ್ಯಾಣ ಚಾಲುಕ್ಯ ದೊರೆ ತ್ರಿಭುವನ ಮಲ್ಲನ ಆಳ್ವಿಕೆಯಲ್ಲಿ ದಂಡನಾಯಕನಾದ ಅನಂತಪಾಳನು ಇತರ ದಂಡನಾಯಕರೊಡನೆ ದೇವಾಲಯವೊಂದಕ್ಕೆ ದತ್ತಿ

ಬಿಟ್ಟುದನ್ನು ಹೇಳುವುದು ಶಾಸನದ ಉದ್ದೇಶ. ಅನಂತ ಪಾಳನ ಶೌರ್ಯವನ್ನು, ಅವನ ತಾಯಿ ಪಂಪಾದೇವಿಯನ್ನು, ಈ ಜೈನಕವಿ ಹೃದಯಂಗಮವಾಗಿ ವರ್ಣಿಸಿದ್ದಾನೆ. ಕವಿಯ ಕಾವ್ಯ ಪೌಢಿಮೆ ತಿಳಿಯಲು ಎರಡು ಉದಾಹರಣೆಗಳಿವೆ.

**ಅನಂತಪಾಳನ ಶೌರ್ಯ :**

**ಏಳಿದ ದಂಡನಾಯಕರನೇವೆಸವೇಟ್ಟಿಪೆ ಚೋಳರಾಜ್ಯ ನಿ**
**ರ್ಮೂಳನನಂಧ್ರ ಮಂಡಳಿಕ ಮಸ್ತಕಶೂಳನಚಕ್ರಕೂಟಸಂ**
**ಚಾಳನ ಗೂರ್ಜರ ಪ್ರಳಯಕಾಳನನಗ್ಗದನಂತಪಾಳನಂ**
**ಪೇಟ ಚಳುಕ್ಯಕುಂತಳನರೇಂದ್ರ ಮಹೇಶ್ವರನಂಕಕಾಱನಂ ॥**

**ಪಂಪಾದೇವಿಯ ಹಿರಿಮೆ:**

**ಆ ವಿಭುವಿನ ವಲ್ಲಭೆ ಭೂ**
**ದೇವಿ ವಚೋದೇವಿ ಲಕ್ಷ್ಮಿದೇವಿಯನಲ್ ಪೆಂ**
**ಪಾವಗಮಮರ್ದಿರೆ ಪಂಪಾ**
**ದೇವಿ ಪೊಗಟ್ತೆಯ ನೆಗಟ್ತೆಯಂ ತಳೆದಿರ್ದಳ್ ॥**

**ಆಸ್ಕಂದದೇವರು (ಕ್ರಿ.ಶ.೧೧೨೨)**

ಆಂಧ್ರಪ್ರದೇಶದ, ಬಳ್ಳಾರಿ ಜಿಲ್ಲೆಯ, ಹರಪನಹಳ್ಳಿ ತಾಲೂಕಿನ, ಯರಬಾಳು[೨೫] ಶಾಸನದಲ್ಲಿ ಗಂಗ, ಚೋಳ, ಲಾಳರನ್ನು ಗೆದ್ದು ಪಾಂಚಾಲರಿಂದ ಕಪ್ಪವನ್ನು ಪಡೆದ, ಚಾಳುಕ್ಯ ತ್ರಿಭುವನಮಲ್ಲನ ಮಂಡಳೇಶ್ವರನಾದ ಪಾಂಡ್ಯದೇವರು 'ನೊಳಂಬವಾಡಿ ೩೨೦೦೦' ಆಳುತ್ತಿದ್ದು, ಒಡೆಯನ ಆಜ್ಞೆಯಂತೆ ರತ್ನಪುರದ ರಾಜನನ್ನು ಸದೆಬಡಿದನೆಂದು ಹೇಳುತ್ತದೆ. ಮಾಚಬೋವ ಮತ್ತು ಸಿಂಗಬೋವರು ಮಹಾದೇವದೇವರಿಗೆ ನಿವೇಶನವನ್ನು, ಭೂಮಿಯನ್ನು ದಾನ ನೀಡುತ್ತಾರೆ.

ಶಾಸನಕವಿ ತೂಬಿಗೆರೆಯ ಊರೊಡೆಯ ಆಸ್ಕಂದದೇವರು "ಸ್ವಸ್ತಿ ಶ್ರೀಮತು ತೂಬಿಗೆಱೆಯ ಊರೊಡೆಯ ಆಸ್ಕಂದದೇವರು ಬರೆದ ಶಾಸನ" ಎಂದಿದೆ.

**ಮರ್ದಿಮಯ್ಯ (ಕ್ರಿ.ಶ.೧೧೨೩)**

ಹಾಸನ ಜಿಲ್ಲೆಯ, ಶ್ರವಣಬೆಳಗೊಳ ತಾಲೂಕಿನ, ಚಿಕ್ಕಬೆಟ್ಟದ ಮೇಲೆ ಚಾವುಂಡರಾಯನ ಬಸದಿಯ ದಕ್ಷಿಣ ಭಾಗದ ಮಂಟಪದ ಮೊದಲನೆಯ ಕಂಬವೊಂದರ ನಾಲ್ಕೂ ಮುಖಗಳ ಮೇಲೆ ಶಾಸನವೊಂದನ್ನು[೨೬] ಕೆತ್ತಲಾಗಿದೆ. ಶಾಸನದ ಕೊನೆಯಲ್ಲಿ "ಶ್ರೀಮತ್ ಪ್ರಭಾಚಂದ್ರ

ಸಿದ್ಧಾಂತ ದೇವರ ಗುಡ್ಡ ಹೆಗ್ಗಡೆ ಮರ್ದಿಮಯ್ಯ ಬರೆದಂ" ಎಂದಿದೆ. ಇದರಿಂದ ಮರ್ದಿಮಯ್ಯನು ಶಾಸನದ ಕರ್ತೃ. ಶಾಸನದ ಮೂಲಕ ಕವಿಯ ಬಗೆಗೆ ಹೆಚ್ಚು ವಿವರಗಳು ದೊರೆಯುವುದಿಲ್ಲ.

ಶಾಸನಕವಿ ಸಂಸ್ಕೃತ ಕನ್ನಡ ಭಾಷೆಗಳೆರಡರಲ್ಲೂ ಪರಿಣತವಾಗಿದ್ದ ಎಂದು ಶಾಸನದ ಪ್ರೌಢಶೈಲಿ ತಿಳಿಸಿಕೊಡುತ್ತದೆ. ಶ್ಲೋಕ, ಸ್ರಗ್ಧರೆ, ಇಂದ್ರವಜ್ರ, ವಿಪರೀತಾಖ್ಯಾನಕಿ, ವಸಂತತಿಲಕ, ಮಾಲಿನಿ, ಮುಂತಾದ ಛಂದೋಬಂಧಗಳನ್ನು ಕವಿ ಬಳಸಿದ್ದಾನೆ. ಶಾಸನದಲ್ಲಿ ಪದ್ಮನಂದಿ, ಗೃದ್ರಪಿಂಛ, ದಿವಾಕರನಂದಿ, ಗುಣನಂದಿ, ಮಳಧಾರಿದೇವ, ಕುಂದಕುಂದ, ಮುಂತಾದವರನ್ನು ಸ್ತುತಿಸಿರುವುದು ಒಂದು ವಿಶೇಷ. ವಿಷ್ಣುವರ್ಧನನ ದಂಡಾಧಿಪನಾದ ಗಂಗರಾಜ ತನ್ನ ಗುರುವಾದ ಶುಭಚಂದ್ರದೇವ ಸ್ವರ್ಗಸ್ಥನಾದಾಗ, ಅವರಿಗೊಂದು ನಿಸಿದಿಯನ್ನು ಕಟ್ಟಿಸಿದ್ದನೆಂದು ಹೇಳುವುದು.

**ಮರ್ದಿಮಯ್ಯನ ಕವಿತಾ ಚಾತುರ್ಯಕ್ಕೆ ಉದಾಹರಣೆಗಳು**

ಮಳಧಾರಿ ದೇವರಿಂದಂ
ಬೆಳಗಿದುದು ಜಿನೇಂದ್ರ ಶಾಸನಂ ಮುನ್ನಂ ನಿ
ರ್ಮ್ಮಳವಾಗಿ ಮತ್ತು ಮೀಗಳ್
ಬೆಳಗಿದಪುದು ಚಂದ್ರಕೀರ್ತಿಭಟ್ಟಾರಕರಿಂ.

**ದಿವಾಕರ ನಂದಿಯ ವರ್ಣನೆ**

ನರರಾದ್ಧಾಂತಿಕ ಚಕ್ರವರ್ತಿ ದುರಿತ ಪ್ರಧ್ವಂಸಿ ಕಂದರ್ಪಸಿ
ನ್ಧುರಸಿಂಹ  ವರಶೀಳಸದ್ಗುಣಮಹಾಂಭೋರಾಶಿ ಪಂಕೇಜ ಪು
ಷ್ಕರ ದೇವೇಭ ಶಶಾಂಕ ಸನ್ನಿಭಯಶಃ ಶ್ರೀರೂಪನೋಹೋ ದಿವಾ
ಕರಣಂದಿಬ್ರತಿ ನಿರ್ಮದಂ ನಿರುಪಮಂ ಭೂಪೇಂದ್ರಬೃಂದಾರ್ಚಿತಂ ॥

**ಮಳಧಾರಿ ಮುನೀಂದ್ರರ ಕುರಿತ ಪ್ರಶಂಸೆ**

ಬಳಯುತರುಂ ಬಳಲ್ಚುವ ಲತಾಂತಂಶರಂಗಿದಿರಾಗಿ ತಾಗಿ ಸಂ
ಚಳಿಸೆ ಪಳಂಚಿ ತೊಳ್ದವನನನೋಡಿಸಿ ಮೆಯ್ವಗೆಯಾದ ದೂಸಜೆಂ
ಕಳೆಯದೆ ನಿಂದ ಕರ್ಬುನದ ಕರ್ಗಿದ ಸಿಪ್ಪಿನಮರ್ಕೆವೆತ್ತ ಕ
ತ್ತಳಮೆನಿಸಿತ್ತು ಪುತ್ತಡರ್ದ ಮೆಯ್ಯ ಮಳಂ ಮಲಧಾರಿದೇವರಾ ॥

**ಮಾದಿರಾಜ (ಕ್ರಿ.ಶ.೧೧೨೩)**

ಚಿತ್ರದುರ್ಗ ಜಿಲ್ಲೆಯ, ದಾವಣಗೆರೆಯ ಪ್ರವಾಸಿ ಮಂದಿರದಲ್ಲಿ ಬಿದ್ದಿರುವ ಶಾಸನವನ್ನು[೨೭] ಕವಿ ಮಾದಿರಾಜನು ರಚಿಸಿದನೆಂದು ತಿಳಿದುಬರುವುದು. ಕಲ್ಯಾಣಿ ಚಾಲುಕ್ಯರ ೬ನೇ

ವಿಕ್ರಮಾದಿತ್ಯನ ಉಲ್ಲೇಖವಿರುವ ಈ ಶಾಸನದ ಕಾಲ ಕ್ರಿ.ಶ, ೧೧೨೩. ಈ ಶಾಸನದಲ್ಲಿ ರಾಯರಾಜ ಎಂಬುವವನು ವಾಸುದೇವರ ಪೂಜೆ ಮತ್ತಿತರ ಸೇವೆಗಳಿಗೆಂದು ಸ್ಥಾನಪತಿ ಕೃಷ್ಣಭಟ್ಟರಿಗೆ ಭೂಮಿಯನ್ನು ಬಿಟ್ಟ ವಿವರವಿದೆ.

ಈ ಶಾಸನದಲ್ಲಿ ಬಂದಿರುವ ಎರಡು ಪದ್ಯಗಳು ದಾವಣಗೆರೆ ತಾಲೂಕಿನ ಆನೆಕೊಂಡ ಗ್ರಾಮದಲ್ಲಿರುವ ಶಾಸನದಲ್ಲಿ ಬಂದಿರುವುದನ್ನು ನಾವು ಗಮನಿಸಬಹುದು. ಆ ಶಾಸನದ ಕಾಲ ಕ್ರಿ.ಶ. ೧೧೨೧. ಮಾದಿರಾಜನೇ ಆ ಶಾಸನದ ಕರ್ತೃ ಆಗಿದ್ದಾನೆ. ಆನೆಕೊಂಡದ ಶಾಸನ ಪಾಠವನ್ನಿಟ್ಟುಕೊಡು ಪ್ರಸ್ತುತ ಶಾಸನದಲ್ಲಿ ಸವೆದಿರುವ ಒಂದು ಪದ್ಯವನ್ನು ಪುನಃ ರಚಿಸಬಹುದಾಗಿದೆ.[೨೮]

**ಶ್ರೀರಾಮಳಂಕೃತತೋರಃಸ್ಥಳಮಳವಚಃ ಶ್ರೀವಧೂಕರ್ಣಪೂರಂ.**
**ವೀರಶ್ರೀ ಬಾಹುವಿಭ್ರಾಜಿತ ಮಣಿಮಯ ಕೇಯೂರನುದ್ಯದ್ಯಶೋವಿ**
**ಸ್ತಾರಂ ವೀರಾವತಾರಂ ಸಕಳಜನನುತಂ ಸಜನೌದಾರ್ಯಪಾರಾ**
**ವಾರಂ ಶ್ರೀರಾಯಪಾಂಡ್ಯೋಗ್ರಬಳ ಭುಜಬಳಾಟೋಪನಗ್ರ ಪ್ರತಾಪಂ.**

**ಶಾಸನದ ಉದ್ದೇಶವನ್ನು ನಿರೂಪಿಸಿರುವ ಗದ್ಯಭಾಗ**

"ಪಾಂಡ್ಯದೇವ ಪಾದಾಬ್ಜಬ್ರಿಂಗಂ ಸಾಹಸೊತ್ತುಂಗಂ ತೆನ್ನಾಡ ತಿರುಕ್ಕಣಂಗೌಡ ಕುಱುಂಗುಡಿಯಾಳ್ವ ಪರಿಚ್ಛೆದಿಗಣ್ಡ ಪಲ್ಲವರಾಯ ಪಡೆವೀಡಿನೊಳು ತಾಂ ಮಾಡಿಸಿದ ರಾಯರಾಜ ಬಣ್ನಳೂರಾಳ್ವ ಶ್ರೀ ವಾಸುದೇವರ್ಗೆ ನಿತ್ಯನಿವೇದ್ಯಾಂಗಭೋಗಕ್ಕಂ ಖಂಡಸ್ಪುಟತ ಜೀರ್ಣೋದ್ಧಾರಕ್ಕಂ ಆಹಾರ ದಾನಕ್ಕವಾಗಿ ಬೆಳ್ತುಱು ಪನ್ನೆರಡಱೊಳಗಣ ಬೆಳ್ಳೂರ ತಾರಣವಳ್ಳಿಯುಮನರಸನ ಕೆಱೆಯ ಕೆಳಗೊಂದು ಮತ್ತರು ತೋಂಟದಲಿ ತ್ರಿಭೋಗಾಬ್ಯನ್ತರವಾಗಿ ಶ್ರೀಮಚ್ಚಾಳುಕ್ಯ ವಿಕ್ರಮ ವರ್ಷದಲಿ ೪೮ನೇ ಸೋಭಕ್ರುತು ಸಂವತ್ಸರದುತ್ತರಾಯಣ ಸಂಕ್ರಾನ್ತಿಯನ್ದು ರಾಯಪಾಣ್ಡ್ಯದೇವರ ಕಯ್ಯಲು ಪರಮೇಶ್ವರದತ್ತಿಯಾಗ ಚಂದ್ರಾರ್ಕತಾರಂಬರಂ ಸಲ್ವಂತಾಗಿ ಪರಿಚ್ಛೇಧಿನಾಯಕಂ ಪಡೆದು ದೇವರ್ಗೆ ಕೊಟ್ಟ ಈ ಸ್ತಾನಕ್ಕೆ ಸ್ಥಾನಪತಿಯಾಗಿ ಶ್ರೀಕೃಷ್ಣಭಟ್ಟನಾದ ತಿರುಮಲೆ ನಂಬಿಗೆ ಪರಿಚ್ಛೇದಿನಾಯಕಂ ಕೊಟ್ಟಂ.

**ಸಂಕಣ (ಕ್ರಿ.ಶ. ೧೧೨೪)**

ಅವಿಭಜಿತ ಧಾರವಾಡ ಜಿಲ್ಲೆಯ, (ಇಂದಿನ ಗದಗ ಜಿಲ್ಲೆಯ) ಗದಗ ತಾಲೂಕಿನ, ಆಲೂರು ಗ್ರಾಮದಲ್ಲಿರುವ ನಾಗೇಶ್ವರ ದೇವಾಲಯದಲ್ಲಿಯ ಒಂದು ಶಾಸನವನ್ನು[೨೯]

ಸಂಕಣವೆಂಬ ಶಾಸನಕವಿ ರಚಿಸಿದನೆಂದು ಗೊತ್ತಾಗುತ್ತದೆ. ಇವನು ಶಾಂಡಿಲ್ಯ ಗೋತ್ರದ ಕುಲಕರಣಿ ಬೆಟ್ಟಮಯ್ಯನ ಅಳಿಯನೆಂದು ಆ ಶಾಸನದಲ್ಲಿ ಹೇಳಲಾಗಿದೆ. ಅದರ ಕಾಲ ಕ್ರಿ.ಶ. ೧೧೨೪.

೬ನೇ ವಿಕ್ರಮಾದಿತ್ಯನ ದಂಡನಾಯಕನಾದ ಸುರಿಗೆಯ ಹೆರ್ಮ್ಮಾಡಿ ದೇವನು ಮಾಳದಾಲೂರನ್ನು ಆಳುತ್ತಿದ್ದಾಗ ಆತನ ಸೋದರಮಾವ ಸುರಿಗೆಯ ನಾಗರಸನು ಸತ್ರ ಋಗ್ವೇದದ ಪಾಠಶಾಲೆ, ಮೊದಲಾದವುಗಳನ್ನು ನಡೆಸುವುದಕ್ಕಾಗಿ ಭೂಮಿಯನ್ನು ದಾನವಾಗಿತ್ತನೆಂದು ಹೇಳುವುದು ಈ ಶಾಸನದ ಉದ್ದೇಶ. ಈ ಕೆಳಗಣ ಪದ್ಯಗಳನ್ನು ನೋಡಿದಾಗ ಸಂಕಣ ಕವಿಯ ಕಾವ್ಯ ಸಾಮರ್ಥ್ಯವನ್ನು ಅರಿಯಬಹುದು.

**'ಕಂದ'ದಲ್ಲಿ ಕರ್ನಾಟಕ ಕುಳೇನ್ದು ಮಾದಿರಾಜನ ವರ್ಣನೆ:**

ಮಾದಿಗೆ ಬುಧಜನ ಹೃದಯಾ
ಹ್ಲಾದಿಗೆ ಕರ್ಪ್ಪೂರಚನಾಗರು ಋತ್ರಿಣಾ ।
ಮೋದಿಗೆ ನುತಸರಳಕಳಾ
ವೇದಿಗೆ ಸಮನೊಳರೆ ಸಕಳವಿಶ್ವಂಭರೆಯೊಳು ।

**ವೃತ್ತದಲ್ಲಿ ಮಾದಿರಾಜನ ಮಗ ಪೆರ್ಮಾಡಿ ದಂಡನಾಥನ ವರ್ಣನೆ:**

ಸಿರಿ ಪೊಸಮುತ್ತಿನಕ್ಕಸರದಂದಿರೆ ವಾಣಿ ಲಲಾಮ ರೇಖೆಯ
ನ್ತಿರೆ ಜಯಲಕ್ಷ್ಮಿ ರಕ್ಕೆವಣಿಯನ್ತಿರೆ ಪೇರುರದೊಳ್ಮುಖಾಬ್ಜದೋ ।
ಳ್ಜರಮೆಸೆಯುತ್ತಮಿರ್ದ್ದ ಭುಜದಣ್ಡದೊಳಿನ್ತು ನೆಗೆರ್ತ್ತೆವೆತ್ತನು
ರ್ಬ್ಬರೆಯೊಳಗಣ್ಯಪುಣ್ಯನಿಧಿ ಪೆರ್ಮ್ಮರಸಂ ಬುಧತಳ್ಪಭೂರುಹಂ ॥

**ಪೆರ್ಮಾಡಿ ಸೋದರ ಮಾವ ನಾಗರಸ:**

ತನ್ನಯ ತಿಣ್ಪನೇಳ್ಗೆ ಪಡಿಗಟ್ಟಳೆಯಾದುದು ಮಂದರಕ್ಕೆ ತ
ನ್ನುನ್ನತಿಮೇರುವಿಂಗೆ ಮಣಿಚೂಣಿಯಾದುದು ತನ್ನ ಮಿಕ್ಕದಾ
ನಂ ನ್ನವತಳ್ಪವಲ್ಲರಿಗೆ ಪೊಂಗುಡಿಯಾದುದು ತನ್ನ ಕೀರ್ತಿ ಕ
ಯ್ಗನ್ನಡಿಯಾದುದುರ್ವ್ವಿಗೆನೆ ನಾಗರಸಂ ನೆಗರ್ದ್ದಂ ಧರಿತ್ರಿಯೊಳ್ ॥

**ಮಾಳದಾಲೂರ ಅಗ್ರಹಾರದ ವರ್ಣನೆ :**

ಧರಣೀಕಾನ್ತೆಗೆ ಮಾಸವಾಡಿವಿಷಯಂ ಚಲ್ವಾಗಿ ಮಾಣಿಕ್ಯದಾ
ಭರಣಂಬೊಲೆಸೆದಿಪ್ಪುದಾವಿಶೇಷಯದೊಳ್ತಾಂ ಮಾಳದಾಲೂರ್ದ್ಧರಾ ।
ಮರರಿನ್ನೂರ್ವ್ವರಿಗಗ್ರಹಾರಮದನೊಳ್ಪಿ ಮುನ್ನೆ ಬಿಟ್ಟಂ ನರೇ
ಶ್ವರ ರತ್ನಂ ಜನಮೇಜಯಾಖ್ಯ ನೆನಲಿನ್ನೇ ವಣ್ಣಿಪಂ ಬಣ್ಣಿಪ ॥

**ಚಾವುಂಡರಾಯ (ಕ್ರಿ.ಶ. ೧೧೨೪)**

ಆಂಧ್ರಪ್ರದೇಶದ ಕಡಪ ಜಿಲ್ಲೆಯ, ಜಮ್ಮಲಮಡುಗು ತಾಲೂಕಿನ, ಪೆದ್ದಮುಡಿಯಂ[೩೦] ಗ್ರಾಮದ ಶಾಸನವನ್ನು ಚಾವುಂಡರಾಯ ರಚಿಸಿದ್ದಾನೆ. ಚಾಲುಕ್ಯದೊರೆ ತ್ರಿಭುವನಮಲ್ಲದೇವ ಹಾಗೂ ಅವನ ಮಹಾಮಂಡಳೇಶ್ವರ, ಸೋವಣ, ಚೋಳಮಹಾರಾಜ ಹಾಗೂ ಗೋಸನ ಮಹಾದೇವಿಯರ ಮಗ ಅತ್ಯಣಚೋಳಮ ಮಹಾರಾಜನ ಆಳ್ವಿಕೆಯನ್ನು ಹೇಳುತ್ತದೆ. ಅತ್ಯಣನ ಮಹಾಮಂಡಳೇಶ್ವರ ಚಿದ್ದಣಚೋಳ ಮಹಾರಾಜನು ಮುದಿವೇಮು ಗ್ರಾಮದ ಮಹಾಜನರಿಗೆ ಆ ಗ್ರಾಮವನ್ನು ದತ್ತಿಯಾಗಿ ಕೊಟ್ಟದ್ದನ್ನು ಹೇಳಿದೆ. ದತ್ತಿಯನ್ನು ಅಹೋಬಲ ನರಸಿಂಹದೇವರ ಸಮ್ಮುಖದಲ್ಲಿ ಕೊಡಲಾಯಿತು. ಚಿದ್ದಣ ಹೆಗ್ಗಡೆಯ ತಮ್ಮ ಚಾವುಂಡರಾಯನು ಈ ಶಾಸನವನ್ನು ರಚಿಸಿದ್ದಾನೆ. ಇದನ್ನು ಶಾಸನವು ಗದ್ಯದಲ್ಲಿ ವಿಶಿಷ್ಟವಾಗಿ ವರ್ಣಿಸಿದೆ.

ಚಾಳುಕ್ಯಾಭರಣಂ ಶ್ರೀಮತ್ರಿಭುವನಮಲ್ಲದೇವರ ವಿಜಯರಾಜ್ಯಮುತ್ತರೊತತರಾಭಿವ್ರಿದ್ಧಿ ಪ್ರವರ್ಧಮಾನಮಾ ಚಂದ್ರಾರ್ಕತಾರಂಬರಂ ಸಲುತ್ತಂ ಜಯಂತೀಪುರದ ನೆಲೆವೀಡಿನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ತತ್ಪಾದಪದ್ಮೋಪಜೀವಿ ಸಮಧಿಗತಿ ಪಂಚಮಹಾಶಬ್ದ ಮಹಾಮಂಡಳೇಶ್ವರನನೇಕ ರಿಪುದುರ್ದ್ಧರ ವರ ಭುಜಾಸಿಭಾಸುರ ಪ್ರಚಂಡಪ್ರದ್ಯೋದಿತ ದಿನಕರಕುಲನಂದನಂ ಕಾಶ್ಯಪಗೋತ್ರಂ ಕಲಿಕಾಲಾನ್ವಯಂ ಕಾವೇರಿವಲ್ಲಭಂ ಪಂಪಱೆಘೋಷಣಂ ಮಯೂರಪಿಂಛಧ್ವಜಂ ಸಿಂಹಲಾಂಛನನೊಱಿಯೊರ್ಪ್ಪುರವರೇಶ್ವರಂ ಪರಚಕ್ರಧವಳಂ ಮಂಡಳಿಕ ಶಿಖಾಮಣಿ ಶರಣಾಗತ ರಕ್ಷಾಮಣಿ ಚೋಳಸಾಮ್ತ ಗೊಂದಳಬಡಿವಂ ನಾಮಾದಿ ಪ್ರಶಸ್ತಿ ಸಹಿತಂ" ಎಂದು ಪ್ರಶಸ್ತಿಯನ್ನು ಹೇಳಿದ.

**ಚಂದ್ರಭಟ್ಟ (ಕ್ರಿ.ಶ.೧೧೨೫)**

ಧಾರವಾಡ ಜಿಲ್ಲೆಯ, ಹಾನಗಲ್ಲ ತಾಲೂಕಿನ, ಬಾಳೂರು ಗ್ರಾಮದ[೩೧] ಶಾಸನದ ಕರ್ತೃ ಈತ. ಶಾಸನದಲ್ಲಿ ಕವಿಯ ಬಗ್ಗೆ ತಕ್ಕದಾದ ವಿವರಗಳು ಲಭಿಸುವುದಿಲ್ಲ. ಈ ಶಾಸನವು ಗದ್ಯ ಪದ್ಯಾತ್ಮಕವಾಗಿದ್ದು, ೬೯ ಸಾಲುಗಳನ್ನೊಳಗೊಂಡಿದೆ.

ಕದಂಬ ತೈಲಪನು ಪಾನುಂಗಲ್ ವಿಭಾಗವನ್ನು ಆಳುತ್ತಿದ್ದಾಗ ಸ್ಥಾನಪತಿಯಾದ ಕಾಳಯ್ಯಜಯನು ಎಡೆವೊಳಲು ೭೦ರಲ್ಲಿರುವ ಬಾಳೆಯೂರಿನಲ್ಲಿ ಸೋಮೇಶ್ವರ ದೇವರಲಿಂಗವನ್ನು ಸ್ಥಾನವೆಂದೂ ಅಲ್ಲದೆ ಬಾಳೆಯೂರಿನ ಬಮ್ಮಗಾವುಂಡನೂ ಸೋಮೇಶ್ವರ ದೇವರಿಗೆ ಗದ್ದೆಯನ್ನು ಹಾಕಿಕೊಟ್ಟಿರುವ ಸಂಗತಿಯನ್ನು ಸೋಮೇಶ್ವರ ದೇವಸ್ಥಾನದಲ್ಲಿ ನಿತ್ಯ

ನಿರಂತರವಾಗಿ ನಂದಾದೀವಿಗೆಯನ್ನು ಬೆಳಗಿಸಲು ಅಯ್ವತೊಕ್ಕಲಿನ ತೆಲ್ಲಿಗಸೆಟ್ಟರು ಎಣ್ಣೆಯನ್ನು ಕೊಟ್ಟ ವಿಷಯವನ್ನು ಈ ಶಾಸನ ತಿಳಿಸುತ್ತದೆ. ಹಾನುಗಲ್ಲು ತಾಲೂಕಿನ ಬಾಳೂರಿನ ಬಗೆಗೂ ಕಾಳಿದಾಸನ ಮಗನಾದ ಬರ್ಮಗಾವುಂಡನ ಮನೆತನದ ಬಗೆಗೂ ವಿವರಗಳನ್ನು ನೀಡುತ್ತದೆ. ಬರ್ಮಗಾವುಂಡನು ಸೋಮೇಶ್ವರ ದೇವರ ಭಕ್ತನೆಂದೂ ಪ್ರಾಯಶಃ ಈ ದೇವಸ್ಥಾನದ ನಿರ್ಮಾಣಕ್ಕೆ ಕಾರಣನಾಗಿದ್ದ ಎಂಬುದು ವೇದ್ಯವಾಗುವುದು.

ಚಕ್ರವರ್ತಿ ಮಾಂಡಲಿಕರ ವರ್ಣನೆ, ದೇಶ. ಮತ್ತು ಪುರದ ವರ್ಣನೆ ಈ ಶಾಸನದಲ್ಲಿ ವಿಸ್ತಾರವಾಗಿದೆ. ಈ ಶಾಸನದಲ್ಲಿ ಬರುವ ಪದ್ಯ ಗದ್ಯಗಳು ಸುಂದರವಾಗಿವೆ. ಸತ್ವಯುತವಾಗಿವೆ. ಶಬ್ದಾಲಂಕಾರಗಳ ಹೆಚ್ಚಳವಿದೆ. ಕವಿ ಚಂದ್ರಭಟ್ಟನ ಭಾಷಾಪ್ರೌಢಿಮೆ ಆಶ್ರಿತರಾಜನಾದ ವಿದ್ಯಾಧರೇಂದ್ರ ವಿಕ್ರಮಾದಿತ್ಯದೇವನ ಮೇಲಿನ ಘನತೆ ಗೌರವಗಳನ್ನು ಪ್ರತಿಬಿಂಬಿಸುತ್ತವೆ. ಮಾದರಿಗೆ ಕೆಲವು ಪದ್ಯಗಳನ್ನು ನೋಡಬಹುದು. ಇವುಗಳಲ್ಲಿ ಯಮಕಾಲಂಕಾರವನ್ನು ಕವಿ ಬಳಸಿದ್ದಾನೆ.

**ವಿಕ್ರಮಾದಿತ್ಯನ ಹಿರಿಮೆ ವರ್ಣಿಸುವ ಪದ್ಯ :**

> **ಬಳವದ್ಭೂಪಾಳನಾರಾಯಣಬಳವದು ಭೂಪಾಳತಾರಾಭ್ರಿಚಂದ್ರಂ**
> **ಬಳವದ್ಭೂಪಾತಧಾ ಭಾಸ್ಕರಬಳವದು ಭೂಪಾಳವಿದ್ಯಾಧರೇಂದ್ರಂ**
> **ಬಳವದ್ಭೂಪಾಳ ಕಂಜಾಸನ ಬಳವದು ಭೂಪಾಳಚಾಳುಕ್ಯರುದ್ರಂ**
> **ಬಳವದ್ಭೂಪಾಳ ಚೂಡಾಮಣಿ ಪದಕಿರಣಂ ವಿಕ್ರಮಾದಿತ್ಯದೇವಂ ॥**

**ಪಾನುಗಲ್ಲಿನ ವರ್ಣನೆ :**

> **ಬೇಱಿಕೊಂದುದ್ಭಾಸಿ ಬೇಱಿಕೊಂದಖಿಳಲಕುಮಿ ಬೇಱಿಕೊಂದು ವಿಸ್ತಾರಪೂರಂ**
> **ಬೇಱಿಕೊಂದುತ್ಸಾಹ ಸಂಪತ್ಪದದ ರಮಣಿ ಬೇಱಿಕೊಂದು ಲಾವಣ್ಯಪುಣ್ಯಂ**
> **ಬೇಱಿಕೊಂದೈಶ್ವರ್ಯರಾರಾಜಿತದತಿಶಯ ಬೇಱಿಕೆಂಬಿನಂ ಪಾನುಗಲ್ಲ**
> **ಯ್ಯಾಱೇಂ ಬೀಱುತ್ತೋ ಬೆಲ್ವಂತದು ಮಹಿಗೆ ಮಹಾಶೋಭೆ ಕಣ್ಗೆಡ್ಡಮಾಗಲ್ ॥**

**ಕುಂತಳ ವಿಷಯದ ವರ್ಣನೆ :**

> **ಮೇರುಗಿರಿಯಿಂದೆ ತೆಂಕಣ**
> **ವಾರಿಧಿ ಪರಿವೃತವಸುಂಧರಾವನಿತೆಯ ವಿ**
> **ಸ್ತಾರ ಮುಖ ಭರತವರ್ಷ ವಿ(ದಿ)**
> **ರಾರಾಜಿಸುತಿರ್ಪುದೆಸೆವ ಕುಂತಳವಿಷಯಂ।**

**ಶಾಸನದ ಕೊನೆಯಲ್ಲಿ ಶಾಸನಕವಿಯ ಬಗ್ಗೆ ಪ್ರಸ್ತಾಪವಿದೆ.**

> **ಸ್ವಸ್ತಿ ಮಭ್ಯುದ್ಯತೇ ಕಾವ್ಯಂ ರತ್ನಾಳಂಕೃತಭೂಷಣಂ**
> **ವಿದ್ಯುಭಾವಿತವಿಖ್ಯಾತಂ ಚಂದ್ರಭಟ್ಟರವಿಶ್ರುತಂ ॥** ಎಂದಿದೆ.

**ನಾಗಾರ್ಜುನ ಪಂಡಿತ (ಕ್ರಿ.ಶ.೧೧೨೫)**

ಧಾರವಾಡ ಜಿಲ್ಲೆಯ, ಧಾರವಾಡ ತಾಲೂಕಿನ, ಮುಗದ ಎಂಬ ಗ್ರಾಮದಲ್ಲಿನ[೩೨] ಒಂದು ಶಾಸನದ ಕರ್ತೃ ನಾಗಾರ್ಜುನ ಪಂಡಿತ. ಈ ಗ್ರಾಮವು ಹಲಸಿಗೆ ೧೨ ಸಾವಿರದ ಪ್ರಾಂತದಲ್ಲಿ ಮಹಾರಾಜವಾಡಿ ನಾಡಿಗೆ ಸೇರಿದ ೩೦ ಹಳ್ಳಿಗಳಿಗೆ ಮುಖ್ಯ ಗ್ರಾಮವಾಗಿತ್ತು. ಆ ಮೂವತ್ತರ ನಾಳ್ಗಾವುಂಡನಾದ ನಾಕರಸನ ತಮ್ಮ ಬಮ್ಮದೇವನೆಂಬವನು ಕೆರೆಗೆ ಗದ್ದೆಯನ್ನೂ; ಮನೆಯನ್ನೂ ಬಿಟ್ಟುದನ್ನು ಈ ಶಾಸನದಲ್ಲಿ ಹೇಳಿದೆ.

೬ನೇ ವಿಕ್ರಮಾದಿತ್ಯ ತ್ರಿಭುವನ ಮಲ್ಲದೇವನ ಆಡಳಿತಾವಧಿಯಲ್ಲಿ ರಚನೆಗೊಂಡ ಈ ಶಾಸನವು ೧೦೩ ಸಾಲುಗಳಿಂದ ಕೂಡಿದೆ. ಗದ್ಯ ಪದ್ಯಾತ್ಮಕವಾದ ಶಾಸನವಾಗಿದೆ. ಹಲಸಿಗೆ ಪನ್ನಿರ್ಚ್ಛಾಸಿರದ ಮಹಾರಾಜವಾಡಿ ನಾಡಿನ ಮುಗದ ಮೂವತ್ತಕ್ಕೆ ನಾರ್ಗಾಮುಣ್ಡನಾಗಿದ್ದ ಚಾವುಂಡರಾಯನ ಸಂತತಿಯವನಾದ ಬಮ್ಮದೇವ ಮತ್ತು ಅವನ ಹಿರಿಯಪ್ಪನ ಮಗ ನಾಕರಸ, ನಾಕರಸನ ತಂದೆ ಮಾರ್ತಾಂಡ, ತಾಯಿ ಗೊಜ್ಜಿಯಕ್ಕ, ಇವರನ್ನು ಶಾಸನದಲ್ಲಿ ವಿಶೇಷವಾಗಿ ವರ್ಣಿಸಲಾಗಿದೆ. ಧರ್ಮವನ್ನು ಅಳಿದರೆ, ದಾನ ದತ್ತಿಗಳನ್ನು ಅಪಹರಿಸಿದರೆ ಉಂಟಾಗುವ ದುಷ್ಫಲಗಳನ್ನು ಸಾರಿ ಹೇಳುವಾಗ ಜೈನರಿಗೂ, ಶೈವರಿಗೂ, ಕೂಡಿಯೇ ಅನ್ವಯವಾಗುವಂತಹ ಕೆಲವು ಮಾತುಗಳನ್ನು ಹೇಳಿರುವುದು ಈ ಶಾಸನದ ವೈಶಿಷ್ಟ್ಯ. ಲಿಂಗವನ್ನು ಒಡೆದ, ಗೋಕುಲವನ್ನು ಅಳಿದ, ಮತ್ತು ಜಗತ್ತಿನೊಳಗಿನ ಜೀವರಾಶಿಯನ್ನು ಕೊಂದು ಆನಂದದಿಂದ ನೆತ್ತರವನ್ನು ಈಂಟಿದ ಪಾಪದಿಂದ ಒದಗುವ ಗತಿ. ಧರ್ಮವನ್ನು ಅಳಿದವರಿಗೆ ಆಗುವುದೆಂದು ಈ ಶಾಸನದ ೨ ಕಂದಪದ್ಯಗಳಲ್ಲಿ ಹೇಳಲಾಗಿದೆ. ಚಂಪಕಮಾಲೆ, ಉತ್ಪಲಮಾಲೆ, ಮತ್ತೆ ಭವಿಕ್ರೀಡಿತ ವೃತ್ತಗಳಲ್ಲಿ ಶಾಸನದ ಪದ್ಯಗಳು ಬಹು ಸುಂದರವಾಗಿ ಮೂಡಿಬಂದಿವೆ.

**ಗೊಜ್ಜಿಯಕ್ಕ, ನಾಕಿರಾಜನ ಹಿರಿಮೆಯನ್ನು ಹೇಳಿದೆ.:**

**ಪರಹಿತೆಯೆಂದು ಪುತ್ರವತಿಯೆಂದು ಮಹಾಸತಿಯೆಂದು ಧರ್ಮದೊಳ್**
**ಪರಿಸರೆಯೆಂದು ದಾನನಿಧಿಯೆಂದು ಗುಣೋನ್ನತೆಯೆಂದು ಲಕ್ಷ್ಮಿಗಾ**
**ಗರವೆನಿಸಿರ್ಪ ಪುಣ್ಯವಧುವೆಂದು ಪತಿಬ್ರತೆಯೆಂದು ಸದಾ ಸ**
**ಚ್ಚರಿತಪವಿತ್ರೆಯೆಂದು ಧರೆ ಬಣ್ಣಿಸುತಿರ್ಪುದು ಗೊಜ್ಜಿಯಕ್ಕನಂ ॥**

**ವಿಸಸನದೊಳ್ತೋಳ್ಸಾಸಿರ**
**ದೆಸಕಮುಮಂ ನೊಸಲ ಕಣ್ಣುಮಂ ತೋಱುವನೆಂ**
**ಬಸದೃಶಮೆನಿಸುವ ಬೀರದ**
**ಮಸಕಕ್ಕೆ ಪಿನಾಕಿಯೆನಿಸುವಂ ನಾಕರಸಂ.**

**ಶಾಸನದ ಗದ್ಯ ಮಾದರಿ:**

> **ಅಂತೆನಿಸಿ ನೆಗರ್ದಿರ್ದ ಸಾಮಂತಮಾರ್ತಾಂಡಂಗಂ ಮಹಾಸತಿಯಂ ಪುಣ್ಯವತಿಯುಂ ಜಿನಶಾಸನ ದೇವತೆಯುಂ ಮತಿಯ ಗಂಗೆಯುಮೆನಿಸಿ ನೆಗರ್ದ ಶ್ರೀಮದ್ ಗೊಜ್ಜಿಕಬ್ಬೆ ಗಾವುಂಡಿಗಂ ನಾರಾಯಣದೇವಂಗಂ ಶ್ರೀಯಾದೇವತೆಗಂ ಕಾಮದೇವಂ ಪುಟ್ಟುವಂತೆ ಕೊಂತಿಗಂ ದೇವೇಂದ್ರಂಗಮರ್ಜುನಂ ಪುಟ್ಟುವಂತೆ,**

ಮೇಲ್ಕಂಡ ನಾಕರಸನೇ ಮುಗುಂದ ಮೂವತ್ತನಾಳುತ್ತಿದ್ದಾಗ ಬರೆಯಿಸಿದ ಇನ್ನೊಂದು ಶಾಸನ ಇದೇ ಮುಗುದದಲ್ಲಿದೆ. ನಾಗಾರ್ಜುನ ಪಂಡಿತನೇ ಈ ಶಾಸನವನ್ನು ರಚಿಸಿದನೆಂಬುದಕ್ಕೆ ಅಲ್ಲಲ್ಲಿ ಕುರುಹುಗಳಿವೆ. ಚಕ್ರವರ್ತಿ, ಮಾಂಡಲಿಕ ಪ್ರಶಸ್ತಿಗಳಲ್ಲಿ ಸಾಮ್ಯವೂ ಕಂಡುಬರುತ್ತದೆ. ಅಲ್ಲದೆ ಈ ಎರಡನೆಯ ಶಾಸನದಲ್ಲಿನ ಮೊದಲ ಏಳು ಪದ್ಯಗಳು ಮೊದಲನೆಯ ಶಾಸನದ ಆರಂಭದಲ್ಲಿನ ೭ ಪದ್ಯಗಳೇ ಆಗಿವೆ. ಅಲ್ಲಲ್ಲಿ ಒಂದೊಂದು ಶಬ್ದ ವ್ಯತ್ಯಾಸವನ್ನು ಬಿಟ್ಟರೆ ಉಳಿದ ಕ್ರಮ ಅಲ್ಲಿನಂತೆಯೇ ಇದೆ. ಆದರೆ ಈ ಶಾಸನಕ್ಕೂ ಮೊದಲನೆಯ ಶಾಸನಕ್ಕೂ ಇರುವ ಮುಖ್ಯ ವ್ಯತ್ಯಾಸವೆಂದರೆ, ಮೊದಲ ಶಾಸನದಲ್ಲಿನ ನಾಕರಸನ ಪೂರ್ವಜರಿಗೆ ಸಂಬಂಧಿಸಿದ ಕೆಲವು ವರ್ಣನಾತ್ಮಕ ಪದ್ಯಗಳನ್ನು, ಎರಡನೆಯ ಶಾಸನದಲ್ಲಿ ಕೈಬಿಟ್ಟಿರುವುದು. ಎರಡನೆಯ ಶಾಸನ ಕಾವ್ಯಕ್ಕೆ ನಾಯಕ ನಾರ್ಗಾವುಂಡ ಅವನನ್ನು ವರ್ಣಿಸುವಾಗ, ಮೊದಲ ಶಾಸನದಿಂದ ಪದ್ಯಗಳನ್ನು ತೆಗೆದುಕೊಳ್ಳದೆ, ಹೊಸದಾಗಿ ರಚಿಸುವುದು ಕಂಡುಬರುತ್ತದೆ. ತನ್ನ ಆರಸನ ಬಗ್ಗೆ ಕವಿಗೆ ಉತ್ಸಾಹವಿರುವುದು ವಿಶೇಷವೇನಲ್ಲ. ಆದರೆ ಈ ಶಾಸನವು ಪೂರ್ಣವಾಗಿ ಅಚ್ಚಾಗದೇ ೩೩ನೇ ಸಾಲಿನಲ್ಲಿ ನಾಕರಸನನ್ನು ವರ್ಣಿಸುವ ಪದ್ಯದೊಂದಿಗೆ ನಿಂತುಹೋಗಿದೆ.

**ಮಲ್ಲಿಯಣ್ಣ (ಕ್ರಿ.ಶ. ೧೧೨೬)**

ಬಳ್ಳಾರಿ ಜಿಲ್ಲೆಯ, ಹರಪನಹಳ್ಳಿ ತಾಲೂಕಿನ, ದುಗ್ಗವತಿ ಗ್ರಾಮದ[೩೩] ಶಾಸನವನ್ನು ಮಲ್ಲಿಯಣ್ಣ ಕವಿ ರಚಿಸಿದ್ದಾನೆ. ಚಾಳುಕ್ಯ ತ್ರಿಭುವನಮಲ್ಲದೇವನ ಮಹಾಮಂಡಳೇಶ್ವರನಾದ ತ್ರಿಭುವನಮಲ್ಲ ದೇವನ ಮಹಾಮಂಡಳೇಶ್ವರನಾದ ತ್ರಿಭುವನಮಲ್ಲ ಪಾಂಡ್ಯದೇವನು 'ಬೇಲುಜು' ನೆಲೆವಿಡಿನಿಂದ 'ನೊಳಂಬವಾಡಿ ೩೨೦೦೦'ವನ್ನು ಆಳುತ್ತಿದ್ದನೆಂದು ಹೇಳುತ್ತದೆ. ಆಗ 'ಕೋಗಳಿ ೫೦೦'ಕ್ಕೆ ಸೇರಿದ 'ಬಿಕ್ಕಿಗ ೭೦'ರಲ್ಲಿನ ದುಗ್ಗತಿ ಗ್ರಾಮವನ್ನು ಮಲೆಯಾಳ ವಡ್ಡವ್ಯವಹಾರಿ ನಂಬಿಗಣ್ಣಿಸೆಟ್ಟಿಯು ಆಳುತ್ತಿದ್ದು, ದಂಡನಾಯಕ ಯಿಂದಿರಾಣಭಟ್ಟಯ್ಯ ಕೋಗಳಿಯ ಸುಂಕದ ಅಧಿಕಾರಿ, ದಂಡನಾಯಕ ಚೋಧಾದರರು, ದುಗ್ಗತಿಯ ಮಹಾದೇವದೇವರಿಗೆ ಭೂದಾನ ನೀಡಿ

ಮತ್ತು ಹಲವು ತೆರಿಗೆಯನ್ನು ಮನ್ನಾ ಮಾಡುತ್ತಾನೆ. ಹಾಗೂ ದುಗ್ಗತಿಯ ಬಿಲ್ಲೇಶ್ವರ ದೇವರಿಗೆ ಬೀರದೇವ ಎಂಬುವನು ದಾನ ನೀಡಿದ ಉಲ್ಲೇಖವೂ ಇದೆ.

**ಶಾಸನ ಗದ್ಯದ ಮಾದರಿ ಇಂತಿದೆ:**

> **ಸ್ವಸ್ತಿ ಸಮಸ್ತವಸ್ತುವಿಷಯವ್ಯಾಪಾರನಿಯತನುಂ ವಸ್ತು ಗುಣ ಸಂಪನ್ನನು**
> **ನುಡಿದು ಮತ್ತೆನ್ನನುವಾಸ್ರಿತಚಿಂತಾಮಣಿಯುಂ ವ್ಯವಹಾರ ಶಿಖಾಮಣಿಯುಮಷ್ಟಾದಸಪಟ್ಟಣ**
> **ಸಮುದ್ಧರಣನು ಸಮಯ ಸಮುದ್ಧರಣನು ಸಾರದಾದೇವೀಲಬ್ಧವರಪ್ರಸಾದನು**
> **ಶ್ರೀಮದ್ದೇಸಿಯಂಕಕಾಱನು ಶ್ರೀಮಂನಾನಾದೇಸಿ ಮಲೆಯಾಳ ವಡ್ಡವ್ಯವಹಾರಿ ನಂಬಿಗಣ್ಣಿಸೆ**
> **ಟ್ಟಿಯರು ಕೋಗಳಿಯಯಿನೂಱಱ ಬಳಿಯ ಬಿಕ್ಕಿಗನೇಳ್ಪತ್ತಱಕೊಳಧಿಗ್ರಾಮ**
> **ದುಗ್ಗತಿಯಂ ಸುಖದಿಂ ಮೇಲಾಳ್ಕೆ ಗೆಯ್ಯುತ್ತಮಿರೆ।** ಎಂದಿದೆ.

ಶಾಸನದ ೪೯ ಮತ್ತು ೫೦ ನೇ ಸಾಲಿನಲ್ಲಿ ಕವಿಯ ಉಲ್ಲೇಖವಿದೆ.

'ಶ್ರೀಸರಸ್ವತೀಗಣಭಾಂತ್ರ ಮಲ್ಲಿಯಣ್ಣನ ಬರೆಪಂ' ಎಂದಿದೆ.

**ಭಾಸ್ಕರಯ್ಯ. (ಕ್ರಿ.ಶ.೧೧೨೬)**

ಆಂಧ್ರಪ್ರದೇಶದ ಮೆದಕ್ ಜಿಲ್ಲೆಯ, ಸಂಗಾರೆಡ್ಡಿ ತಾಲೂಕಿನ, ಪಟಾನ್‌ಚೆರು[೩೪] ಗ್ರಾಮದ ಶಾಸನವನ್ನು ಶಾಸನಕವಿ ಭಾಸ್ಕರಯ್ಯ ಎಂಬುವವನು ರಚಿಸಿದ್ದಾನೆ. ಈ ಶಾಸನವು ಚಾಲುಕ್ಯ ಅರಸನಾಗಿದ್ದ ಭೂಲೋಕಮಲ್ಲ ಸೋಮೇಶ್ವರನ ಆಳ್ವಿಕೆಯಲ್ಲಿ ರಚನೆಯಾಗಿದೆ. ಚಾಲುಕ್ಯ ೩ನೇ ಸೋಮೇಶ್ವರನ ಪಟ್ಟಭಂದೋತ್ಸವ ಸಮಯದಲ್ಲಿ, ಆತನ ವಿಜಯಯಾತ್ರೆಗೆ ಲಗ್ನವನ್ನು ಗೊತ್ತು ಮಾಡಿಕೊಟ್ಟ ನನ್ನೆಯಭಟ್ಟನಿಗೆ ಭೂದಾನ ಮಾಡಿದ್ದು ಶಾಸನದ ವಿಷಯ ಇದು ಕಂದ ವೃತ್ತದಲ್ಲಿದೆ.

> **ನಿರತಿಶಯೋನ್ನತಮತಿ ಭಾ**
> **ಸ್ಕರ ಸರಸಕವೀಂದ್ರ ರಚಿತ ಶಾಸನಮಂ ಬಿ**
> **ತ್ತರದಿಂ ಪ್ರತಿಕಂಟಂ ಸಾ**
> **ಕ್ಷರನಿಳಯಂ ತಿಟ್ದಿ ಭಾಸ್ಕರಯ್ಯ ಬರೆದಂ ॥**

ಎಂಬ ಪದ್ಯದಿಂದ, ಭಾಸ್ಕರಯ್ಯನೆಂಬ ಇನ್ನೊಬ್ಬನು ಭಾಸ್ಕರ ಕವಿಯ ಶಾಸನವನ್ನು ತಿದ್ದಿ ಬರೆದ ಎಂಬ ವಿಚಾರ ತಿಳಿಯುತ್ತದೆ. ಶಾಸನದ ಕಾಲ ಕ್ರಿ.ಶ.೧೧೨೬.

**ತೈಲಪನ ಹಿರಿಮೆಯನ್ನು ಸಾರುವ ಪದ್ಯ:**

> **ಶ್ರೀಮಚ್ಚಾಳುಕ್ಯವಂಶೋದ್ಭವನನುಪಮಿತೋದ್ಯದ್ಭುಜಾದಂಡ ಶೌರ್ಯೋ೯**
> **ದ್ದಾಮಂ ವೀರಾರಿಭೂಭೃತ್ಪ್ರಕರನಿಶಿತವಜ್ರಾಯುಧಂ ಕ್ಷತ್ರವಿದ್ಯಾ**
> **ಧಾಮಂ ರಟ್ಟಾನ್ವವಾಯಪ್ರಬಳತರತಮಸ್ತೋಮ ಮಾರ್ತಾಂಡತೇಜ**
> **ಸ್ತೋಮಂ ತಾನೆಂಬಿನಂ ಮಿಕ್ಕೆಸೆದನಸದಳಂ ತೈಲಪಕ್ಷೋಣಿಪಾಳಂ ॥**

ಮುಳಿವೆತ್ತೆತ್ತಿದ ತೋಳಬಾಳಜಳದಿಂ ಮೆಯ್ಗೊಂಡ ಮಿತ್ರಾಂಗನಾ
ಕುಳಭಾಷ್ಪದ್ರವದಿಂ ತಳಿರ್ತು ರಿಪುಸೇನಾಚಕ್ರರಕ್ತಾಂಬುವಿಂ
ಬಳೆದತ್ತೀಗಳುಪಾಹಿಪಾಹಿತಗಳತ್ಕಾಳಿಂಗ ಮಾತಂಗಸಂ
ಕುಳದಾನಪ್ಲವದಿಂ ಪರಾಕ್ರಮವನಂ ಭೂಲೋಕಮಲ್ಲಾಂಕನಾ ॥

**ನನ್ನೆಯಭಟ್ಟರಿಗೆ ದಾನ ನೀಡಿದ ಪದ್ಯ**

ನರನಾಥಂ ನನ್ನೆಯ ಭ
ಟ್ಟರಿಗೆ ಮನೋಮುದದಿ ನೆನೆದು ಪೊಟ್ಟಳೆಗೆರೆಯುಳ್
ಕರಮೊಪ್ಪುವ ಚಿಂತಾಮಣಿ
ಪುರದಲ್ಲಿಯೆ ಕೊಳಗದಾಯಮಂ ಸಲೆ ಕೊಟ್ಟಂ ॥

**ಮಲ್ಲಿನಾಥ (ಕ್ರಿ.ಶ.೧೧೨೯)**

ಹಾಸನ ಜಿಲ್ಲೆಯ, ಶ್ರವಣಬೆಳಗೊಳ ತಾಲೂಕಿನ, ಚಿಕ್ಕಬೆಟ್ಟ ಶಾಸನವು ೨೨೩, ಸಾಲುಗಳ ಸಂಸ್ಕೃತ ಶಾಸನವನ್ನು[೩೫] ಹಾಗೂ ಕಡೂರು ಜಿಲ್ಲೆಯ ಮೂಡಗೆರೆ ತಾಲೂಕಿಗೆ ಸೇರಿದ ಹಂತೂರು ಗ್ರಾಮದ ಶಾಸನವೊಂದನ್ನು[೩೬] "ಶ್ರೀಮಲ್ಲಿನಾಥಂ ಬಿರುದಲೇಖಕ ಮದನ ಮಹೇಶ್ವರಂ" ಬರೆದಿದ್ದಾನೆಂದು ಅಲ್ಲಿ ತಿಳಿಸಲಾಗಿದೆ.

ಎರಡನೆಯ ಶಾಸನದಲ್ಲಿ ಮಲ್ಲಿನಾಥನ ಗುರು ಶ್ರೀ ಮನ್ಮಲಧಾರಿಯು ಸಲ್ಲೇಖನ ವಿಧಿಯಿಂದ ದೇಹ ತೊರೆದುದನ್ನು ಕಾವ್ಯಮಯವಾಗಿ ವರ್ಣಿಸಿದ್ದಾನೆ. ಮೊದಲನೇ ಶಾಸನದಲ್ಲಿ ಹರಿಯಬ್ಬರಸಿ ಎಂಬ ರಾಣಿಯು ಚೈತ್ಯಾಲಯವೊಂದನ್ನು ನಿರ್ಮಿಸಿ ದತ್ತಿಬಿಟ್ಟದ್ದನ್ನು ವರ್ಣಿಸಲಾಗಿದೆ. ಇವೆರಡೂ ಶಾಸನಗಳಿಂದ ಮಲ್ಲಿನಾಥ ಕವಿಯು ಉಭಯ ಭಾಷಾ ಕವಿಯಾಗಿದ್ದನೆಂದು ತಿಳಿಯಬಹುದು.

ಹಂತೂರು ಶಾಸನದಲ್ಲಿ ಹರಿಯಬ್ಬರಿಸಿ ಚೈತ್ಯಾಲಯವೊಂದನ್ನು ನಿರ್ಮಿಸಿ, ದತ್ತಿ ಬಿಟ್ಟದ್ದನ್ನು ಗದ್ಯ ಪದ್ಯದಲ್ಲಿ ವರ್ಣಿಸಲಾಗಿದೆ.

**ಮಲ್ಲಿನಾಥನ ಕವಿತಾ ಶಕ್ತಿಗೆ ಉದಾಹರಣೆ:**

ಕಳಕೆ ಬಯಲ್ಗೆಕ್ಕತುಳ
ಕ್ಕೆಳೆಯೊಳ್ಮಾಱಾಂಪರಿಲ್ಲದಾ ದಿಗಧಿಪರಂ
ಸೆಳೆದು ನೆಲಕ್ಕಿಕ್ಕಲ್ಕ
ವ್ವಳಿಪ್ಪುದು ರಿಪುಕುಮಾರ ಭೈರವನ ಮನಂ ॥

**ಆವಂಗಮಾವ ಧನಮುಮ**
**ನೀವ ಮಹಾದಾನಿ ಯುದ್ಧ ವಿಜಯಮನಾ ಮಾ**
**ದೇವಗಂಮಿೊಯದದಟರ್**
**ದೇವಂ ಬಲ್ಲಾಳದೇವನಪ್ರತಿಮಬಳಂ ॥**

ಅಂತೆನಿಸಿ ನೆಗೆರ್ದ ಶ್ರೀಮತ್ಕುಮಾರ ಬಲ್ಲಾಳದೇವನಗ್ರಾನುಜೆ ಹರಿಯಬ್ಬರಸಿಯೆಂತಪ್ಪಳೆಂದಡೆ ಸರಸ್ವತಿಯಂತೆ ಸತ್ಕಳಾನ್ವಿತೆ ಸೀತೆಯಂತೆ ವಿನೀತೆ–ಸುಸೀಮಾದೇವಿಯಂತೆ ಸುಶೀಲೆ ರುಗ್ಮಿಣಿಯಂತೆ. ಗುಣಾಗ್ರಣಿ..... ಎಂದು ಮುಂತಾಗಿ ವರ್ಣಿಸಲಾಗಿದೆ.

### ಸೋಮೇಶ್ವರ ಪಂಡಿತ (ಕ್ರಿ.ಶ.೧೧೩೨)

ಹಾಸನ ಜಿಲ್ಲೆಯ, ಚನ್ನರಾಯಪಟ್ಟಣ ತಾಲೂಕು, ಬಾಳಗಂಚಿ ಗ್ರಾಮದ ಶಾಸನವು[೩೭] ಈ ಶಾಸನ ಕವಿಯಿಂದ ರಚಿಸಲ್ಪಟ್ಟಿದೆ. ಹೊಯ್ಸಳ ವಿಷ್ಣುವರ್ಧನ ದೊರೆ ಆಳ್ವಿಕೆಯ ಸಂದರ್ಭದಲ್ಲಿ ಶ್ರೀ ಹೆಗ್ಗಡೆ ಮಹಾದೇವ ಬಾಳ್ಗಚ್ಚಿನ ಶಿವಾಲಯಕ್ಕೆ ನಿವೇದ್ಯ ಕೆಯಿ ಕೆರೆಯ ದತ್ತಿ ಬಿಟ್ಟ ವಿವರಗಳೇ ಈ ಶಾಸನದ ವಸ್ತು. ಇದನ್ನು ಶಾಸನವು ಹೀಗೆ ಹೇಳಿದೆ.

**"ಸ್ವಸ್ತಿ ಸಮಸ್ತ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರ ತ್ರಿಭುವನಮಲ್ಲ ತಳಕಾಡುಗೊಣ್ಡ ಭುಜಬಲವೀರಗಂಗ ವಿಷ್ಣುವರ್ಧನ ಹೊಯ್ಸಳದೇವರು ಪ್ರತ್ವೀರಾಜ್ಯಂಗೆಯ್ಯುತ್ತಮಿರೆ ಸ್ವಸ್ತಿ ಶ್ರೀ ಹೆಗ್ಗಡೆಮಹಾದೇವ ಪರಿದವಿಸಂವತ್ಸರದ ಬಾಳಗಚ್ಚಿನ ಸಿವಾಲ್ಯಕ್ಕೆ ನಿವೇದ್ಯ ಕೆಇ ಕೆಱೆಯ ದತ್ತಿ ಬಿಟ್ಟ ಸ್ವಸ್ತಿ ಯಮ ನಿಯಮ ಸ್ವಧ್ಯಾಯ ಧ್ಯಾನ, ಧಾರಣ, ಸಮಾಧಿ ಸಂಪನ್ನರಪ್ಪ ನನ್ದಿಯಕೋಲ ಕುತ್ತಾರಜೀಯರು ಸಿವಾಲ್ಯವನೆತ್ತಿಸಿ ಕೆಱೆಯ ಕಟ್ಟಿಸಿದಾಚಂದ್ರಾರ್ಕ್ಕಂಬರಂ"**–ಎಂದಿದೆ.

### ಮೂಕಣಪಂಡಿತ (ಕ್ರಿ.ಶ.೧೧೩೪)

ಅವಿಭಜಿತ ಧಾರವಾಡ ಜಿಲ್ಲೆಯ, (ಇಂದಿನ ಹಾವೇರಿ ಜಿಲ್ಲೆಯ) ಹಾವೇರಿ ತಾಲೂಕಿನ, ಹಾವೇರಿಯ ಶಾಸನವೊಂದನ್ನು[೩೮] ಮೂಕಣಪಂಡಿತ ಎಂಬುವವನು ರಚಿಸಿದ್ದಾನೆ. ಈತ ನಾಗವರ್ಮನ ಮೊಮ್ಮಗ, ಬ್ರಾಹ್ಮಣಕವಿ, ಭಾರದ್ವಾಜ ಗೋತ್ರದವನು 'ವಿಶ್ವಗುಣನಿಧಿ' 'ಸುಕವಿ' ಮುಂತಾದ ಪ್ರಶಸ್ತಿಗಳಿದ್ದವು. ಚಾಲುಕ್ಯ ಅರಸನಾದ ಭೂಲೋಕಮಲ್ಲನ ಆಳ್ವಿಕೆಯ ೮ನೇ ವರ್ಷದ ನಂತರ ಆನಂದ ಸಂವತ್ಸರದಲ್ಲಿ ಅಂದರೆ ೧೧೩೪ರಲ್ಲಿ ಈ ಶಾಸನ ರಚನೆಯಾಗಿದೆ. ಇದು ವೃತ್ತ ಕಂದಗಳಲ್ಲಿದೆ. ಚಾಲುಕ್ಯ ಭೂಲೋಕಮಲ್ಲನಾಳ್ವಿಕೆಯ ಕದಂಬ ಮಲ್ಲಿಕಾರ್ಜುನನು ಹಾವೇರಿಯ ಹೆಗ್ಗೆರೆಯ ಜೀರ್ಣೋದ್ಧಾರಕ್ಕೆ ಕೆಲವೊಂದು ದತ್ತಿಗಳನ್ನು ಬಿಟ್ಟಂತೆ ಹೇಳಿದೆ.

ಬನವಾಸಿ ನಾಡು ಮತ್ತು ಅದರ ಅಗ್ರಹಾರವಾದ ಹಾವೇರಿಯ ವರ್ಣನೆ :

ಬನವಾಸೆ ನಾಡದು ಕಂದ
ರ್ಪನ ಜನನಾಗಾರಮದುವೆ ರತಿಗೆ ಮನೋನಂ
ದನಮೆಂದೊಡೊಳುಪನಿನ್ನಾ
ವನೊ ಪೊಗಳಲು ನೆಱೆವನದಱ ಮಹಿಮೊನ್ನತಿಯಂ।

ಆ ನಾಡೊಳಗ್ರಹಾರಂ
ಭುನಾರೀಕುಚತತಾಗ್ರಹಾರಂ ವಿಮಳ
ಶ್ರೀನಿಳಯಂ ಸದವಿದ್ಯಾ
ಸ್ಥಾನಂ ಪಾವರಿ ನಿರಂತರಂ ರಂಜಿಸುಗುಂ।

ಬನವಾಸಿ ನಾಡ ಕುರಿತ ವೃತ್ತಪದ್ಯ:

ಅಮಿತ ದ್ವಿಪಾಬ್ಧಿ ವೇಳಾವಳಯಿತ ವಸುಧಾಭಾಗದೊಳ್ ಕುನ್ತಳಂ ವಿ
ಶ್ವಮಹೀಸಂಸೇವ್ಯ ಮಾಕುನ್ತಳ ಧರಣೆಗಳಂಕಾರಮೀ ತೆಂಕನಾಡ
ಲ್ಲಿ ಮನೋಜ್ಞಂ ಖ್ಯಾತಮವ್ಯಾಹತಮೆನಿಸಿ ಸರಸೇವ್ಯನೀರೇಜನಾನಾ
ಕಮನೀಯೋದ್ಯಾನದಿಂದಂ ಬನವಸೆ ವಸುಧಾಬಾಮಿನೀರಮ್ಯಹರ್ಮ್ಯಂ॥

ಬಮ್ಮಣ (ಕ್ರಿ.ಶ.೧೧೩೭)

ಚಿಕ್ಕಮಗಳೂರು ಜಿಲ್ಲೆಯ, ಚಿಕ್ಕಮಗಳೂರು ತಾಲೂಕಿನ, ಕೋಡವಳ್ಳಿಯ ಶಾಸನ[೩೯] ಹೊಯ್ಸಳರ ವಿಷ್ಣುವರ್ಧನ ಆಳ್ವಿಕೆಯ ಸಮಯದಲ್ಲಿ ಹಡವಳ ಬೋಕನನ ನಿರ್ದೇಶನದಂತೆ 'ಕಲ್ಲಮನು' 'ಕೋಡಹಳ್ಳಿ' ಕಾಳಗದಲ್ಲಿ ಹೋರಾಡಿದ ವಿವರಗಳಿವೆ.

'ಸ್ವಸ್ತಿಸಮಸ್ತ ಪ್ರಶಸ್ತಿಸಹಿತಂ ಶ್ರೀ ಮಹಾಮಂಡಳೇಶ್ವರ ತ್ರಿಭುವನಮಲ್ಲ ತಳಕಾಗೊಣ್ಡ ಭುಜಬಳವೀರಗಂಗ ಹೊಯ್ಸಳದೇವರು ಹಾನುಗಲ್ಸುಹಲು ಹಡವಳ ಬೋಕಣಂ ಬೆಸೆಸಲ್ ಕೋಡಹಳ್ಳಿಯಲ್ ಕಲ್ಲಮ ಜಯಂಗಾಣಲ್ಗಾಳವರಿಸಿವಿರ್ದ್ದಂ" ಎಂದಿದೆ.

ಜನ್ನಮಯ್ಯ (ಕ್ರಿ.ಶ.೧೧೩೭)

ಬೀದರ ಜಿಲ್ಲೆಯ, ಭಾಲ್ಕಿ ತಾಲೂಕಿನ, ಗೋರಚಿಂಚೋಳಿ ಗ್ರಾಮ ವಿಠಲ ದೇವಾಲಯದ ಸಮೀಪದಲ್ಲಿರುವ ಶಾಸನವೊಂದನ್ನು[೪೦] ಜನ್ನಮಯ್ಯ ಎಂಬುವವನು ರಚಿಸಿದ್ದಾನೆ. ಚಾಲುಕ್ಯ ಅರಸ ಭೂಲೋಕಮಲ್ಲನು ರಾಜ್ಯಭಾರ ಮಾಡುತ್ತಿದ್ದಾಗ ಅವನ ಮಹಾಮಂಡಳೇಶ್ವರನಾಗಿ ಹೆಮ್ಮಾಡಿಯರಸನು ಭಲ್ಲುಂಕೆಯ ಉತ್ತರೇಶ್ವರದೇವರ ಪ್ರತಿರೂಪವಾಗಿ ಚಿಕ್ಕ ಉತ್ತರೇಶ್ವರ ದೇವಾಲಯವನ್ನು (ನಿರ್ಮಿಸಿ) ಚಿಂಚವಳ್ಳಿಯ ಸೀಮೆಯಿಂದ ೪೦ ಮತ್ತರು ಭೂಮಿ ದಾನ

ಮಾಡಿದನು. ಉತ್ತರೇಶ್ವರದೇವರ ಆಚಾರ್ಯನಾದ ವಿಮಳಾದಿತ್ಯ ಪಂಡಿತನು ಗಾಣವನ್ನು, ಅಮ್ಮಗಿಯೆಂಬುವವನು ದೇವಾಲಯದ ಬಾವಿಯ ಜೀರ್ಣೋದ್ಧಾರ ಮಾಡಿಸಿದ. ಮೂಲಿಗನಾದ ಚಂದನಾಯಕನು ದೇವರ ನೈವೇದ್ಯಕ್ಕೆಂದು ೮ ಮತ್ತರು ಭೂಮಿ ನಂದಾದೀಪಕ್ಕೆ ಒಂದು ಮತ್ತರು, ಒಂದು ಹೂದೋಟ, ಒಂದು ಮನೆ ದಾನ ನೀಡಿದ ವಿವರಗಳಿವೆ.

> **"ಮಹಾಮಂಡಳೇಶ್ವರ ಹೆರ್ಮ್ಮಾಡಿಯರಸರು ಭಲ್ಲುಂಕೆಯ ಶ್ರೀಮದುತ್ತರೇಶ್ವರ**
> **ದೇವರ ಪ್ರತಿಮಾದ್ಧಬಗಿ ಚಿಕ್ಕತ್ತರೇಶ್ವರದೇವರೆಂದು ಪೆಉರನ್ನಿಟ್ಟು**
> **ಚಿಂಚವಳ್ಳಿಯ ಸೀಮೆಯಿಂ ತೆಂಕಲುಲಚ್ಚೆಯ ಗಾವಿಯುಂ.... ೪೦ ಮತ್ತರು,**
> **ಕೆಯುಮಂ ಸರ್ಬ್ಬನಮಸ್ಯವಾಗಿ ಧಾರಾಪೂರ್ವಕವಾಗಿ ಮಾಡಿಕೊಟ್ಟರು."** ಎಂದಿದೆ.

**ಸಾಂತಮಹಂತ (ಕ್ರಿ.ಶ.೧೧೩೮)**

ಮಂಡ್ಯ ಜಿಲ್ಲೆಯ, ನಾಗಮಂಗಲ ತಾಲೂಕಿನ, ಲಾಲನಕೆರೆಯ ಈಶ್ವರ ದೇವಸ್ಥಾನದೊಳಗೆ ಬಿದ್ದಿರುವ ಶಾಸನವನ್ನು[೪೧] 'ಸಾಂತಮಹಂತ' ಎಂಬ ಕವಿಯು ರಚಿಸಿದ್ದಾನೆ. ಈತನ ಬಗ್ಗೆ ಶಾಸನ ಹೀಗೆ ಹೇಳಿದೆ.

> **'ಕ್ಷಿತಿವಿನುತೆ ಸರ್ಬದೇವ**
> **ನುಸ್ತತೆ ಸಂನುತೆ ಸೋಮಿಯಕ್ಕನಣುಗಿನ ಪ್ರತಂ**
> **ಸತುಕವಿ ಸಾಂತಮಹಂತಂ**
> **ಸ್ಥಿತಿಸಾರಂ ಪೇಳ್ದನಳ್ತಿಯಿಂ ಶಾಸನಮಂ**

ಈ ಮೇಲಿನ ಪದ್ಯದಿಂದ 'ಸೊಮಿಯಕ್ಕನ' ಮಗ 'ಸಾಂತಮಹಂತ' ಎಂಬುದು ತಿಳಿದುಬರುತ್ತದೆ. ಈ ಶಾಸನದಲ್ಲಿ ಒಟ್ಟು ೨೨ ಪದ್ಯಗಳಿದ್ದು ಹೊಯ್ಸಳ ದೊರೆ ವಿನಯಾದಿತ್ಯನನ್ನು ಉಲ್ಲೇಖಿಸುವ ಈ ಶಾಸನದ ಕಾಲ ಕ್ರಿ.ಶ.೧೧೩೮. ದೊರೆ ವಿನಯಾದಿತ್ಯನ ದಂಡಾಧೀಶ ಏಚರಾಜನು ತನ್ನ ದೊರೆಯನ್ನು ಮೆಚ್ಚಿಸಿ ಲಾಲನಕೆರೆಯ ಗೌಡಿಕೆಯ ಉಂಬಳಿ ಪಡೆದು ಅದರಲ್ಲಿ ಸ್ವಲ್ಪಭಾಗವನ್ನು ಮಲ್ಲಿಕಾರ್ಜುನದೇವರಿಗೆ ದಾನಕೊಡುವ ಸಂದರ್ಭದಲ್ಲಿ ಶಿವ, ವಿನಯಾದಿತ್ಯ, ಎರೆಯಂಗ, ಮುಂತಾದವರ ವರ್ಣನೆ ಮಾಡಲಾಗಿದೆ.

ವಿನಯಾದಿತ್ಯದೇವನ ವರ್ಣನೆ:

> **'ಆದಿತ್ಯರೆನಿಬರಶದೊಡೆಮೇ**
> **ದಿನಿ ಯೊಳಗಿವನ ತೇಜವಧಿಕ ಮೆನುತ್ತಂ**
> **ಕಾದಲು ವೈರಿಗಳಂಮದ**
> **ಯಾದವಕುಳತಿಳಕ ವೀರವಿನಯಾದಿತ್ಯಂ'**

ಕೆಳೆಯಬ್ಬೆ, ಎರೆಯಂಗ, ಇವರ ಮಹಿಮೆ:

**ಕೆಳೆ ಗಂಗೆಯೊಳಮಳತೆಯಿಂ**
**ಕೆಳೆ ಸೊಬಗಿಂ ಗಿರಿಜೆಯೊಡನೆ ಸಿರಿಯಾಡನೆಂದುಂ**
**ಕೆಳೆ ನಿಜಪತಿ–ಯಭಿವೃದ್ಧಿಗೆ**
**ಕೆಳೆಯಬ್ಬೆಗೆ ನಾಮಮಾದುದಿಂತನ್ವರ್ಥಂ ॥**

**ಸಱಪಱಸಿ ಮುಳಿದು ಕಾಯ್ದಿಂ**
**ದುಱದೆತ್ತಿದ ವೀರವೈರಿವರ್ಗದ ಬಾಯ್ ಹೊ**
**ನ್ನೊಱೆಯಾಗಿ ಕಟ್ಟಿದಲಗಂ**
**ಕಿಱುಪನೆ ರಣಮುಖದೊಳದಟನಿಂದೆಱೆಯಂಗಂ ॥**

**ಬಲದೇವ (ಕ್ರಿ.ಶ.೧೧೩೮)**

ಧಾರವಾಡ ಜಿಲ್ಲೆಯ, ಮದನಬಾವಿಯ ಶಾಸನವನ್ನು[೪೨] ಬಲದೇವ ಕವಿಯು ಕ್ರಿ.ಶ.೧೧೩೮ ರಲ್ಲಿ ರಚಿಸಿದ್ದಾನೆ, ಈತನ ಊರು ಮಂದೂರು ಈಗಿನ 'ಮದನಬಾವಿ'ಯಾಗಿದೆ. ಈತ 'ಶೈವ' 'ಕಣಿಯ ಚಾವುಂಡ'ನ ಮಗನಾಗಿದ್ದ ಕೊಂಕಣ ಚಕ್ರವರ್ತಿ ಜಯಕೇಸಿ ದೇವರಸನೂ ಪಟ್ಟ ಮಹಾದೇವಿ ಮೈಳಲದೇವಿಯರೂ ಮದನಬಾವಿಯ ಸ್ವಯಂಭೂ ಕಲಿದೇವರಿಗೆ ಭೂದಾನ ನೀಡಿದ ವಿವರವಿದೆ.

**ಕವಿಯ ಕಾವ್ಯ ರಚನಾ ಕೌಶಲಕ್ಕೆ ಕಂದ:**

**ಪರಮ ಸ್ವಯಂಭು ಕಲಿದೇ**
**ವರಿಗೀ ಶಾಸನಮನೆಸೆಯೆ ತಾಂ ಮಾಡಿಸಿದಂ**
**ವರಗುಣನಿಧಿ ನೆಗೆರ್ದ ಸಂ**
**ಕರ ಒಮ್ಮೆಯ ನಾಯಕಂ ಕೃತಾರ್ಥಂ ಜಗದೊಳ್**

ಶಾಸನದ ಕೊನೆಯ ಭಾಗ ಹೀಗಿದೆ.

**ಸಲೆ ಮಂದೂರು ಗವುಂಡನಾ ಕಣಿಯ ಚಾವುಂಡಂಗೆ ಸತ್ಪುತ್ರನೀ**
**ಬಲದೇವಂ ಶಿವಪಾದಪದ್ಮಮಧುಪಂ ಮಂದೂರೊಳಂ ಶಂಭುವೀ**
**ಕಲಿದೇವಂಗತಿಭಕ್ತಿಯಿಂದೆ ಬೆಸೆಗೆಯ್ದೀ ಶಾಸನಂ ನಿಲ್ಕೆ ತಾಂ**
**ನೆಲನುಂ ನೇಸಱುಮುಳ್ಳಿನಂ ತೊಲಗದಿನ್ನಾಚಂದ್ರತಾರಂಬರಂ.॥**

ಇದರಿಂದ ಶಾಸನ ಕರ್ತೃ ಬಲದೇವನೆಂದೂ ಈತನು ಕಣಿಯ ಚಾವುಂಡನ ಸುಪುತ್ರನು ಮಂದೂರಿನವನು ಶಿವೋಪಾಸಕನೂ, ಎಂದು ತಿಳಿದುಬರುವುದು.

**ರೇಚಣಭಟ್ಟ (ಕ್ರಿ.ಶ.೧೧೪೦)**

ಬಿಜಾಪುರ ಜಿಲ್ಲೆಯ, ಸಿಂದಗಿ ತಾಲೂಕಿನ, 'ದೇವರನಾವದಗಿ' ಗ್ರಾಮದ ಮಲ್ಲಿಕಾರ್ಜುನ ದೇವಸ್ಥಾನದಲ್ಲಿರುವ ಶಾಸನವನ್ನು[೪೩] ಈತ ರಚಿಸಿದ್ದಾನೆ. ಚಾಳುಕ್ಯ ರಾಜನಾದ ಎರಡನೇ ಜಗದೇಕಮಲ್ಲನ ಆಳ್ವಿಕೆಯ ಎರಡನೆಯ ವರ್ಷವಾದ ಜಗದೇಕಮಲ್ಲನ ಸಾಮಂತ ಶಿಲಾರ ವಂಶದ ಸೋಮದೇವನ ಆಶ್ರಿತನಾದ ಹೆಗ್ಗಡೆ ದೇವರಾಜ ಕಟ್ಟಿಸಿದ ಮಲ್ಲಿಕಾರ್ಜುನ ದೇವಾಲಯಕ್ಕೆ ದಾವರಾಜನ ಪ್ರಾರ್ಥನೆಯ ಮೇರೆಗೆ ಸೋಮದೇವ ದತ್ತಿ ಬಿಟ್ಟ ವಿಷಯ ಈ ಶಾಸನದ ವಸ್ತು. ಜಗದೇಕಮಲ್ಲ ಸೋಮದೇವ, ದಾವರಾಜರ ಹಿರಿಮೆಯನ್ನು ಸರಳವಾದ ಪದ ಸಂಯೋಜನೆಯೊಂದಿಗೆ ಕೀರ್ತಿಸಿದ್ದಾನೆ.

**ಜಗದೇಕಮಲ್ಲನ ಶೌರ್ಯ**

**ಮಗಧನನೆತ್ತಿ ಮಾಳವನನೊತ್ತಿ ಕಳಿಂಗನ ತೂಳ್ದು ಚೋಳನಂ**
**ತಗುಳ್ದರೆಯಟ್ಟಿ ಗುರ್ಜರರನಾ ಸಕಳಾವನಿಯಂ ನಿಮಿರ್ಚಿ ತಾಂ**
**ಮಿಗಿಲೆನಿಸಿರ್ದ ಭೂರಿ ನಿಜ ವಿಕ್ರಮದಿಂ ನಿಜ ಬಾಹು ವೀರ್ಯದಿಂ**
**ದಗಣಿತ ಕೀರ್ತಿವೆತ್ತನೆನಿಪಲ್ ನೆಗೆಟ್ದಂ ಜಗದೇಕವಲ್ಲಭಂ ॥**

**ಸೋಮದೇವನ ಮಹಿಮೆ:**

**ಉದಯಗಿರೀಂದ್ರದಿಂ ದಿನಪನಂಬುದಿಯಿಂದಮೃತಾಂಶು ರಾಗದಿಂ**
**ದುದಯಿಸುವಂದದಿಂ ನೆಗವ್ದಿ ಬಾಚಲದೇವಿಗೆ ಸಿಂಹಭುಭುಜಂ**
**ಗೊದವೆ ಮನೋರಥ ರಿಪುನೃಪರ್ಗೆ ಮನೋವ್ಯಥೆ ಪುಟ್ಟೆ ಪುಟ್ಟಿದಂ**
**ಸದಮಳ ಕೀರ್ತಿಯಂ ತಳೆವಿಳೇಶ್ವರ ಸೋಮಯ ಮಂಡಳೇಶ್ವರಂ॥**

**ಮಹಾದೇವ ವಿಭುದ (ಕ್ರಿ.ಶ.೧೧೪೧)**

ಹಾಸನ ಜಿಲ್ಲೆಯ, ಬೇಲೂರು ತಾಲೂಕಿನ, ಹಳೇಬೀಡು ಶಾಸನವನ್ನು[೪೪] ಶಾಸನಕವಿ 'ಮಹಾದೇವವಿಭುದ' ನಿಂದ ರಚಿತವಾಗಿದೆ. ಹೊಯ್ಸಳರ ದೊರೆ ಒಂದನೇ ನರಸಿಂಹನ ಕಾಲಾವಧಿಯಲ್ಲಿ ದೊರೆಗೆ ಚನ್ನಮಲ್ಲ ಹಾಗೂ ರಾವಳಬೋವ ಗರುಡರಾಗಿದ್ದ ಬಗ್ಗೆ ಶಾಸನ ತಿಳಿಸಬಹುದು.

**"ಹೊಯ್ಸಳ ಮಹೀವಂಶಕ್ಕೆಲ್ಲಂ**
**ದ್ವಾರಾವತಿಯಿಂದೆ ಬಂದಂ ನಿರೇರುಂಕಲೋಚ**
**ನಾನ್ವಯಂ ಸಳನೆಂಬಂ ವೀರಜನಯೋಗಿ**
**ನಡಪಲ್ಕೋರಂತಿರೆ ಕೊಡಗಿಮಲೆಗೆ ಕಡುನಲವಿಂದಂ ।**

**ಅಂತಲ್ಲಿಗೆಯ್ದು ವಂದಿರೆ ಮುಂತೆ ಕರಂ ಚೋದ್ಯವಾಗೆ**
**ಪರಿಯಲು ಶುನಕಂ ಪಿಂತಟ್ಟೆ ಶಶಕನೀ ನೆಲೆನೆಂತುಂ**
**ಜಯವೆಂದು ನೆಲೆಸಿದಂ ತದ್ದರೆಯೊಳು** ॥ ಎಂದು ವರ್ಣಿಸಿದೆ.

**ಸರ್ವಜ್ಞ ಪಟ್ಟವರ್ಧನ (ಕ್ರಿ.ಶ.೧೧೪೭)**

ಅವಿಭಜಿತ ಧಾರವಾಡ ಜಿಲ್ಲೆಯ, ನರಗುಂದದ ಜೇಡಹನುಮ ದೇವಾಲಯದ ಶಾಸನವನ್ನು[೪೫] ಶಾಸನಕವಿ ಸರ್ವಜ್ಞ ಪಟ್ಟವರ್ಧನ ರಚಿಸಿದ್ದಾನೆ.

**ರಸದಿಂದಂ ಶಬ್ದನರ್ಥದಿ**
**ನೆಸೆದಿರೆ ಶಾಸನಕೆ ಕಾವ್ಯಮಂ ಸೇವೆಮೆನಲ್**
**ಪೊಸದೆಸೆ ಪಂಸುರಿಸಲ್ ವಿರ**
**ಚಿಸಿದಂ ಸರ್ವಜ್ಞವರ್ಧನ ವಿಬುಧಂ**

ಎಂಬ ಕಂದ ಪದ್ಯದಿಂದ ಸರ್ವಜ್ಞ ಪಟ್ಟವರ್ಧನನು ಈ ಶಾಸನ ಕಾವ್ಯವನ್ನು ರಚಿಸಿದ್ದಾನೆಂದು ತಿಳಿಯುತ್ತದೆ. ಶಾಸನ ವಿಸ್ತಾರವಿದ್ದರೂ ಬಹಳ ನಶಿಸಿದೆ. ಅರಸರ ಆಳ್ವಿಕೆ, ತಿಥಿ, ಈ ವಿವರಗಳು ಗದ್ಯದಲ್ಲಿವೆ. ಉಳಿದ ವಿವರಗಳು ಪದ್ಯದಲ್ಲಿವೆ. ವಿಸ್ತಾರವಾದ ವರ್ಣನೆಗಳೂ ಇವೆ. ಇದರಲ್ಲಿ ೮೩ ಸಾಲುಗಳಿವೆ.

ಪ್ರತಾಪಚಕ್ರವರ್ತಿ ಜಗದೇಕಮಲ್ಲನ ೧೦ನೇ ವರ್ಷದ ಆಳ್ವಿಕೆಯಲ್ಲಿ ಪ್ರಭವ ಸಂವತ್ಸರದ ಶ್ರಾವಣ ಅಮವಾಸ್ಯೆಯ ಕ್ರಿ.ಶ.೧೧೪೭ರಲ್ಲಿ ರಚಿತವಾಗಿದೆ, ಬೆಳವೊಲದ ೧೮ ಅಗ್ರಹಾರಗಳಲ್ಲಿನ ಒಂದು ಅಗ್ರಹಾರವಾದ ನರಗುಂದದ ವರ್ಣನೆ. ಅದರ ೧೨೦ ಮಹಾಜನರಿಂದ ಲಕ್ಷ್ಮಿನಾರಾಯಣ ಭಟ್ಟನು ಭೂಮಿಯನ್ನು ಕೊಂಡು ನಾಚಯ ಷಡಾಂಗಿ ಅವರ ಮೊಮ್ಮಕ್ಕಳೂ ದೇಶಯ ಷಡಾಂಗಿ ಮತ್ತು ಜಕ್ಕಣಂಬೆ ಅವರ ಮಕ್ಕಳೂ ಆದ ಶಂಕರ ಮತ್ತು ನಾರಾಯಣರೆಂಬ ಸೋದರರು ಹೇಮಗಿರಿಯ ಕೀರ್ತಿನಾರಾಯಣ ಸ್ವಾಮಿಗೆ ನರಗುಂದದ ನಾಲ್ಕು ಕೇರಿಗಳಲ್ಲಿನ ಒಂದು ಕೇರಿಯನ್ನು ದಾನವಾಗಿ ನೀಡಲಾಗಿದೆ. "ಸರ್ವಜ್ಞ ಪಟ್ಟವರ್ಧನ" ಎಂಬುದು ಶಾಸನ ಕವಿಯ ಬಿರುದಾಗಿರಬೇಕು. "ಪೂಲಿಯ ಸೊಂನದರ ವಾಸುದೇವ ವಿಭುದಾಧೀಶ" ಎಂಬ ಮೊದಲಲ್ಲಿ ಬರುವ ಒಂದು ಪದ್ಯದಿಂದ ವಾಸುದೇವ ಎಂಬುದು ಈತನ ನಿಜವಾದ ಹೆಸರೆಂದು ತಿಳಿಯುತ್ತದೆ. ಆದರೆ ಈ ಸರ್ವಜ್ಞಪಟ್ಟವರ್ಧನನು, ವಾಸುದೇವನೂ ಒಂದೇ ಎಂದು ಹೇಳಬರುವಂತಿಲ್ಲ. ಆರ್.ಎಸ್. ಪಂಚಮುಖಿ ಈ ಇಬ್ಬರೂ ಒಂದೇ ಎಂದು ಭಾವಿಸುತ್ತಾರೆ.[೪೬]

**ವಿಕ್ರಮಾದಿತ್ಯನ ಹಿರಿಮೆ:**

> **ಹೇಳಾಸಾಧಿತಮಾಗಲನ್ಯ ಮಹಿಗಳ್ ವಿಕ್ರಾಂತ್ತಮಂ ತಾಳ್ದಿದಂ**
> **ಚೋಳವ್ಯಾಳಗಜಾರಿ ಕೇರಳಕುಳೋದನ್ವದ್ಘನೌರ್ವಾಗ್ನಿ ಪಾಂ**
> **ಚಾಳಧ್ವಾಂತದಿನೇಂದ್ರನಾಂಧ್ರ ವಿಪಿನ ಪ್ರೋದ್ದಾಮದಾವಾಗ್ನಿ ನೇ**
> **ಪಾಳಾಬೀಳಘನಾಘನೋಗ್ರಪವನಂ ಪೆರ್ಮಾಡಿ ಭೂಪಾಳಕಂ ॥**

**ನರಗುಂದದ ವರ್ಣನೆ:**

> **ವರಜಂಬೂದ್ವೀಪದೊಳ್ ರಂಜಿಸುವುದು ಭರತಕ್ಷೇತ್ರಮಾ ಕ್ಷೇತ್ರದೊಳ್ ಬ**
> **ನ್ಧುರಮನ್ತಾ ಕುನ್ತಳಂ ತದ್ವಿಷಯದೊಳತಿಶೋಭಾಸ್ಪದಂ ಬೆಳ್ವಲಂ ಬಿ**
> **ತ್ತರದಿಂದಾ ನಾಡೊಳೊಪ್ಪಂಬಡೆದುದು ಪದಿನೆಂಟಗ್ರಹಾರಂ ತದಭ್ಯ**
> **ನ್ತರದೊಳ್ ಲಕ್ಷ್ಮೀವಿಹಾರಂ ನೆಗೆರ್ದ್ದುದು ನಱುಗುನ್ದಾಭಿಧಾನಾಗ್ರಹಾರಂ ॥**

**ಮುಖ್ಯಪಂಡಿತ (ಕ್ರಿ.ಶ.೧೧೪೭):**

ಅವಿಭಜಿತ ಧಾರವಾಡ ಜಿಲ್ಲೆಯ, ಶಿರಹಟ್ಟಿ ತಾಲೂಕಿನ, ಪುಲಿಗೆರೆ (ಈಗಿನ ಲಕ್ಷ್ಮೇಶ್ವರ) ದಲ್ಲಿ ದೊರೆತ ಶಾಸನವನ್ನು[೪೭] 'ಸೂರಿಲಿಯ ಮುಖ್ಯ ಪಂಡಿತರ ಕವಿತೆ' ಎಂದಿರುವುದನ್ನು ಕಾಣುತ್ತೇವೆ. ಈತನೂ ತನ್ನನ್ನೂ 'ಕರ್ನಾಟಕ ಸುಕವಿ' ಎಂದು ಕರೆದುಕೊಂಡಿದ್ದಾನೆ. ಶಾಸನ ಗದ್ಯ–ಪದ್ಯಾತ್ಮಕವಾಗಿದೆ. ಕೆಲವು ಸಂಸ್ಕೃತ ಶ್ಲೋಕಗಳು ಇವೆ.

ಪುಲಿಗೆರೆ ಶಾಸನದಲ್ಲಿ ಪೇರ್ಗಡೆ ದಂಡನಾಯಕನಾದ ಮೇಚರಸನು ೧೦೦ ಮತ್ತರು ಭೂಮಿದಾನವನಿತ್ತು, ದೇವಸ್ಥಾನಕ್ಕೆ ಚಿನ್ನದ ಕಲಶವನ್ನು ಹಾಕಿಸಿದರು. ಹೊಸೂರು ಶಾಸನ[೪೮] ಮೂಲದೇವರಿಗೆ ಹೊಳ್ಳಗಾವುಂಡನು ನೀಡಿದ ದಾನವನ್ನು ವಿವರಿಸುತ್ತದೆ.

ಪ್ರಸ್ತುತ ಪುಲಿಗೆರೆ ಶಾಸನವು ಚಾಲುಕ್ಯ ವಂಶದ ೨ನೇ ಜಗದೇಕಮಲ್ಲನ ಪೂರ್ವಜರ ವಂಶಾವಳಿಯನ್ನು ವಿವರವಾಗಿ ನೀಡುತ್ತದೆ. ತೈಲಪನಿಂದ ಆರಂಭವಾಗಿ ಅವನ ಮಗ ಸತ್ಯಾಶ್ರಯ, ವಿಕ್ರಮ, ಅಯ್ಯನ, ಜಯಸಿಂಹ, ಅನಂತರ ಆಹವಮಲ್ಲ, ಸೋಮೇಶ್ವರರು, ಕ್ರಮವಾಗಿ ರಾಜ್ಯದೊಡೆಯರಾಗಿ ಆಳುತ್ತಾರೆ, ಚೋಳ ಗುರ್ಜರರನ್ನು ನಿರ್ಮೂಲಮಾಡಿದ ಪೆರ್ಮಾಡಿನೃಪ ವಿಕ್ರಮಾದಿತ್ಯ ಭೂಲೋಕಮಲ್ಲ ಇವರು ಆ ವಂಶದಲ್ಲಿ ಮುಖ್ಯರಾದವರು.

ಭೂಲೋಕಮಲ್ಲನ ಅನಂತರ ಬಂದ ಜಗದೇಕಮಲ್ಲನ ಕಾಲದಲ್ಲಿ ರಾಜ್ಯ ಸುಭಿಕ್ಷವಾಗಿತ್ತು ಎಂಬುದನ್ನು ಕವಿ ಹೀಗೆ ವರ್ಣಿಸಿದ್ದಾನೆ.

**ಕಮಠ ಕಠೋರ ಕರ್ಪರದ ತಾಪಮಡಂಗಿತು ನಾಗರಾಜನು**
**ತ್ತಮಮಣಿಮಸ್ತಕಕ್ಕೆ ಹೊಱಿಕೆ ಹಿಂಗಿದುದಾ ದಿಗಿಭಕ್ಕೆ ಕಂಠಭಾ**
**ರಮುದುಡುಗಿತ್ತೆನಲ್ವಸುಮತೀತಳಮಂ ಜಗದೇಕಮಲ್ಲನ**
**ಶ್ರಮದೊಳೆ ತಾಳ್ದಿದಂ ನಿಜಭುಜದೃಢಿಮ ಪ್ರಬಳ ಪ್ರದೇಶದೊಳ್ ॥**

ಇವನ ದಂಡಾಧೀಶನಾದ ಕೇಶಿರಾಜ 'ಸತತಾಳಂಕೃತ ಭದ್ರಲಕ್ಷಣಯುತಂ' ಆಗಿದ್ದು ಚೋಳ, ಲಾಳ, ಗುರ್ಜರರನ್ನು ನಿಗ್ರಹಿಸಿದ ಅಂಶಗಳು ಶಾಸನದಲ್ಲಿದೆ. ಈ ವಂಶದಲ್ಲಿ ಬರುವ ದಂಡಾಧೀಶರಲ್ಲಿ ಮೇಚರಸನು ಮುಖ್ಯನಾದವನು. ಮೇಚರಸನ ತಂದೆಯಾದ ದ್ರೋಣಾಚಾರ್ಯ ದಂಡಾಧೀಶನಿಗೆ ಮೂವರು ಮಕ್ಕಳು ಆ ಮಕ್ಕಳ ಹಿರಿಮೆ ಕುರಿತು ಪದ್ಯಗಳು.:

**ಕಾಲಾಗ್ನಿಸ್ಫುರಿತಶಿಖಾ**
**ಮಾಲೆ ಮಹಾರಾಹುರಸನಮಂತಕದಂಷ್ಟ್ರಂ**
**ಕಾಲಾಹಿಯ ಪೂತ್ಕಾರಂ**
**ಸೂಲಿಗೆ ಸೂಲಿಗೆಯ ಕಂಚಿ ದಂಡಾಧಿಪನಾ ॥**

**ಕನಕಾಚಳ ಚೂಡಾಕಾಂ**
**ಚನಬಂ ಹಿಮ ಕಳಶಮೆನಿಪ ದಕ್ಷಿಣ ಸೋಮೇ**
**ಶನ ಮಂದಿರಕ್ಕೆ ಕಾಂಚನ**
**ಘನಕಳಶಮನಿಟ್ಟನನುಪಮಂ ಮೇಚರಸಂ ॥**

**ಮಧುಸೂದನದೇವ (ಕ್ರಿ.ಶ.೧೧೪೭)**

ಈತನು ಹಾವೇರಿ ಜಿಲ್ಲೆಯ, ದಾವಣಗೆರೆ ತಾಲೂಕಿನ, ದಾವಣಗೆರೆಯ[೪೯] ಶಾಸನವನ್ನು ಚಾಳುಕ್ಯ ಜಗದೇಕಮಲ್ಲನ ಆಳ್ವಿಕೆಯಲ್ಲಿ ಬರೆದಿದ್ದಾನೆ, ಜಗದೇಕಮಲ್ಲನ ಸಾಮಂತ ವೀರಪಾಂಡ್ಯ ರಾಜನು ಶಂಕರನಾರಾಯಣ ದೇವರಿಗೆ ಒಂದು ಗ್ರಾಮವನ್ನು ದತ್ತಿಯಾಗಿ ಬಿಟ್ಟಂತೆ ಹೇಳಿದೆ. ಈ ಶಾಸನದ ಬಿಗಿಯಾದ ಬಂದ ಅದ್ಭುತವಾಗಿದೆ. ದಾವಣಗೆರೆ ಶಾಸನದಲ್ಲಿ ಸಮುದ್ರವನ್ನು ಈ ರೀತಿಯಾಗಿ ಶಾಸನಕವಿ ವರ್ಣಿಸಿದ್ದಾನೆ.

**ಮಕರವ್ರಾತಾಭಿಘಾತೋಚ್ಚಳಿತಕಮಠ ಸಂಘಟ್ಟ ಸಂಸ್ಪರ್ಧಿ ಮೀನ**
**ಪ್ರಕರಪಕ್ಷೋಭಿತೋದ್ವೃತ್ತರಳತರಂಗೋತ್ಕರಂ ಕ್ಷಿಪ್ತಮುಕ್ತಾ**
**ನಿಕರಂ ಕಣ್ಗೆಯ್ದೆ ಚೆಲ್ವಂ ಪಡೆದುದವಿರಳೋತ್ತಾಳ ಕಲ್ಲೋಳಮಾಳಾ**
**ಧಿಕ ಸಂಘರ್ಷ ಪ್ರಜಾಪ್ರಬಳ ಘನಘನ ಧ್ವಾನರೌದ್ರಂ ಸಮುದ್ರಂ ॥**

**ಅದು ನಾನಾನಕ್ರಚಕ್ರಕ್ರಮ ಕರಿಮಕರೋಡ್ಡೀನಪಾಠೀನಪುಚ್ಛ**
**ಚ್ಛದವಾತಾಘಾತಭೀತಾಚಳನಚಳತ್ತುಂಗರಂಗಂಗತ್ತರಂಗೌ**
**ಘ ದುರಂತಪ್ರಾಂತಮುಜ್ಜೃಂಭಿತ ಬಹಳ ತಡಿಜ್ಜಾಳಲೀಳಾವಿನೀಳಾಂ**
**ಬುದಬಿಂಬಾಡಂಬರಂ ಕಣ್ಣೆಸೆಯುವುದು ಲಹರೀಲೋಳಬಾಳಪ್ರವಾಳಂ ॥**

**ಕಲಿದೇವ ಪಂಡಿತ (ಕ್ರಿ.ಶ.೧೧೪೮)**

ಬೆಳಗಾವಿ ಜಿಲ್ಲೆಯ, ಸವದತ್ತಿ ತಾಲೂಕಿನ, ಸಿರಸಂಗಿ ಶಾಸನವನ್ನು[೫೦] ರಾಣೆಬೆನ್ನೂರು ತಾಲೂಕಿನ ಹಲ್ಲತ್ತಿ[೫೧] ಗ್ರಾಮದ ಶಾಸನವನ್ನು ಕಲಿದೇವ ಪಂಡಿತನು ರಚಿಸಿದ್ದಾನೆ. ಮೊದಲನೇ ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಇಮ್ಮಡಿ ಜಗದೇಕಮಲ್ಲನನ್ನು ಉಲ್ಲೇಖಿಸಿದ್ದು, ಕ್ರಿ.ಶ.೧೧೪೮ರಲ್ಲಿ ರಚನೆಯಾಗಿದೆ. ಎರಡನೇ ಶಾಸನವು ಕ್ರಿ.ಶ.೧೧೬೮ರಲ್ಲಿ ರಚನೆಯಾಗಿದೆ. ಮೊದಲನೇ ಶಾಸನದಲ್ಲಿ 'ಶ್ರೀಮದ್ಭುವನಚಂದ್ರ ಸಿದ್ಧಾಂತ ದೇವರಗುಡ್ಡಂ,' 'ಕಲಿದೇವ ಪಂಡಿತರ ಕವಿತೆ' ಎಂಬ ಉಲ್ಲೇಖದಿಂದ ಕಲಿದೇವ ಪಂಡಿತನು ಭುವನಚಂದ್ರ ಸಿದ್ಧಾಂತ ದೇವರ ಶಿಷ್ಯನೆಂದು ಈತನ ಊರು ರಾಣೆಬೆನ್ನೂರಿನ 'ಹೂಲಿಹಳ್ಳಿ' ಎಂದು ತಿಳಿಯುತ್ತದೆ.

ಸಿರಸಂಗಿಯ ಶಾಸನದಲ್ಲಿ 'ಸುಕವೀಶ್ವರ ತಂಡದಿಂದೆ' ಎಂಬ ಪದ ಪ್ರಯೋಗದಿಂದ ಈ ಊರಿನ ಕವಿಗಳ ತಂಡವೇ ಇರಬೇಕೆಂದು ಸೂಚಿಸುತ್ತದೆ. "ಮೇವುಂಡಿಯವರು ಸಿರಸಂಗಿಯಲ್ಲಿ ಆ ಕಾಲದಲ್ಲಿ ಕಡಿಮೆಯೆಂದರೆ ಮೂರು ಅಥವಾ ಅದಕ್ಕಿಂತ ಹೆಚ್ಚು ಜನ ಒಳ್ಳೆಯ ಕವಿಗಳಿದ್ದರು ಎಂದು ಶಾಸನಕವಿ ಧ್ವನಿತಗೊಳಿಸಿದ್ದಾನೆ"[೫೨] ಎಂದಿದ್ದಾರೆ. ಈ ಎಲ್ಲಾ ಕವಿಗಳಿಗೆ ಆ ವೂರಿನ ಗೌಡರು ಪೋಷಕರಾಗಿದ್ದರೆಂದು ಈ ಶಾಸನದಿಂದ ತಿಳಿದುಬರುವುದು ಸಿರಸಂಗಿಯ ಶಾಸನದಲ್ಲಿ ಅರುವರು ಗೌಡರು (೬ಮನೆತನ) ಮನೆತನಗಳ ವ್ಯಕ್ತಿಗಳ ಹಿರಿಮೆಯನ್ನು ಹೇಳಿದೆ.

**ಋಷ್ಯಶೃಂಗಪುರದ ವರ್ಣನೆ :-**

**ಸುತ್ತಿದ ಬೆಟ್ಟದಿಂದೆಸೆವ ನನ್ದನದಿಂ ಪಲವುಂ ತಟಾಕದಿಂ**
**ದುತ್ತಮಮಪ್ಪ ದೇವಗೃಹಸಂಕುಳದಿಂ ವರದಿವ್ಯತೀರ್ಥದಿಂ**
**ವೃತ್ತಪಯೋಧರಾಂಗನೆಯರಿಂ ಸುಕವೀಶ್ವರ ತಂಡದಿಂದೆ ಲೋ**
**ಕೋತ್ತರಮಾಯ್ತು ಬೆಳ್ವಲದೊಳ್ ರಿಶಿಶೃಂಗಪುರಂ ಮನೋಹರಂ ॥**

**ಬೆಳ್ವಲದೇಶದ ವರ್ಣನೆ:**

**ಎಳೆಯೆಂಬ ಸತಿಯ ಕು**
**ನ್ತಳಕಳಾಪದಂತೆಸೆದು ತೋರ್ಪ ಕುನ್ತಳದೇಶ.**
**ಕ್ಕಳವಟ್ಟ ಚಿನ್ನಪೂವೆನೆ**
**ಬೆಳಗಿದುದೊಳ್ವಲಮೆನಿಪ್ಪ ಬೆಳ್ವಲದೇಶಂ ॥**

ರಾಣೆಬೆನ್ನೂರಿನ ಹಲ್ಲತ್ತಿ ಗ್ರಾಮದ ಶಾಸನವನ್ನು ಈತನೇ ಬರೆದಿದ್ದಾನೆ. ಗುತ್ತ ಮಹಾಮಂಡಳೇಶ್ವರನಾದ ವಿಕ್ರಮಾದಿತ್ಯ, ಆತನ ಅರಸಿ ಸೋವಲದೇವಿ ಮತ್ತು ಆತನ ಅಧೀನ ಅಧಿಕಾರಿಯಾಗಿದ್ದ ಕಾಳಗಾವುಂಡ, ಇವರೆಲ್ಲರೂ ಹೊಸ ವೂರಲ್ಲಿನ ಕಲಿದೇವ ಸ್ವಾಮಿಗೆ

ಭೂದಾನ ನೀಡಿದ ವಿಷಯ ಈ ಶಾಸನದಲ್ಲಿ ಉಲ್ಲೇಖವಾಗಿದೆ. ಈ ಶಾಸನವು ಗದ್ಯ ಪದ್ಯಾತ್ಮಕವಾಗಿದೆ. ಕವಿಯು ಇದರಲ್ಲಿ ಸಮುದ್ರ, ಜಂಬೂದ್ವೀಪ, ಕುಂತಳ, ಮುಂತಾದವುಗಳನ್ನು ಸಂಪ್ರದಾಯಕ್ಕನುಗುಣವಾಗಿ ವರ್ಣಿಸಿದ್ದಾನೆ. ಚಾಳುಕ್ಯ ಮನೆತನದ ೪ನೇ ಸೋಮೇಶ್ವರ, ಆತನ ಮಾಂಡಲಿಕರಾದ ಗುತ್ತ ವಂಶದ ಅರಸರ ವಂಶಾವಳಿಗಳನ್ನೆಲ್ಲ ಪದ್ಯರೂಪದಲ್ಲಿ ಹೇಳಿದ್ದಾನೆ.

**ಚಾಳುಕ್ಯ ಸೋಮೇಶ್ವರನ ಹಿರಿಮೆ:**

**ಅರವಿಂದಸ್ಮೇರ ಸಾರೇಕ್ಷಣಭುವನಜನಸ್ಥಾರನೀರೇಜಷಂಡಂ**
**ಸಿರಿಯಂ ತಕ್ಕಯ್ಸಲುದ್ಯತ್ಕಳಚರಿ ಧರಣೀಪಾಳ ರಾಜಾಂಧಕಾರಂ**
**ಪರೆಯಲ್ ಚಾಲುಕ್ಯ ಸಿಂಹಾಸನ ಕನಕಮಯಾದ್ರೀಂದ್ರದೊಳ್ ವೀರ**
**ಸೋಮೇಶ್ವರದೇವಂ ರಾಜ್ಯಲಕ್ಷ್ಮೀ ಪ್ರಿಯನುದಯಿಸಿದಂ ರಾಯಮಾರ್ತಾಂಡದೇವಂ ॥**

**ಸೋವಲದೇವಿಯ ಪ್ರಶಂಸೆ:**

**ಸತಿ ಗುಣವತಿ ದಾನಾನ್ವಿತೆ,**
**ಪತಿಹಿತೆ ಶ್ರೀವಿಜಯಪಾಂಡ್ಯವಂಶೋದ್ಭವೆ ಭೂ**
**ಪತಿ ವಿಕ್ರಮನ ಮನೋವಲ್ಲಭೆ**
**ಸತಿ ಸೋವಲದೇವಿಗುಳಿದ ಪೆಂಡಿರ್ದೊರೆಯೇ ॥**

**ಶಂಕರದೇವ (ಕ್ರಿ.ಶ. ೧೧೪೮)**

ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಕೊಟ್ನಕಲ್ಲು ಗ್ರಾಮದ ಶಾಸನವನ್ನು[೫೩] ಶಂಕರದೇವ ಕವಿಯು ರಚಿಸಿದ್ದಾನೆಂದು ತಿಳಿದು ಬರುವುದು. ಶಾಸನದ ೫೫ನೇ ಸಾಲಿನಲ್ಲಿ "ಬರೆದಂ ಶಾಸನಮಂ ಶಂಕರದೇವ ವೀರಪಾಂಡ್ಯದೇವನರಾಧೀಶ್ವರಭವ ಸಂಧಿವಿಗ್ರಹಿಧುರಂಧರಂ ವಿಪ್ರವಂಶ ಚೂಡಾರತ್ನ" ಎಂದಿರುವುದರಿಂದ ಈತ ಬ್ರಾಹ್ಮಣ ಕವಿಯಾಗಿರಬೇಕು. ವೀರಪಾಂಡ್ಯನ ಸಂಧಿವಿಗ್ರಹಿ 'ಶಂಕರದೇವ' ಈ ಶಾಸನ ಬರೆದನು.

ಇದರಲ್ಲಿ ಚಾಲುಕ್ಯ ದೊರೆಗಳ ವಂಶಾವಳಿ, ಜಗದೇಕಮಲ್ಲನ ಮಾಂಡಲಿಕ ವೀರಪಾಂಡ್ಯದೇವ ಮತ್ತು ಆತನ ತಾಯಿ, ಸೋವಲದೇವಿ, ಭಿಲ್ಲವರಾಯನ ಮಗಳು, ವಿಕ್ರಮಾದಿತ್ಯನ ಸಹೋದರಿಯನ್ನು ಕುರಿತು ವಿವರಗಳಿವೆ. ಅಜ್ಜನರನಾಥನ ಮಗ ಬೊಪ್ಪದೇವ ವಿಕ್ರಮಾದಿತ್ಯನ ಮಗಳು ಮಹಾದೇವಿಯನ್ನು ಕುರಿತು ಶಾಸನವು ಮಾಹಿತಿ ನೀಡುತ್ತದೆ. ಹೂವಿನಹಡಗಲಿಯ ಉತ್ತರಕ್ಕಿರುವ ಕೋಟಿಶಂಕರದೇವರ ಸೇವಾಕಾರ್ಯಗಳಿಗೆ ಮತ್ತು ಬ್ರಾಹ್ಮಣರ ಆಹಾರಕ್ಕಾಗಿ ವಿಕ್ರಮಾದಿತ್ಯನು ಕೊಟ್ಟಿಗನೂರು ಗ್ರಾಮವನ್ನು ದಾನ ಮಾಡಿದನು. ಈ ದಾನವನ್ನು ಪಡಂಗಿಲೆಯ ೧೨೦ ಮಹಾಜನರು ಪ್ರತಿಪಾಳಿಸುವರು.

**ಕುಂತಳ ದೇಶದ ವರ್ಣನೆ ಹೀಗೆ ಮಾಡಲಾಗಿದೆ:**

> **ತದ್ವಳಯವಳಯಿತಂ ವಿಳಸದಮಲವಿಚಿತ್ರಮೆನಿಸಿ ಸೊಗಯಿಸುವುದು**
> **ಜಂಬೂದ್ವೀಪಮಲ್ಲಿ ಕುಭ್ರಿದ್ವಲ್ಲಭನೆನಿಪ ಮೇರುಗಿರಿ ರಂಜಿಸುತ್ತಿರೆ ॥**
> **ಅಂತೆಸೆವ ಮೇರುಗಿರಿಯಿಂದಂ ತೆಂಕಣದೆಸೆಯೊಳೆಸೆವ**
> **ಭಾರತವರ್ಷಾಭ್ಯನ್ತರದೊಳಿಳಾಕಾನ್ತೆಯ ಕುನ್ತಳಮೆನೆ**
> **ಮುಖ್ಯವಾಯ್ತು ಕುನ್ತಳದೇಶ ॥**

**ಚಾಲುಕ್ಯ ದೊರೆ ತೈಲಪನ ಬಗ್ಗೆ ಹೀಗೆ ಹೇಳಿದೆ:**

> **ಕುನ್ತಳದೇಶಮನಾಳ್ವರೆನನ್ತಾಹಿತಮಹಿಪನಿಕರಮಂ ಗೆಲ್ದು**
> **ಮಹೀಕಾನ್ತಾವಲ್ಲಭರತಿಶಯಕಾನ್ತಗುಣಾವಾಸರತಿಬಲರ್ಚ್ಚಾಳುಕ್ಯರು ॥**
> **ಚಾಳುಕ್ಯತಿಳಕನಾಳ್ದಂ ಶ್ರೀಲಲನಾಲಿಂಗಿತೋಚ್ಚವಕ್ಷಸ್ಥಳನಾಭಿಳಪ್ರತಾಪನ**
> **ಸುಹೃತ್ಕೀಲಾಲಪನೆನಿಪ ತೈಲಪಂ ವಸುಮತಿಯ ॥**

ಎಂದು ತೈಲಪನನ್ನು ಹಲವು ಬಗೆಗಳಲ್ಲಿ ವರ್ಣಿಸಿದೆ.

**ಹಬ್ಬಣ್ಣಯ್ಯ ನಾಯಕ (ಕ್ರಿ.ಶ.೧೧೪೮)**

ಬಾಗಲಕೋಟೆಯ ಶಿರೂರು ಗ್ರಾಮದ ರಾಮಲಿಂಗ ದೇವಾಲಯದ ಶಾಸನವನ್ನೂ ಅದೇ ಗುಡಿಯ ಎದುರಿರುವ ಲಕ್ಷ್ಮೀನಾರಾಯಣ ದೇವಾಲಯದ ಶಾಸನವನ್ನು[೫೪] ಹಬ್ಬಣಯ್ಯನಾಯಕ ಕವಿ ರಚಿಸಿದನೆಂದು ತಿಳಿಯುತ್ತದೆ. ಈ ಶಾಸನಗಳ ಕಾಲಾವಧಿ ಕ್ರಿ.ಶ.೧೧೪೮. ಬಹುಭಾಗ ತ್ರುಟಿತವಾಗಿರುವ ಈ ಶಾಸನ ಕಲ್ಯಾಣ ಚಾಲುಕ್ಯರ ಕೆಲವು ರಾಜರುಗಳನ್ನು ಹೆಸರಿಸುತ್ತದೆ. ಈ ಶಾಸನಗಳಲ್ಲಿ ಕಲ್ಯಾಣ ಚಾಲುಕ್ಯರ ವಂಶಾವಳಿ, ಅದರಲ್ಲೂ ಜಗದೇಕಮಲ್ಲನ ಮಹಾರಾಣಿ ಲಕುಮಾದೇವಿಯನ್ನು ಮೂರು ಶಾಸನಗಳಲ್ಲಿ ವರ್ಣಿಸಲಾಗಿದೆ.:

> **ಮನಸಿಜರಾಜನರ್ಚಿಸುವ ಕರ್ಬಿನ ಬಿಲ್ಲೆನೆ ಪುರ್ಬು ಕಾಮದೇ**
> **ವನ ಕುಸುಮಾಸ್ತ್ರವಿಸ್ತರಮಿವೆಂದೆನೆ ನೀಳ್ದಲರ್ಗಣ್ಗಳಾ ಮನೋ**
> **ಜನ ನಡದಿಟ್ಟ ಜಂಗಮಲತಾಂಗಮೆನಲ್ ನಿಜರೂಪು ಲಕ್ಷ್ಮೀಭಾ**
> **ಜನಮೆನೆ ಲಕ್ಷ್ಮಿದೇವಿಗೆಣೆ ಮೇನಕೆಯೂರ್ವಸಿರಂಭೆಯೆಂಬವರ್ ॥**

**ನಾಗರಾಶಿ ಪಂಡಿತ (ಕ್ರಿ.ಶ.೧೧೫೬)**

ಹಾಸನ ಜಿಲ್ಲೆಯ, ಹಾಸನ ತಾಲೂಕಿನ, ಚಿಕ್ಕಕಡಲೂರು[೫೫] ಗ್ರಾಮದ ಕಲ್ಮೇಶ್ವರ ದೇವಾಲಯದ ಒಂದು ಶಾಸನವನ್ನು ಶಾಸನಕವಿ ಮುದುಗೆರೆಯ ನಾಗರಾಶಿ ಪಂಡಿತನು ಕ್ರಿ.ಶ.೧೧೫೬ರಲ್ಲಿ ರಚಿಸಿದನೆಂದು ತಿಳಿಯುತ್ತದೆ. ಈ ಶಾಸನದಲ್ಲಿ ಎರಡು ಪದ್ಯಗಳಿವೆ.

ಮುರಹರನಾಭಿಪಂಕಜದೊಳುದ್ಭವಿಸಿರ್ದ ಪಿತಾಮಹಂಗೆ ಸ
ಚ್ಚರಿತ ಪವಿತ್ರನತ್ರಿಮುನಿ ಪುಟ್ಟಿದನಾಮುನಿರಾಜನಂದನಂ
ವರಗುಣಿ ಸೋಮನಾಥನ ಮಗಂ ಬುಧನಾತ್ಮಜಂ ಜಗೋ
ದ್ಧರನೆನಿಪಂ ಪುರೂರವನ ತತ್ಸುತನಾಯುವೆನಿಪ್ಪನೊಪ್ಪಿದಂ ॥

ಆತನ ಹೆಮ್ಮಗಂ ನಹುಷನಾನಹುಷಂಗೆ ಯಯಾತಿ ಪುಟ್ಟಿದಂ
ಭೂತಳಸೇವ್ಯನಾಥನ ಸುತಂ ಯದು ಯಾದವವಂಶಸಂಭವಂ
ನೀತಿವಿದಂ ನೆಗರ್ತೆಪಡೆದಂ ವಿನಯಾರ್ಕ....ನಂದಂ
ಖ್ಯಾತಿಯನಾಂತೆಱಂಗನೆಸೆವಾತ್ಮಜನೂರ್ಜಿತ ವಿಷ್ಣುಭುಜಂ ॥

ಇದೇ ತಾಲೂಕಿನ ಮುದುಗೆರೆಯ ಈಶ್ವರ ದೇವಾಲಯದ ಶಾಸನವನ್ನು ಕ್ರಿ.ಶ.೧೧೫೬ ರಲ್ಲಿ ಇದೇ ಕವಿ ರಚಿಸಿದನೆಂದು ತಿಳಿದುಬರುವುದು.[೫೬] ಅದರ ಎರಡು ಪದ್ಯಗಳನ್ನು ಹೀಗೆ ನೋಡಬಹುದು:

ನುಡಿ ಕನಕಾದ್ರಿಯೊಳ್ಪದುಮಜಂ ಕಡದಕ್ಕರವಾರ್ಪುರ್ ಬೇರ್ಪುರ್ದಂ
ಕುಡುವ ಸುರದ್ರುಮಕ್ಕೆ ಪಡಿ ಮಾರ್ಪರ್ ಪರಾರ್ಥತೆ ಖೇಚರಂಗೆ ನೂ
ರ್ಮಡಿ ಪತಿಭಕ್ತಿಮಾರುತಸುತಂಗೆ ಪದಿರ್ಮಡಿಯೆಂದೊಡಣ್ಣ ಹೆ
ಗ್ಗಡೆಯೆಱಗಂಗೆ ಪಾಸಟಿಯೆ ಮುತ್ತಿನ ಮಾನವರೀಧರಿತ್ರಿಯೊಳ್ ॥

ಎಱಗಂ ಸತೀವಿಲಾಸ
ಕ್ಕೆಱಗಂ ಸತ್ಪುಣ್ಯವಲ್ಲದದಿಱಂ ಪಾಪ
ಕ್ಕೆಱಗನೆನೆ ಹೆಮ್ಮೆವಡೆದಿ
ರ್ದೆಱೆಯಮರ್ವೆರ್ಗಡೆಯ ಸರಿಯೆ ಮುತ್ತಿನ ಮನುಜರ್ ॥

ಅದೇ ರೀತಿ ಅರಸೀಕೆರೆ ತಾಲೂಕಿನ ಕಣಿಕಟ್ಟೆಯ ಹಿರೇಕಲ್ಲು ಬೆಟ್ಟದ ಶಾಸನವನ್ನು ನಾಗರಾಶಿ ಪಂಡಿತನೇ ಬರದನೆಂದು ತಿಳಿದುಬರುತ್ತದೆ. ಕ್ರಿ.ಶ.೧೧೫೫ ರ ಮುದುಗೆರೆಯ ಶಾಸನವು ಪೆರ್ಗಡೆ ಎರೆಯಮಯ್ಯನು ಮುದುಗೆರೆಯಲ್ಲಿ ತನ್ನ ಹೆಸರಿನ ಎರಂಗೇಶ್ವರ ದೇವಾಲಯವನ್ನು ಕಟ್ಟಿಸಿ, ಆ ದೇವಾಲಯದ ಮುನಿ ನಾಗರಾಶಿ ಪಂಡಿತದೇವನ ಪಾದಪೂಜೆ ಮಾಡಿ, ದೇವಾಲಯಕ್ಕೆ ದಾನ ಮಾಡಿದ್ದನ್ನು ವಿವರಿಸುತ್ತದೆ.

**ಕವಿ ನಾಗರಾಶಿಪಂಡಿತನನ್ನು ಕುರಿತ ಕಂದಪದ್ಯ ಹೀಗಿದೆ :**

ಅಲ್ಲಿಗೆ ಮುನಿಪತಿ ಕೀರ್ತಿಯ
ವಲ್ಲಿಯೆ ಮಿಸುಪಂತೆ ಧವಳತನು ಕೆಂಜೆಡೆ ಸುಲಿ
ಪಲ್ಲು ವರ ಮುದ್ರೆ ಲಾಕುಳ
ಸಲ್ಲಕ್ಷಣವೊಗೆದನಂದು ಮುದುಗೆರೆ ಮುನಿಪಂ[೫೭]

ಈ ಶಾಸನದಲ್ಲಿ ಸ್ಥಾನಪತಿಯಾದ ನಾಗರಾಶಿ ಪಂಡಿತನು ಲಕುಳಶೈವನಾಗಿದ್ದು ಸಕಳಶಾಸ್ತ್ರ ಯಂತ್ರ–ತಂತ್ರ ನೈಪುಣ್ಯನು, ಪರಿಚಿತ್ತ ಜಾಣನೂ ಆಗಿದ್ದನೆಂದು ತಿಳಿದುಬರುವುದು, ಸುಂದರ ಕಾಯನಾಗಿದ್ದು, ಯಮ, ನಿಯಮ, ಸ್ವಾಧ್ಯಾಯ, ಧ್ಯಾನ ಧಾರಣ, ಮೌನ ಅನುಷ್ಠಾನ ಜಪ, ಸಮಾಧಿಯನ್ನು ಗೈದ ಶ್ರೇಷ್ಠ ಯೋಗಿಯಾಗಿದ್ದನು, ಎಂದು ವರ್ಣಿಸಿದೆ.

ಚಿಕ್ಕ ಕಡಲೂರು ಶಾಸನವನ್ನು 'ಮುದುಗೆರೆ ನಾಗರಾಶಿ ಪಂಡಿತ ಬರೆದಂ' ಎಂಬ ಆಧಾರದಿಂದ ಈ ಶಾಸನವನ್ನು ಈತನೇ ಬರೆದನೆಂಬುದು ತಿಳಿಯುತ್ತದೆ. ಕ್ರಿ.ಶ.೧೧೫೬ರಲ್ಲಿ ರಚಿತವಾದ ಈ ಶಾಸನದಲ್ಲಿ ಹೊಯ್ಸಳರ ವಂಶಾವಳಿಯನ್ನು ವಿಷ್ಣುವರ್ಧನನವರೆಗೆ ವರ್ಣನೆ ಮಾಡಿದ್ದಾನೆ. ವಿಷ್ಣುವರ್ಧನನು ಮಹಾಭಾರತದ ಮೂಲಪುರುಷರ ಹಿನ್ನೆಲೆಯಿಂದ ಬಂದವನೆಂದು ಚಿತ್ರಿಸಲಾಗಿದೆ. ಗೋವಿಂದಪುರದ ಮಹಾಜನರ ದಾನಕಾರ್ಯ ಶಿವಶಕ್ತಿಪಂಡಿತರ ಮೊಮ್ಮಗನಾದ ಹೊಲಜಿಯು ಕಲಿದೇವ ದೇವಾಲಯವನ್ನು ಕಟ್ಟಿಸಿದ್ದನ್ನು ಉಲ್ಲೇಖಿಸಿದೆ.

ಹಿರೇಕಲ್ಲು ಶಾಸನವನ್ನು ಗಮನಿಸುವುದಾದರೆ ಮುದುಗೆರೆಯ ಶಾಸನದಲ್ಲಿ ನಾಗರಾಶಿಪಂಡಿತನಿಗೆ ನೀಡಿದ ದಾನದ ವಿವರಗಳಿವೆ. ಆದ್ದರಿಂದ ಆ ಶಾಸನದ ಕವಿ ನಾಗರಾಶಿಪಂಡಿತನಲ್ಲ. ಅವನು ಶಾಸನವನ್ನು ಬರೆದನೆಂದು ಆ ಶಾಸನದಲ್ಲಿ ಹೇಳಿಲ್ಲ. ಒಟ್ಟಾರೆ ಈ ಮೂರು ಶಾಸನಗಳಿಂದ ತಿಳಿಯುವುದೇನೆಂದರೆ ನಾಗರಾಶಿಪಂಡಿತನು ಚಿಕ್ಕಕಡಲೂರು ಶಾಸನವನ್ನು ಮತ್ತು ಕಣಿಕಟ್ಟೆಯ ಶಾಸನವನ್ನು ತಾನೇ ರಚಿಸಿದವನಾಗಿದ್ದು ಮುದುಗೆರೆ ಶಾಸನವನ್ನು ನಾಗರಾಶಿ ಪಂಡಿತ ಬರೆದಿರಲಾರ. ಮೇವುಂಡಿಯವರು ಮುದುಗೆರೆ ಮತ್ತು ಹಿರೇಕಲ್ಲು ಶಾಸನಗಳನ್ನು ನಾಗರಾಶಿ ಪಂಡಿತನು ರಚಿಸಿದನೆಂದು ಅಭಿಪ್ರಾಯಪಡುತ್ತಾರೆ. ಹಾಸನ ಪ್ರಾಂತ್ಯದ ಆ ಕಾಲದ ಪ್ರಸಿದ್ಧಕವಿಯಾಗಿದ್ದುದರಿಂದ ಶಾಸನದಲ್ಲಿ ನಾಗರಾಶಿಪಂಡತನನ್ನು ಸ್ತುತಿಸಲಾಗಿದೆ. ಚಿಕ್ಕಕಡಲೂರು ಶಾಸನವನ್ನು ಬೇರೆ ಯಾರೋ ಬರೆದಿದ್ದಾನೆ, ಆದ್ದರಿಂದ ನಾಗರಾಶಿಪಂಡಿತನು 'ಶಾಸನಕವಿ' ಶಾಸನೋಕ್ತ ಕವಿಯಾಗಿದ್ದು ಆ ಕಾಲದಲ್ಲಿ ಪ್ರಸಿದ್ಧಿ ಹೊಂದಿದ್ದನು.

**ನಾಗಾರ್ಯ (ಕ್ರಿ.ಶ.೧೧೬೦)**

ಬಿಜಾಪುರ ಜಿಲ್ಲೆಯ ಬಿಜಾಪುರ ತಾಲೂಕಿನ ಬಾಬಾನಗರ ಶಾಸನವನ್ನು[೫೮] ನಾಗಚಂದ್ರ ಕವಿ (ರಾಮಚಂದ್ರ ಚರಿತ ಪುರಾಣ ಬರೆದ ಕವಿ) ಈತನ ಮೊಮ್ಮಗನಾದ 'ಮೂಲಿಗನಾಗಾರ್ಯ' ಎಂಬುವವನು ಈ ಶಾಸನವನ್ನು ಬರೆದಂತೆ ಶಾಸನದಲ್ಲಿ ಉಲ್ಲೇಖವಿದೆ.

ಶಾಸನ ಬಹು ತ್ರುಟಿತವಾಗಿದೆ. ಹೀಗಾಗಿ ಕಾಲದ ಪೂರ್ಣ ವಿವರಗಳು ಲಭ್ಯವಿಲ್ಲ. ಬಿಜ್ಜಳ ಮತ್ತು ಅವನ ಮಗ ಸೋವಿದೇವ ನೀಡಿದ ದಾನದ ಉಲ್ಲೇಖಗಳು ಬಂದಿದೆ. ಶಕ.೧೦೮೩ ವಿಕ್ರಮ ಸಂವತ್ಸರದ ಪುಷ್ಯದ ಉಲ್ಲೇಖವಿದೆ. ಇದು ಕ್ರಿ.ಶ.೧೧೬೦ರ ನವೆಂಬರ್–ಡಿಸೆಂಬರ್ ತಿಂಗಳಿಗೆ ಸಮನಾಗುತ್ತದೆ.

ಶಾಸನದ ಆರಂಭದಲ್ಲಿ ಕಳಚುರ್ಯ ಪೆರ್ಮಾಡಿದೇವನ ಹಿರಿಯ ಮಗನಾದ ಬಿಜ್ಜಳನ ವಿಶೇಷಗಳಿವೆ. ಅವನ ತಮ್ಮ ಮೈಳುಗಿ, ಮುಂದೆ ಶಾಸನ ಬಹು ಹಾಳಾಗಿದ್ದು ಕನ್ನಡಿಗೆಯೆಂಬಲ್ಲಿ ರವಿದೇವ ಎಂಬುವವನು ಬಸದಿಯೊಂದನ್ನು ಕಟ್ಟಿಸಿದಂತೆಯೂ, ಅಲ್ಲಿ ಮೂಲಸಂಘದ ದೇಶಿಗಣಕ್ಕೆ ಸೇರಿದ ತ್ರಿಭುವನ ದೇವನ ಶಿಷ್ಯ ಮಾಣಿಕ್ಯ ಭಟ್ಟಾರಕನು ಇದ್ದಂತೆಯೂ ಹೇಳಿದೆ.

ಬಿಜ್ಜಳನ ಮಗ ಸೋಮನೃಪನು ಮೊದೆಗಲೂರು ನೆಲೆವೀಡಿನಲ್ಲಿದ್ದಾಗ ಕನ್ನಡಿಗೆಯಲ್ಲಿ ಚಂದಮಯ್ಯ ಬಸದಿಯನ್ನು ಮಾಡಿಸಿ ದಾನ ನೀಡಿದ ಉಲ್ಲೇಖವಿದೆ. ಶಾಸನದ ಪ್ರಾಮುಖ್ಯ ಇರುವುದು ಇದನ್ನು ಬರೆದವನ ಬಗ್ಗೆ ಹೇಳುವಾಗ ೭೦ ಮತ್ತು ೭೧ನೇ ಸಾಲಿನಲ್ಲಿ ಹೀಗೆ ಹೇಳಿದ್ದಾನೆ.

**'ಪೊಸಮುತ್ತಂ ಚತುರಾಸ್ಯನಾಯ್ದಮೃತದಿಂದಂ ತೊಯ್ದು**<br>**ಕೋದಿಕ್ಕಿದೆಕ್ಕಸರಂ ವಾಗ್ವಧುವಿಗೆ ತಾನೆನಿಸಿ ಸುವ್ಯಕ್ತಂಗಳಾದಕ್ಕರಂ**<br>**ಮಿಸುಗಲು ಶಾಸನಮಂ ಸಮನ್ತು ಬರೆದಂ ಶ್ರೀ**<br>**ಮಲ್ಲಿನಾಥದೇವಾವಸಥಂ ಸತ್ಕವಿ ನಾಗಚಂದ್ರನುತಮೊಮ್ಮಂ**<br>**ನಾಗಚಂದ್ರಾಗ್ರಜಂ ಮೂಲಿಗ ನಾಗಾರ್ಯಂ..........॥** ಎಂದಿದೆ.

**ದೇವಭದ್ರಮುನಿಪ (ಕ್ರಿ.ಶ.೧೧೬೧)**

ತುಮಕೂರು ಜಿಲ್ಲೆಯ ಚಿಕ್ಕನಾಯಕನ ಹಳ್ಳಿ ತಾಲೂಕು ಬೂದಿಹಾಳು ಹೋಬಳಿ ಹೆಗ್ಗೆರೆ ಗ್ರಾಮದ ಬಸದಿಯೊಂದರಲ್ಲಿ ಕಂಡುಬಂದ ಜೈನಶಾಸನವನ್ನು 'ದೇವಭದ್ರಮುನಿಪ' ರಚಿಸಿರುವುದಾಗಿ ತಿಳಿದುಬರುತ್ತದೆ.[೫೯] ಇದರ ಕಾಲ ಕ್ರಿ.ಶ.೧೧೬೧ ೭೭ ಸಾಲುಗಳ ದೀರ್ಘವಾದ ಈ ಶಾಸನದಲ್ಲಿ ಕಲ್ಯಾಣ ಚಾಲುಕ್ಯನಾದ ಭೂವಲ್ಲಭ ಪೆರ್ಮಾಡಿದೇವನು ಕಲ್ಯಾಣದ ನೆಲೆವೀಡಿನಲ್ಲಿ ಸುಖ ಸಂಕಥಾವಿನೋದದಿಂದ ರಾಜ್ಯಗೆಯ್ಯುತ್ತಿದ್ದನೆಂದು ಆಗ ಹೊಯ್ಸಳ ವಿಷ್ಣುವರ್ಧನ ಮತ್ತು ಆತನ ಮಗ ಮೊದಲನೆಯ ನರಸಿಂಹರು, ಆಳುತ್ತಿದ್ದರೆಂದೂ ಹೇಳುವುದಲ್ಲದೆ ಅವರ ವಂಶಾವಳಿಯನ್ನು ವರ್ಣಿಸುತ್ತದೆ. ಅನಂತರ ಆತನ ಸಾಮಂತನಾದ ಚಟ್ಟನ ಸ್ತುತಿ ಆತನ ವಂಶಾವಳಿ ಕಂಡುಬರುತ್ತದೆ. 'ಕರ್ನಾಟಕ ಕಾಮಿನೀಶಶಿವದನಮಣಿಮಯ

ಮುಕುರ' ಎನಿಸಿದ್ದನೆಂದು ಈತನನ್ನು ಇಲ್ಲಿ ವರ್ಣಿಸಲಾಗಿದೆ. ನಂತರ ಚಂದ್ರಾಯಣ ದೇವರ ಶಿಷ್ಯನಾದ ಗೋವಿದೇವ ಮಹಾಸಾಮಂತನು ತನ್ನ ರಾಣಿಯಾದ ನಾಯಕಿತಿಯ ಸ್ಮರಣಾರ್ಥವಾಗಿ ಹೆಗ್ಗೆರೆಯಲ್ಲಿ ಚೆನ್ನಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿದ. ಅಲ್ಲದೇ ಅದಕ್ಕೆ ಅನೇಕ ದಾನ-ದತ್ತಿಗಳನ್ನು ಬಿಟ್ಟ ವಿಷಯವಿದೆ.

ಈ ಶಾಸನ ಕವಿ ಪ್ರಸ್ತುತ ಶಾಸನದ ಕೊನೆಯ ಕಂದ ಪದ್ಯದಲ್ಲಿ ಕಾಣಿಸಿಕೊಳ್ಳುತ್ತಾನೆ. ಆತನ ವರ್ಣನೆ ಹೀಗಿದೆ.

**ಉಚಿತ ಪದಾಳಂಕಾರಂ**
**ಪ್ರಚುರರಸಂ ನೆಗೆಳಲಿಂತು ಜಿನಶಾಸನಮಂ**
**ರಚಿಯಿಸಿದಂ ಹರಹಾಸಸು**
**ದ್ರುಚಿರಯಶಂ ದೇವಭದ್ರಮುನಿಪೋತ್ತಂಸಂ ॥**

ದೇವಭದ್ರಮುನಿಯು ತನ್ನಶಾಸನಕಾವ್ಯದ ರಚನೆಯು ಉಚಿತವಾದ ಪದಗಳಿಂದಲೂ, ಅಲಂಕಾರದಿಂದಲೂ, ಪ್ರಚುರವಾದ ರಸಗಳಿಂದಲೂ ಹೆಸರಾದುದೆಂದು ಹೇಳಿ ಹೆಮ್ಮೆ ಪಟ್ಟುಕೊಂಡಿರುವುದು ವ್ಯರ್ಥವಲ್ಲವೆಂದು ಹೇಳಬಹುದು. ಈ ಶಾಸನದಲ್ಲಿ ಕಂಡುಬರುವ ಬಂಧವನ್ನು ಗಮನಿಸಿದರೆ ದೇವಭದ್ರಮುನಿ ಸಂಸ್ಕೃತ ಕನ್ನಡ ಎರಡರಲ್ಲೂ ಉದ್ದಾಮ ಕವಿತ್ವಶಕ್ತಿ ಪಡೆದಿದ್ದನೆಂದು ಹೇಳಬಹುದು. ೧೯ ಪದ್ಯಗಳಿಂದ ಕೂಡಿರುವ ಪ್ರಸ್ತುತ ಶಾಸನದಲ್ಲಿ ಕಂಡುಬರುವ ಕೆಲವು ಕನ್ನಡ ಪದ್ಯಗಳನ್ನು ಅವುಗಳ ಸೊಗಸಿಗಾಗಿ ಇಲ್ಲಿ ಉದಾಹರಿಸಬಹುದು.

**ವಿಷ್ಣುವರ್ಧನನ ಶೌರ್ಯ**

**ಅರಿಪುರದೊಳ್ ಧಗಿಲ್ಧಗಿಧಗಿಲ್ಧಗಿಲೆಂಬುದರಾತಿ ಭೂಮಿಪಾ**
**ಳರ್ ಶಿರದೊಳ್ ಗರಿಲ್ಗರಿಲ್ಗರಿಲೆಂಬುದು ವೈರಿಭೂತಳೇ**
**ಶರ ಕರುಳೊಳ್ ಚಿಮಿಲ್ಚಿಮಿಚಿಮಿಲ್ಚಿಮಿಲೆಂಬುದು ಕೋಪವಹ್ನಿ ದು**
**ರ್ಧತರಮೆಂದೊಡಳ್ಕುಱದೆ ಕಾದುವರಾರ್ಮಲೆರಾಜರಾಜನೊಳ್.॥**

**ಸಾಮಂತ ಬಿಟ್ಟಿದೇವನ ವರ್ಣನೆ:**

**ನಲಿದುಲಿದಟ್ಟಿಕೊಂಡು ಕವಿತರ್ಪ ವಿರೋಧಿಬಳಕ್ಕೆ ಭೀತಿಯಿಂ**
**ನೆಲವೊಲನೆನ್ನದಲ್ಲದಿದು ಪೆರ್ಬಲಮೆನ್ನದೆ ದೋಃಪ್ರತಾಪದಿಂ**
**ಗಿಲಿಗಿಲಿಗಂಬವಾಡಿಸುವನಾಹವದೊಳ್ ಕಲಿ ಬಿಟ್ಟದೇವನಿ**
**ನೆಲೆಗಳವಂಗೆ ಸಂಗರದೊಳಾಂಪನೆ ಗಾಂಪನವಾರ್ಯಶೌರ್ಯನೊಳ್ ॥**

ಈ ಮೇಲಿನ ಪದ್ಯಗಳು ಸಂಪನ 'ವಿಕ್ರಮಾರ್ಜುನ ವಿಜಯದ' ಭೀಮ ಧುರ್ಯೋಧನರ ಗಧಾಯುದ್ಧವನ್ನು ನೆನಪಿಸುವಂತೆ ಇಲ್ಲಿನ ಅನುಕರಣ ಪದಗಳು ಬಳಕೆಗೊಂಡಿವೆ. ಈ ಕವಿಯು ಎರಡೇ ಎರಡು ಪದ್ಯಗಳನ್ನು ಸಂಸ್ಕೃತದಲ್ಲಿ ಈ ಶಾಸನದಲ್ಲಿ ರಚಿಸಿದ್ದಾನೆ. ಹಾಗಾಗಿ ಈತ ಸಂಸ್ಕೃತದಲ್ಲಿಯೂ ಕಾವ್ಯ ರಚನಾ ಸಾಮರ್ಥ್ಯ ಬಲ್ಲಿದವನಾಗಿದ್ದನು ಎಂಬುದು ವಿದಿತವಾಗುವುದು.

**ಹಂಸದೇವ (ಕ್ರಿ.ಶ.ಸು ೧೧೬೧)**

ತುಮಕೂರು ಜಿಲ್ಲೆಯ, ಚಿಕ್ಕನಾಯಕನಹಳ್ಳಿ ತಾಲೂಕ ಎಳನಾಡು ಹೋಬಳಿ ಸೀಗೆಬಾಗಿ ಗ್ರಾಮದ ಈಶ್ವರ ದೇವಾಲಯದಲ್ಲಿರುವ ಶಾಸನದ[೬೦] ಕರ್ತೃ ಈತ ೩೬ ಸಾಲುಗಳುಳ್ಳ ಈ ಶಾಸನವು ಹೊಯ್ಸಳರ ನರಸಿಂಹನ ಕಾಲದಲ್ಲಿ ರಚಿತವಾಗಿದೆ. ಶಾಸನದ ಕಾಲವನ್ನು ಕ್ರಿ.ಶ.ಸು. ೧೧೬೧ ಎಂದು ಕವಿ ಚರಿತೆಕಾರರು ಕೊಟ್ಟಿದ್ದಾರೆ. ಕ್ರಿ.ಶ. ೧೨೨೧ ಎಂದು ಮೇವುಂಡಿಯವರು ನಮೂದಿಸಿದ್ದಾರೆ, ಶಾಸನದಲ್ಲಿ ಶಕವರ್ಷ ಹೇಳದೆ, ಕೇವಲ ವಿಷು ಸಂವತ್ಸರ, ಚೈತ್ರ ಶುದ್ಧ, ೫ ಎಂದು ನಮೂದಿಸಿರುವುದೇ ಇದಕ್ಕೆ ಕಾರಣವಾಗಿದೆ. ಆದರೆ ಈ ಶಾಸನದಲ್ಲಿ ಹೊಯ್ಸಳ ನರಸಿಂಹನನ್ನು ಸಾಮಂತಾಧಿಪತಿ ಎಂದು ಭಾವಿಸಿರುವಂತೆ ಕಾಣುವುದರಿಂದಲೂ, ಇದರಲ್ಲಿ ಕಲ್ಯಾಣ ಚಾಲುಕ್ಯರ ನೇರ ಪ್ರಸ್ತಾಪವಿರುವುದರಿಂದಲೂ ಈ ನರಸಿಂಹನನ್ನು ಮೊದಲನೆಯ ನರಸಿಂಹ ಎಂದು ತಿಳಿಯುವುದು ಉಚಿತವೆನಿಸುತ್ತದೆ. ಆತನ ಆಳ್ವಿಕೆಯಲ್ಲಿ ವಿಷು ಸಂವತ್ಸರ ೧೧೬೧ ರಲ್ಲಿ ಬರುತ್ತದೆ. ಎರಡನೇ ನರಸಿಂಹನ ಕಾಲದ ವೇಳೆಗೆ ಕಲ್ಯಾಣದ ಚಾಲುಕ್ಯರ ಆಳ್ವಿಕೆ ಮುಗಿದು, ಅವರ ಹೆಸರು ಕೇಳಿಬರುತ್ತಿರಲಿಲ್ಲ, ಅಲ್ಲದೆ ಆತ ಸಾಮಂತಾಧಿಪತಿಯಾಗಿ ಇರಲಿಲ್ಲ. ಆದ್ದರಿಂದ ಆರ್. ನರಸಿಂಹಾಚಾರ್ಯರ ಕಾಲಸೂಚನೆಯನ್ನು ಅಂಗೀಕರಿಸಬಹುದು. ಸ್ತುತಿ ಪದ್ಯ ಹಾಗೂ ೪ ಕಂದಪದ್ಯಗಳನ್ನುಳಿದು ಉಳಿದ ಶಾಸನ ಭಾಗ ಗದ್ಯದಲ್ಲಿಯೇ ಇದೆ. "ಈ ಶಾಸನಮಂ ಹೇಳಿದ ಕವಿ ಹಂಸದೇವ" ಎಂಬ ಕವಿನಾಮ ನಿರ್ದೇಶನ ವಾಕ್ಯವನ್ನುಳಿದು ಕವಿಗೆ ಸಂಬಂಧಿಸಿದ ಯಾವ ವಿಷಯವೂ ಇಲ್ಲಿ ಉಕ್ತವಾಗಿಲ್ಲ. ಶಾಸನವು ಭಾಷಾ ಸ್ಖಾಲಿತ್ಯಗಳಿಂದ ಕೂಡಿದೆ.

ನರಸಿಂಹನ ಸಾಮಂತನಾದ ಚಟ್ಟರಸ ದಣ್ಣಾಯಕನು ಚಟ್ಟೇಶ್ವರ ದೇವರನ್ನು ಪ್ರತಿಷ್ಠಿಸಿ ದತ್ತಿ ಬಿಟ್ಟ ಭೂಮಿಯನ್ನು ಭೀಮರಾಸಿ ಗುರುಗಳಿಗೆ ಒಪ್ಪಿಸಿದ ವಿಷಯವನ್ನು ಮತ್ತು ಬಾಲೆಗೌಡನ

ಮಗ ಬೀಚಗೌಡನು ಪರಿವಾರ ದೇವರನ್ನು ಪ್ರತಿಷ್ಠಿಸಿ ದತ್ತಿ ಬಿಟ್ಟ ವಿಷಯವನ್ನು ಶಾಸನದಲ್ಲಿ ಉಲ್ಲೇಖಿಸಿದೆ.

**ಶಾಂತಲೇಶ್ವರನ ಸ್ತುತಿ ಪದ್ಯ:**

**ಅನುದಿನವುತ್ತರೋತ್ತರ ಶುಭೋದಯಮಂ ಪಡೆದೀಗ ರಾಗದಿಂ**
**ಬೆನಕನುದಾರವಾವಗಮನೇಕ ಸುರೆಂದ್ರ ನರೇಂದ್ರ ರುಂದ್ರಕಾಂ**
**ಚನ ಮಕುಟಾಳಿಯಾ ರಣರಣತ್ಕೃತಿ ಘೂರ್ಣಿ ನೂತ್ನರತ್ನರ**
**ಶ್ಮಿ ನಿವೃತ ಪಾದಪೀಠ ನಿಕಟಂ ತ್ರಿಜಗದ್ಗುರು ಶಾಂತಲೇಶ್ವರಂ ॥**

ಚಟ್ಟರಸ ದಂಡೇಶನಿಗೆ ಸಂಬಂಧಿಸಿದ ಪದ್ಯ:

**ಚಟ್ಟರಸಂಗಂ ನೆಗಳ್ದ**
**ಚಟ್ಟರಸಗಮಧಿಕಬಳರ್ ಗೋತ್ರಪವಿತ್ರರ್**
**ಸೃಷ್ಟಿಯೊಳ್ ನೆಗಳ್ದ ಪುರುಷರ್**
**ನೆಟ್ಟನೆ ಶ್ರೀಮಾಚಬೆನವ ಮಹದೇವರಸರ್ ॥**

**ನಾಗಾರ್ಜುನ (ಕ್ರಿ.ಶ.೧೧೬೧)**

ಧಾರವಾಡ ಜಿಲ್ಲೆಯ, ಶಿರಹಟ್ಟಿ ತಾಲೂಕಿನ, ಲಕ್ಷ್ಮೇಶ್ವರದಲ್ಲಿರುವ ಶಿಲಾಶಾಸನದ ಕೊನೆಯಲ್ಲಿ 'ನಾಗಾರ್ಜುನನ ಕವಿತ್ವಂ' ಎಂಬ ನಾಮ ನಿರ್ದೇಶನವಿದೆ.[೬೧] ಈತ ಕಳಚೂರಿ ಬಿಜ್ಜಳನ ಕಾಲದವನು ಈ ಶಾಸನವು ೩೮ ಸಾಲುಗಳನ್ನು ಒಳಗೊಂಡಿದೆ. ಇದರಲ್ಲಿ ಕಲ್ಯಾಣದ ಚಾಲುಕ್ಯ ಮುಮ್ಮಡಿ ತೈಲಪನ ವಂಶಾವಳಿ, ಕಲಚುರಿರಾಜ ಬಿಜ್ಜಳ ಪ್ರಶಸ್ತಿಯನ್ನೊಳಗೊಂಡ ಈ ಶಾಸನದ ಪ್ರಕಾರ ನಾಲ್ವರು ಕರಣರು ಆಳುತ್ತಿರುವಾಗ ರಾಮೈದೇವಾಲಯದ ಆಚಾರ್ಯರಾದ ದೇವರಾಶಿ ಪಂಡಿತರು, ರಟ್ಟಗವುಂಡರಿಂದ, ಬೆಳುವನ ಗ್ರಾಮವನ್ನು ಕೊಂಡುಕೊಂಡು ಅದನ್ನು ಮುತ್ತಿನ ಕೆಯ್ಯ ಇಂದ್ರೇಶ್ವರ ದೇವತಾರಾಧನೆಗಾಗಿ ದತ್ತಿ ಬಿಟ್ಟರೆಂದು ತಿಳಿದುಬರುತ್ತದೆ.

ನಾಗಾರ್ಜುನನ ಕವಿತ್ವ ಶಕ್ತಿಗೆ ಪ್ರತೀಕವಾಗಿರುವ ಎರಡು ಪದ್ಯಗಳನ್ನು ಉದಾಹರಿಸಬಹುದು.

**ಬಿಜ್ಜಳ ನೃಪನ ಶೌರ್ಯ ವರ್ಣನೆ**

**ಮಸಕಂಗೊಂಡೋಪನಾವಂ ಜಗದೊಳನಿತುಮಂ ಗುರ್ಜರೋರ್ವೀಶನಂ ತ**
**ರ್ಜಿಸಿದಂ ಕಾಳಿಂಗನಂ ಭಂಗಿಸಿದನತಿಬಳೋದ್ಧೃಪ್ತನಪ್ಪಂಧ್ರನಂ ಬಂ**
**ಧಿಸಿದಂ ಪಾಂಡ್ಯೇಶನಂ ಖಂಡಿಸಿದನದಟನಿಂ ಚೋಳಭೂಪಾಳನಂ ರೋ**
**ಳಿಸಿದಂ ಸಾಮಾನ್ಯನೇ ಬಿಜ್ಜಳನೃಪತಿಲಕಂ ಶೌರ್ಯಕಂಠೀರವೇಂದ್ರಂ ॥**

**ಕಳಚುರಿಯ ಕುಳಾಧಿಪ ರಾ**
**ಜ್ಯಲತೈಕಾಲಂಬರೆನಿಸಿ ರಾಜಾಧ್ಯಕ್ಷರ್**
**ಸಲೆ ನೆಗಳ್ದಿರ್ದ್ದಿರ್ಸಜ್ಜನ**
**ಕುಲಚೂಡಾಮಣಿಗಳರ್ಥಿಚಿಂತಾಮಣಿಗಳ್॥**

**ಗಣಪದ ಪಯೋಲಭೃಂಗಂ**
**ಗಣಚರಣಸರೋಜವರರಜಸ್ಸಂಜನಿತಂ**
**ಗಣಪದಶೇಖರನನುಪಮ**
**ಗಣಪುತ್ರಂ ಭಾಯಿದೇವನೆಸೆದಂ ಧರೆಯೊಳ್ ॥**

**ಸಿಂಗಣ (ಕ್ರಿ.ಶ.೧೧೬೪)**

ಶಿವಮೊಗ್ಗ ಜಿಲ್ಲೆಯ, ಸಾಗರ ತಾಲೂಕಿನ, ಬೈರಾಪುರದ[೬೨] ಒಂದು ವೀರಗಲ್ಲಿನಲ್ಲಿ 'ಸೇನಬೋವ ಸಿಂಗಣನ ಕಬ್ಬ' ಎಂದಿರುವುದರಿಂದ ಈ ಶಾಸನವನ್ನು ಸಿಂಗಣ ಎಂಬ ಕವಿಯು ರಚಿಸಿದನೆಂದು ತಿಳಿಯಬಹುದು. 'ಸೇನಬೋವ' ಎಂಬ ವಿಶೇಷಣವನ್ನು ನೋಡಿದರೆ ಈತ ಸೇನಬೋವವೃತ್ತಿಯಲ್ಲಿದ್ದ ಬಗ್ಗೆ ತಿಳಿಯಬಹುದು. ಈ ಶಾಸನದಲ್ಲಿ ಬಳಸಿದ ವೃತ್ತ ಮತ್ತು ಕಂದ ಪದ್ಯಗಳಿಂದ ಇವನು ಉತ್ತಮ ಕವಿಯಾಗಿದ್ದ ಎಂಬುದನ್ನು ಶ್ರುತಪಡಿಸುತ್ತದೆ.

ಶಾಸನೋಕ್ತ ಘಟನೆ ಜರುಗಿದ ಕಾಲ ಪರಿಗಣನೆ ಹೀಗಿದೆ. ೧೮ನೇ ವೀರ ಶಾಂತರದೇವ ವರ್ಷದ ತಾರಣ ಸಂವತ್ಸರದ ವೈಶಾಖ ಶುದ್ಧ ೫ ಬೃಹಸ್ಪತಿವಾರ (ಶ್ರೀಮತ)ವೀರ ಸಾಂತರದೇವರ ವರುಷದ ೧೯ನೇ ತಾರಣ ಸಂವತ್ಸರದ ವೈಶಾಖ ಶುದ್ಧ ೫ (ಬ್ರಿಹವಾರದಂದು) ಆಗ ಬಿಜ್ಜಳ ಮಹಾರಾಜನು ಆಳುತ್ತಿದ್ದನೆಂದೂ ಹೇಳಿರುವುದರಿಂದ ಇದರ ಕಾಲ ೧೧೬೪ ಎಂದೂ ತಿಳಿಯಬಹುದು. ಹಾಗಾಗಿ ಇದೇ ಕವಿಯ ಕಾಲಘಟ್ಟವೆನ್ನಬಹುದು.

ಈ ಶಾಸನದಲ್ಲಿ ನೆಲ್ಲಿವಾಡಿಯ ಹಳೆಯಮ್ಮನೆಂಬ ವೀರನು ಆಳ್ವರಸ ಜಗದೇವರಸನೊಡನೆ ಕಾದು ಸುರಲೋಕಪ್ರಾಪ್ತನಾದ ವಿಷಯವನ್ನು ಬಣ್ಣಿಸಿದೆ. ಅಲ್ಲದೆ ಹೊಸಗುಂದದ ಬೀರರಸ ಮತ್ತು ವೀರಶಾಂತರದೇವರು ಹೋರಾಡಿದ್ದನ್ನು ತಿಳಿಸುತ್ತದೆ. ಆಗ ಹಿರಿಯ ದಂಡನಾಯಕ ಅರಳಯ್ಯ ಬನವಾಸಿ ಪನ್ನಿರ್ಚ್ಛಾಸಿರದ ಪಡಲಯ್ಯ ಮತ್ತು ಹುಂಚದ ಸಿಂಗದೇವರು ಯುದ್ಧದಲ್ಲಿ ಪಾಲ್ಗೊಂಡಿದ್ದರೆಂದೂ ತಿಳಿದುಬರುತ್ತದೆ. ಈ ಶಾಸನದ ಬಹುಭಾಗ ಗದ್ಯದಲ್ಲಿದೆ. ಸೇನಬೋವ ಸಿಂಗಣನ ಕಾವ್ಯಶಕ್ತಿಯು ಈ ಎರಡು ಶಾಸನ ಪದ್ಯಗಳಿಂದ ತಿಳಿದುಬರುತ್ತದೆ.

**ವೀರ ಹಳೆಯಮ್ಮನ ಶೌರ್ಯದ ಬಣ್ಣನೆ :**

> **ಗಂಡರ ಗಂಡ ಗುಣಿಯೆಂದು ಮನುಷ್ಯವರೇಣ್ಯನೆಂದು ಭೂ**
> **ಮಂಡಲಸೇಭ್ಯನೆಂದು ಕಲಿಯೆಂದು ಬುಧವ್ರಜವಕ್ತ್ರಪದ್ಮಿನೀ**
> **ಚಂಡಮರೀಚಿದೆಯೆಂದು ಧರೆ ಬಣ್ಣಿಸುತ್ತಿರ್ಪುದು ಕೂರ್ತು**
> **ಗೊಂಡು ಹಳೆಯಮ ಸೆಟ್ಟಿಯನಾಡಿನೊ.... ನರಾತಿ ಭಯಂಕರ ಬಾಹುದಂಡನಂ ॥**

> **ಚತುರಾಶ್ರಯ ಕಮಳಾಲಯ**
> **ನತಿಶಯ.... ದೊಲವಿಂ ವಾ**
> **ಕ್ಷತಿ ಪರಸಿ ಹಳೆಯಮ ಸೆಟ್ಟಿಯ**
> **ಕುತುಕಮದೆಂದು ವರದೊಳ್ ನಿಲಿಪ್ಪಳ್ ॥**

**ಮಹಾದೇವ (ಕ್ರಿ.ಶ.೧೧೬೪)**

ಹಾಸನ ಜಿಲ್ಲೆಯ, ಬೇಲೂರು ತಾಲೂಕಿನ, ಬೇಲೂರು ಗ್ರಾಮದ ಶಾಸನವು[೬೩] ದೋರ ಸಮುದ್ರದ ಹೊಯ್ಸಳರ ಕಾಲಾವಧಿಯ ಶಾಸನ 'ಲಕ್ಷ್ಮೀದೇವಿಯ' ಮಗನಾದ ಹೊಯ್ಸಳ 'ಒಂದನೇ ನರಸಿಂಹ' ದೋರಸಮುದ್ರದಿಂದ ಆಳ್ವಿಕೆ ಮಾಡುತ್ತಿದ್ದಾಗ 'ಬಿಟ್ಟಬೋವ' (ಹೊಯ್ಸಳ ಬೋವ ಮತ್ತು ಮಾದಿಕವ್ವೆಯರ ಮಗ) ಹಾಗೂ 'ಒಂದನೇ ನರಸಿಂಹನ' ಅಧೀನ ಅಧಿಕಾರಿಯಾಗಿದ್ದನು. ಇದೇ ಕಾಲಾವಧಿಯಲ್ಲಿ ಬಿಟ್ಟೆಶ್ವರ ದೇವಾಲಯದ ನಿರ್ಮಾಣ ಕಾರ್ಯ ಹಾಗೂ ಭೂದಾನ ನೀಡಿದ ವಿವರಗಳಿವೆ. ಈ ಶಾಸನ ಕವಿಯು ಉಭಯ ಭಾಷಾವಿಶಾರದನಾಗಿದ್ದನು. ಸಂಸ್ಕೃತ ಹಾಗೂ ಕನ್ನಡ ಭಾಷೆಯಲ್ಲಿ ಪ್ರಾವಿಣ್ಯ ಪಡೆದಿದ್ದಾನೆ. ಆರು ಗಾಣಗಳನ್ನು ದೇವರ ನಂದಾದೀವಿಗೆಗೆ ಬಿಟ್ಟ ವಿವರಗಳಿವೆ. ದೇವಾಲಯದ ಉತ್ತರಭಾಗದಲ್ಲಿ ಅಂಗಡಿ ದಾನ ಮಾಡಿದ ವಿವರಗಳಿವೆ.

**ಶಾಸನ ಕವಿಯ ಕಾವ್ಯ ಕೌಶಲಕ್ಕೆ ಉದಾಹರಣೆ:**

> **ಪದದೊಳು ಕೂರ್ಮ್ಮಸ್ವರೂಪಂ ನಯನಯುಗಳದೊಳ್**
> **ಮತ್ಸ್ಯರೂಪಂ ಘನಗ್ರೀವದೊಳಾದಿಕ್ರೋಡರೂಪಂ**
> **ನಡುವಿನೊಳ್ ನೃಸಿಂಹತ್ವವಾತ್ಮ ಪ್ರಭಾವಾಸ್ಪದದೊಳ್**
> **ರಾಮತ್ರಯತ್ವಂ ಮತಿವಿಕಸನದೊಳು ಬುದ್ಧರೂಪಾಗಿ**
> **ಗುಜ್ಜಾಗದ ಕಲ್ಕಿತ್ವಕ್ಕೆ ಮೆಯ್ದೋರದ ಹರಿಯೆನಿಪಂ ವಿಷ್ಣು ಜಿಷ್ಣು ಪ್ರತಾಪಂ ॥**

**ಕಲಿ ವಿಷ್ಣುವರ್ಧನನ ಮಹಿಮೆ:**

> **ಜಳನಿಧಿಯಂ ಕೆಸರ್ಮ್ಮಸೆಗೆ ಕೂಡೆ ಕಲಂಕುವ**
> **ಬಾಡವಾಗ್ನಿಯನ್ತಳದೊಳಗಿರ್ದ್ದಲಾಗಿ ಪೊಸದಿಕ್ಕು ಶೇಷನ**
> **ಕರ್ಣ್ನನಾಳ ಸಂಚಳನದೆ ನಿಂನನಂಜನುಮುಳೆಂದು**
> **ಮುಳಿಪ್ಪ ಪೊಡರ್ಪ್ಪನಾವಗಂ ಮುಳಿದಡೆ ಪೊರಗುಂ**
> **ವಿಜಯವರ್ಧನ ನೀ ಕಲಿ ವಿಷ್ಣುವರ್ಧನಂ ॥**

**ಶಾಂತಿನಾಥ (ಕ್ರಿ.ಶ.೧೧೬೪)**

ಮಂಡ್ಯ ಜಿಲ್ಲೆಯ, ನಾಗಮಂಗಲ ತಾಲೂಕಿನ, ಲಾಲನಕೆರೆ ಗ್ರಾಮದ ಮಾದೇಶ್ವರ ಗುಡಿಯ ಮುಂದಿರುವ ಶಿಲಾ ಶಾಸನದಲ್ಲಿ[೬೪] ಕಂಡುಬರುವ ಶಾಂತಿನಾಥನನ್ನು ಶಾಸನ ಹೀಗೆ ಬಣ್ಣಿಸಿದೆ.

**ದಕ್ಷಿಣ ಹೆಮ್ಮನ ಮಮ್ಮಂ**
**ಲಕ್ಷಣಕವಿ ಶಾಂತಿನಾಥ ಕವಿಕುಳತಿಳಕಂ**
**ದಾಕ್ಷಿಣ್ಯನಿಧಿ ಗುಣೋತ್ತರ**
**ಶಿಕ್ಷಾಗುರು ಪೇೞ್ದನಟ್ಟೆಯಿಂ ಶಾಸನಮಂ ॥**

'ಲಕ್ಷಣಕವಿ' ಎನಿಸಿದ ಈ ಶಾಂತಿನಾಥ ಕವಿ ದಕ್ಷಿಣ ಹೆಮ್ಮನ ನೊಮ್ಮಗನಾಗಿದ್ದು, ಒಬ್ಬ ಉಪಾಧ್ಯಾಯನಾಗಿರಬೇಕು. 'ಸುಕುಮಾರಚರಿತೆ'ಯ ಶಾಂತಿನಾಥ ಕವಿಗೂ ಈ ಶಾಸನದ ಕವಿಗೂ ಯಾವ ಸಂಬಂಧವಿಲ್ಲ[೬೫] ಏಕೆಂದರೆ 'ಸುಕುಮಾರಚರಿತೆ' ಕವಿಯ ಕಾಲ ೧೦೭೦ ಹಾಗೂ ಭುವನೈಕಮಲ್ಲನ ಕಾಲದಲ್ಲಿದ್ದನು ಈ ಶಾಸನಕವಿಯ ಕಾಲ ೧೧೬೪. ಈ ಶಾಸನವು ಹೊಯ್ಸಳರ ವೀರಬಲ್ಲಾಳನ ಕಾಲದ್ದು. ಇದರಲ್ಲಿ ಹೊಯ್ಸಳ ವಂಶಾವಳಿ, ಆ ಕಾಲದಲ್ಲಿದ್ದ ಪ್ರಧಾನ ಹೆಗ್ಗಡೆ ಕಂಟಿಮಯ್ಯ, ಚೊಕ್ಕಣ್ಣ, ದಂಡನಾಯಕ ಹರಿಯಣ್ಣನವರೆಲ್ಲರೂ ಸಮಸ್ತ ಪ್ರಜೆಗಾವುಂಡಗಳೂ ಸೇರಿ ಲಾಲನಕೆರೆ ಮಧುಕೇಶ್ವರದೇವರ ಸೇವಾರ್ಥ ದಾನ ದತ್ತಿಗಳನ್ನು ನೀಡಿದ್ದನ್ನು ವಿವರಿಸಲಾಗಿದೆ.

ಹಾಸನ ಜಿಲ್ಲೆಯ ಅರಸಿಕೆರೆಯ ಸಹಸ್ರಕೂಟ ಜಿನಾಲಯದ ಬಲಬದಿಯಲ್ಲಿರುವ ಶಾಸನದಲ್ಲೂ[೬೬] ಶಾಂತಿನಾಥನ ಸ್ತುತಿಯಿದೆ. ಅತ್ಯಂತ ಸ್ಪಷ್ಟವಾಗಿರುವ ಈ ಶಾಸನ ಐತಿಹಾಸಿಕ, ಧಾರ್ಮಿಕ, ಸಾಹಿತ್ಯಿಕ, ದೃಷ್ಟಿಯಿಂದ ಬಹುಮುಖ್ಯವಾಗಿರುವ ಈ ಕನ್ನಡ ಶಾಸನದಲ್ಲಿ ಕವಿಯ ಬಗೆಗೆ ಮೇಲಿನ ಪದ್ಯವೇ ಸ್ವಲ್ಪ ಪಾಠಭೇದದೊಂದಿಗೆ ಇದೆ.

ಅರಸಿಕೆರೆ ಗ್ರಾಮದ ಕಣಿಕಟ್ಟೆ ಗ್ರಾಮದ ಸಂತೆ ಗಣಪತಿಯ ಪಾಳಗುಡಿಯ ಬಳಿಯಿರುವ ೭೮ ಸಾಲುಗಳ ಶಿಲಾಶಾಸನದಲ್ಲೂ[೬೭] ಈ ಪದ್ಯವಿದೆ. ಇಲ್ಲಿ ಕಂಡುಬರುವ ಪಾಠಭೇದಗಳು ಮೂಲ ಬರಹದಲ್ಲಿಯೇ ಉಂಟೋ ಅಥವಾ, ಅದನ್ನು ಓದುವುದರಲ್ಲಿ ಉಂಟಾಗಿವೆಯೋ ಹೇಳುವುದು ಕಷ್ಟ. ಅಂತೆಯೇ ಶಾಂತಿನಾಥನ ಅಜ್ಜ ಹೆಮ್ಮನೋ ಸೋಮನೋ ನಿರ್ಧರಿಸುವುದು ಸಧ್ಯಕ್ಕೆ ಕಷ್ಟ. ಎಂ.ಎಂ. ಕಲಬುರ್ಗಿಯವರ ಪ್ರಕಾರ ಹಾಸನ ಜಿಲ್ಲೆ ಅರಸಿಕೆರೆ ತಾಲೂಕಿನ

ಹಲ್ಲೂರು (೧೧೭೭) ಬೆಳಗುಂಬ (೧೧೯೫) ಹಾಗೂ ಹಿರಿಯೂರು (೧೨೦೬) ಶಾಶನಗಳಲ್ಲಿಯೂ ಕವಿ ಶಾಂತಿನಾಥನ ಲಾಲನಕೆರೆ ಹಾಗೂ ಅರಸಿಕೆರೆ ಶಾಸನಗಳಲ್ಲಿ ಕಂಡುಬರುವ ಈ ಕೆಳಗಿನ ಪದ್ಯ ಪುನಃ ಕಾಣಿಸಿಕೊಂಡಿದೆ.[೬೮]

**ಇದಿರಾದರಿಭೂಪಾಳರ**
**ಮದದಾನೆಯ ಕೊಂಬನುಡಿದು ದಂತದ ಬಳೆಯಂ**
**ಬಿದುವಿನ ಮುತ್ತಿನ ಹಾರಮ**
**ನೊದವಿಸಿ ಜಯಸಿರಿಗೆ ತುಡಿಸುವಂ ನರಸಿಂಹಂ ॥**

ಅಂತೆಯೇ ಈ ಶಾಸನಗಳನ್ನೂ ಶಾಂತಿನಾಥನೇ ಬರೆದಿರಬಹುದು, ಇದು ನಿಜವಾದಲ್ಲಿ ಶಾಸನ ಕವಿ ಶಾಂತಿನಾಥನು ಸುಧೀರ್ಘವಾದ ಒಟ್ಟು ೬ ಶಾಸನಗಳನ್ನು ಬರೆದನೆನ್ನಬೇಕಾಗುತ್ತದೆ.[೬೯] ಇದರಿಂದ ಶಾಂತಿನಾಥ ಒಬ್ಬ ಪ್ರೌಢಕವಿ ಎಂಬುದು ಕೆಲವು ಶಾಸನ ಪದ್ಯಗಳಿಂದ ವೇದ್ಯವಾಯಿತು.

**ಅರಸಿಕೆರೆ ಶಾಸನದಲ್ಲಿ (೧೧೬೮) ಹೊಯ್ಸಳ ನರಸಿಂಹನ ಶೌರ್ಯ ಹೀಗೆ ವರ್ಣಿತವಾಗಿದೆ:**

**ಮಾರಿಯ ಮೂರಿ ಮೃತ್ಯುವಿನ ನಾಲಗೆ ನಂಜಿನ ಪುಂಜ ಭೈರವಾ**
**ಕಾರದ ಕಾಯ್ಪು ಬಂದೆರಗಿ ಹೊಯ್ದ ಸಿಡಿಲ್ ಸಿಡಿಲೇಳ್ಗೆ ಕಾದಿ ಕೈ**
**ವಾರದೆ ಬಂದು ರಕ್ಕಸನೊಳಳ್ಕುಱದಾಂತು ಬರ್ದುಂಕುವನ್ನರಾ**
**ವೀರಮೆ ಮೂರ್ತಿಗೊಂಡ ನರನಾಥನೊಳೀ ನರಸಿಂಹ ಭೂಪನೊಳ್ ॥**

ಅದೇ ಸ್ಥಳದ ೧೧೮೯ರ ಶಾಸನದಲ್ಲಿ ವೀರಬಲ್ಲಾಳನ ಹಿರಿಮೆಯ ಬಣ್ಣನೆ

**ಕಲಿಕಾಲಕ್ಷತ್ರಪುತ್ರಪ್ರಬಳತರದುರಾಚಾರ ಸಂದೋಹದಿಂದಂ**
**ಹೊಲೆ ಹೊದ್ದಲ್ ಹೇಸಿ ಬೇಸತ್ತಳವಟಿದ ಮಹಿಕಾಂತೆಯಂ ರಕ್ಷಿಸಲ್ಕಾ**
**ಜಲಜಾಕ್ಷಂ ತಾನೆ ಬಂದಂತವತರಿಸಿದವೋಲ್ ವೀರಬಲ್ಲಾಳಭೂಪಂ**
**ಕುಲಜಾತ್ಯಾಧಾರ.....ನೃಪವರನುದಯಂ ಗೆಯ್ದನಾಶ್ಚರ್ಯಶೌರ್ಯಂ ॥**

**ಸೋಮೇಶ್ವರ (ಕ್ರಿ.ಶ.೧೧೬೯)**

ಆಂಧ್ರಪ್ರದೇಶದ, ಅನಂತಪುರ ಜಿಲ್ಲೆಯ, ರಾಯದುರ್ಗ ತಾಲೂಕಿನ ಗೋವಿಂದವಾಡ ಗ್ರಾಮದ ಶಾಸನವನ್ನು[೭೦] ಶಾಸನಕವಿ ಸೋಮೇಶ್ವರನು ಬರೆದಿದ್ದಾನೆ. ಇದರ ಕಾಲ ಕ್ರಿ.ಶ.೧೧೬೯ ಇದು ಚಾಲುಕ್ಯ ದೊರೆ ತ್ರಿಭುವನಮಲ್ಲದೇವ ಹಾಗೂ ಅವನ ಮಹಾಮಂಡಳೇಶ್ವರ ತ್ರಿಭುವನಮಲ್ಲದೇವ ಚೋಳ ಮಹಾರಾಜ (ಇವನು ಗೋವಿಂದರಸನ ಮೊಮ್ಮಗ ಇರುಂಗೋಳಚೋಳ ಮಹಾರಾಜರ ಮಗ) ಆಳ್ವಿಕೆಯ ಕಾಲದ ಶಾಸನ. ಗೋವಿಂದವಾಡಿಯಿಂದ

ಆಳುತ್ತಿದ್ದ ಈ ಮಲ್ಲಿದೇವ ಚೋಳನು, ತನ್ನ ತಂದೆ ಕಟ್ಟಿಸಿದ ನೀಲಕಂಠೇಶ್ವರ ದೇವರ ಸೇವೆಗೆ, 'ಸಂತರಣಿ' ಎಂಬ ಗ್ರಾಮವನ್ನು, ಭೂಮಿಯನ್ನು ದತ್ತಿಯಾಗಿ ನೀಡಿ, ಕೆಲವು ವಸ್ತುಗಳ ಮೇಲಿನ ಸುಂಕವನ್ನು ಬಿಟ್ಟಿದ್ದನ್ನು ದಾಖಲಿಸಿದೆ.

**ಶಾಸನದ ಕೆಲ ಪ್ರಶಸ್ತಿ ಭಾಗವನ್ನು ಹೀಗೆ ನೋಡಬಹುದು:**

**"ವಿಜ್ಞಾನ ಭೂಮಿರುದಿಯಾಯ ದಯಾನಿಧಾನಂ । ಬಾಳೇಂದು ಮೌಳಿಪದ ಪಂಕಜ ರೇಣುಶೋಣ । ಲಲಾಟಪಟ್ಟ ವಿಭವಃ ಖಳು ಮಲ್ಲದೇವಃ ॥ ಸ್ವಸ್ತಿ ಸಮಧಿಗತ ಪಂಚ-ಮಹಾಶಬ್ದ ಮಹಾಮಂಡಲೇಶ್ವರ । ನುಱಿಯೂರ್ಪ್ಪುರವರಾಧೀಶ್ವರ ಚತುರುದಧಿಪರಿವ್ರತ ಮಹೀಮಂಡಲ ಮಾಂಡಲಿಕ ಕ್ಷತ್ರಧರ್ಮ ಪ್ರತಿಪಾಲನ ಮನುಸ್ವಭಾವ । ಬಂಟರಬಾವ ಮದವದರಿಮಾಂಡಲಿಕ ಹ್ರಿದಯಸೆಲ್ಲ ನಿಗಳಂಕಮಲ್ಲ.....ನಾಮಾದಿ ಸಮಸ್ತ ಪ್ರಶಸ್ತಿಸಹಿತಂ ಶ್ರೀಮನ್ಮಹಾಮಂಡಳೇಶ್ವರಂ ತ್ರಿಭುವನಮಲ್ಲ ಮಲ್ಲಿದೇವ ಚೋಳಮಹಾರಾಜರು ಗೋವಿಂದವಾಡಿಯಪುರ ನೇಲೆವಿಡಿನಿಂದ"** ರಾಜ್ಯವಾಳುತ್ತಿದ್ದ ಬಗ್ಗೆ ಹೇಳಿದೆ.

ಶಾಸನದ ಕೊನೆಯಲ್ಲಿ ಶಾಸನಕವಿಯ ಪ್ರಸ್ತಾಪವಿದೆ :

ಇನ್ತೀ ಸಾಸನಮಂ ಸೋಮೇಶ್ವರಂ ಬರೆದಂ ಮಂಗಳ ಮಹಾಶ್ರೀ ॥ ಎಂದಿದೆ.

**ಸಜ್ಜನತಿಲಕ (ಕ್ರಿ.ಶ.೧೧೭೦)**

ಕೊಪ್ಪಳ ಜಿಲ್ಲೆಯ, ಯಲಬುರ್ಗಾ ತಾಲೂಕಿನ, ಕುಕನೂರು ಗ್ರಾಮದ ಶಾಸನವನ್ನು[೭೧] ಶಾಸನಕವಿ ಸಜ್ಜನತಿಲಕ ಎಂಬುವವನು ಬರೆದಿದ್ದಾನೆ. ಶಾಸನವು ಆರಂಭದಲ್ಲಿ ಕಳಚುರ್ಯ ರಾಜರ ವಂಶಾವಳಿಯನ್ನು ಕನ್ನಮನಿಂದ ಸೋವಿದೇವನವರೆಗೆ ನೀಡಿದ್ದು, ಈ ಸೋವಿದೇವನು ಮೋದನುರಿನಲ್ಲಿದ್ದಾಗ ಅವನ ದಂಡಾಧೀಶನಾಗಿ ತೇಜಿರಾಜನಿರುತ್ತಾನೆ. ಇವನು ಅಗಸ್ತ್ಯಗೋತ್ರದವನಾಗಿದ್ದು, ಕಾಳಿಮಯ್ಯನಾಯಕನ ಮೊಮ್ಮಗನೂ, ಬಮ್ಮದೇವನಾಯಕ ಹಾಗೂ ಜಕ್ಕಣ್ಣವ್ವೆಯ ಪುತ್ರನೂ ಆಗಿದ್ದ. ಇವನ ಅಣ್ಣ ಕಾವಣ. ಈ ತೇಜಿರಾಜನನ್ನು ಶಾಸನವು ಹೊಗಳುತ್ತಾ; ಈತನು ಬೆಳ್ವೊಲದ ದಂಡಾಧೀಶನಾಗಿದ್ದಂತೆ ಹೇಳಿದೆ. ಇವರ ಮೂಲಸ್ಥಳ ನಂದವಾಟಿಪುರ ಹಿಂದಿನ ಶಾಸನದಲ್ಲಿ ಹೇಳಿದಂತೆ ಸೋವಿದೇವನ ಅಧಿಕಾರದಲ್ಲಿದ್ದ ಅನೇಕ ಅಧಿಕಾರಿಗಳ ದಂಡನಾಯಕರನ್ನು ಶಾಸನವು ಹೆಸರಿಸುತ್ತದೆ. ಅದರಲ್ಲಿ ಬೊಪ್ಪಣನಾಯಕ,

ಶ್ರೀಕರಣದ ಪಾವಣದೇವ, ಮಹಾದೇವನಾಯಕ, ಕಾಳಿಮಯ್ಯನಾಯಕ, ಮಧುವಯ್ಯ ಬಂಮಿದೇವ ಮುಂತಾದವರು ಹೆಸರಾಗಿದ್ದರು.

ಇವರಲ್ಲಿ ಮೇಲೆ ಹೇಳಿದ ಅಧಿಕಾರಿಗಳಲ್ಲದೆ, ಅನೇಕ ಶ್ರೀಕರಣದ ಅಧಿಕಾರಿಗಳೊಂದಿಗೆ ಬೆಳ್ವೊಲನಾಡಧಿಕಾರಿ ಶ್ರೀಕರಣ ಬಾಹತ್ತರ ನಿಯೋಗಾಧಿಪತಿ, ಮಹಾಪ್ರಚಂಡ ದಂಡನಾಯಕ, ತೇಜರಾಜನು ಕುಕ್ಕನೂರು ಅಗ್ರಹಾರಕ್ಕೆ ಬಂದಾಗ ಸ್ವಯಂಭೂ ಪ್ರಸನ್ನ ಮಲ್ಲಿಕಾರ್ಜುನ ದೇವರಿಗೆ 'ಲಕ್ಷಗಡುಗೆ' ಪೂಜೆ ಮಾಡಿಸಿ ರಾಯ ಮುರಾರಿ ಸೋವಿದೇವನಿಗೆ ಬಿನ್ನಪವನ್ನು ಮಾಡಿಕೊಂಡು 'ಕುಕ್ಕನೂರು-೩೦'ರಲ್ಲಿದ್ದ ಹಾಡಲಗೆರೆಯನ್ನು ದಾನವಾಗಿ ನೀಡುತ್ತಾನೆ. ಮುಂದೆ ಶಾಸನದಲ್ಲಿ ಆ ದಾನ ನೀಡಿದ ಹಾಡಲಗೆರೆಯ ಗಡಿಗಳನ್ನು ವಿವರವಾಗಿ ಹೇಳಿದೆ, ಈ ಊರಿನ ಆದಾಯದಲ್ಲಿ ಒಂದು ಭಾಗ ದೇವರಿಗೆ, ಇನ್ನೊಂದು ಭಾಗ ಅಲ್ಲಿನ ಬ್ರಾಹ್ಮಣರಿಗೆ, ಎಂದು ಹೇಳಿ ದೇವರ ಭಾಗದಲ್ಲಿ ದೇವರ ಅಂಗಭೋಗ, ರಂಗಭೋಗಕ್ಕೆ ವ್ಯಯಿಸಬೇಕೆಂದಿದೆ. ವಸನ್ತಮಾಧವದೇವರಿಗೆ ೧೦ ಮತ್ತರು ನೀಡಿ ಉಳಿದ ಭಾಗವನ್ನು ಊರಿನ ಬ್ರಾಹ್ಮಣ ಕುಟುಂಬಗಳು ಹಂಚಿಕೊಳ್ಳುವುದು ಎಂದಿದೆ.

ಶಾಸನ ಕವಿ ತನ್ನ ಶಾಸನದ ಕೊನೆಯ ಪದ್ಯದಲ್ಲಿ ಸಜ್ಜನ ತಿಲಕ ಎಂದಿರುವ ಆತನ ನಿಜನಾಮವೊ, ಪ್ರಶಸ್ತಿಯೊ, ಚಾರಿತ್ರ್ಯವನ್ನು ಸೂಚಿಸುವ ವಿಶೇಷಣವೋ ಸ್ಪಷ್ಟವಾಗಿಲ್ಲ, ಆದರೆ ಆತ ತನ್ನ ಗೋತ್ರವನ್ನೂ ತಂದೆಯ ಹೆಸರನ್ನು ತಿಳಿಸಿದ್ದಾನೆ. ಅಗಸ್ತ್ಯಗೋತ್ರೋದ್ಭವನೆಂದೂ ಪರಮಾತ್ಮನ ಪುತ್ರನೆಂದೂ ಹೇಳಿಕೊಂಡಿದ್ದಾನೆ.

**ಪಲಬರ್ಪೊಗಳಲಗಸ್ತ್ಯರ**
**ಕುಲತಿಲಕಂ ನೆಗಳ್ದ ಸುಕವಿ ಪರಮಾತ್ಮಸುತಂ**
**ನಲವಿಂ ಪೇಳ್ದಂ ಸಜ್ಜನ**
**ತಿಲಕನೆಲಲ್ ಮೆಚ್ಚನಾವನೀ ಶಾಸನಮಂ ॥**

**ಹಾಡಲಗೆರೆಯ ಜನಸಮೃದ್ಧಿಯನ್ನು ವರ್ಣಿಸುವ ಪದ್ಯ:**

**ಜಲಧಿವೃತೋರ್ವರೆಯೊಳು ಬೆ**
**ಳ್ವಲ ನಾಡೊಳು ಕುಕ್ಕನೂರು ಮೂವತ್ತರೊಳೆ**
**ತ್ತಲುವೊಪ್ಪುವ ಚೆಲ್ವಿಂ ಹಾ**
**ಡಲಗೆಱೆ ಧನಧಾನ್ಯ ಜನಸಮೃದ್ಧಿಯೊಳೆಸೆಗುಂ ॥**

ಈ ಶಾಸನದಲ್ಲಿ ಸಜ್ಜನತಿಲಕನೂ ಕುಕನೂರಿನ ಮಹಾಮಾಯಾ ದೇವಸ್ಥಾನದ ಮುಖಮಂಟಪದಲ್ಲಿರುವ ಶಾಸನದಲ್ಲಿ ಕಾಣುವ ಗೋಮಕವಿಯೂ (೧೧೭೮) ಹಾಗೂ

ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಸಿರಸಂಗಿ ಕಾಳಮ್ಮನ ದೇವಾಲಯದಲ್ಲಿರುವ ಶಾಸನದಲ್ಲಿ ಕಾಣಸಿಗುವ ಸಜ್ಜನತಿಳಕನೂ (೧೧೮೬). ಒಬ್ಬನೇ ಇರಬಹುದೇ ಎಂಬ ಸಂಶಯವನ್ನು ಮೇವುಂಡಿ ಮಲ್ಲಾರಿ ವ್ಯಕ್ತಪಡಿಸಿದ್ದಾರೆ. ಆದರೆ ಯಾವ ವಿಶೇಷಣಾದಿಗಳೂ ಇಲ್ಲದೆ ನಾಮಮಾತ್ರದಿಂದ ಕಾಣಿಸಿಕೊಳ್ಳುವ ಗೋಮಕವಿ (೧೧೭೮) ಒಂದು ಕಾರಣದಿಂದ ಹಿಂದಣ (೧೧೭೦)ರ ಸಜ್ಜನ ತಿಲಕನೂ ಒಂದು ಕಾರಣದಿಂದ ಮುಂದಣ ಸಜ್ಜನತಿಲಕನಿಗೂ (೧೧೮೬) ಸಂಬಂಧ ಹಚ್ಚಿಕೊಂಡು ಮೂರು ಶಾಸನಗಳನ್ನು ಮೂರು ಮುಖಗಳಿಂದ ಹೇಳಿದವನು ತಾನೇ ಆಗಿ ಸಜ್ಜನತಿಲಕ ಗೋಮಕವಿಯಾಗಿ ತೋರುತ್ತಿದ್ದಾನೆ.[೭೨] ಎಂಬ ಮಲ್ಲಾರಿಯವರ ಹೇಳಿಕೆಗೆ ಆಂತರಿಕ ಆಧಾರಗಳು ಇನ್ನೂ ಹೆಚ್ಚಾಗಿಬೇಕು.

**ಸೂರ್ಯಣ (ಕ್ರಿ.ಶ.೧೧೭೦)**

ಹಾಸನ ಜಿಲ್ಲೆಯ ಹಾಸನ ತಾಲೂಕಿನ ದುದ್ದ ಹೋಬಳಿ ಜಕ್ಕೆನಹಳ್ಳಿಯಲ್ಲಿರುವ ಕಲ್ಮೇಶ್ವರ ದೇವಾಲಯದ ಬಳಿಯಿರುವ ಶಿಲಾಶಾಸನದ ಕರ್ತೃ ಸೂರ್ಯಣನೆಂದು ತಿಳಿದುಬರುತ್ತದೆ.[೭೩]

> **"ಸೂರ್ಯಣಂ ಲೇಖಕ ಮದನ ಮಹೇಶ್ವರ ಬರುವರಾಚಾರ್ಯಂ ಸಕವರ್ಷ**
> **ಸಾಸಿರದ ತೊಂಬತ್ತೆರಡನೆಯ ವಿಕೃತ ಸಂವತ್ಸರದ ಬರದ ಶಾಸನ"**

ಎಂದು ಶಾಸನದಲ್ಲಿದೆ.

ಹೊಯ್ಸಳ ವೀರನರಸಿಂಹನ ಕಾಲದ ಈ ಶಾಸನವನ್ನು 1170 ರಂದು ಬರೆಯಲಾಗಿದೆ. ಇದರಲ್ಲಿ ಹೊಯ್ಸಳ ವಂಶಾವಳಿ (ವೀರಪ್ರತಾಪ ನರಸಿಂಹನವರೆಗೆ) ಆತನ ಪ್ರಧಾನ ಹೆಗ್ಗಡೆ ಕಾಳಿಮಯ್ಯನ ವಂಶಾವಳಿ, ಮತ್ತು ಆತನ ಶಾಂತಿಗ್ರಾಮ ಅಗ್ರಹಾರದ ಕೋರವಂಗಲಕ್ಕೆ ಸೇರಿದ ಜಕ್ಕೇನಹಳ್ಳಿಯಲ್ಲಿ ಕಾಳೇಶ್ವರ ದೇವಾಲಯವನ್ನು ನಿರ್ಮಿಸಿ ದಾನ ದತ್ತಿ ಬಿಟ್ಟದ್ದು ಇವುಗಳ ವಿವರಗಳಿವೆ.

ಈ ಶಾಸನದಲ್ಲಿ ಸೂರ್ಯಣನು ತನ್ನನ್ನು ಕವಿಯೆಂದಾಗಲಿ, ಕವಿತ್ವದ ಬಿರುದುಳ್ಳವನೆಂದಾಗಲಿ ಹೇಳಿಕೊಂಡಿರದಿದ್ದರೂ, ಶಾಸನದ ಒಕ್ಕಣೆ, ಆತನ ಕವಿತ್ವ ಶಕ್ತಿಯನ್ನು ಸೂಚಿಸುತ್ತದೆ. ಕನ್ನಡ ಹಾಗೂ ಸಂಸ್ಕೃತ ಪದ್ಯಗಳನ್ನೊಳಗೊಂಡ ಈ ಶಾಸನದಲ್ಲಿ ಕವಿಯ ಕಲ್ಪನಾ ವಿಲಾಸ, ಶಬ್ದಗಳ ಪ್ರಯೋಗೌಚಿತ್ಯ ಮೆಚ್ಚತಕ್ಕದ್ದು. ಉದಾಹರಣೆಗೆ, ವಿಷ್ಣುವರ್ಧನನ ಶೌರ್ಯಸ್ಥೈರ್ಯಗಳ ವರ್ಣನೆಯ ಪದ್ಯವನ್ನು ನೋಡಬಹುದು.:

**‘ಇನನೊರ್ವಂ ಪೊಱಗಾಗಿ ಪೇಳ್ ಪುದುವೆತೇಜಂ ಕ್ಷತ್ರಿಯಂಗರ್ಕನಂ**
**ದನನೊರ್ವಂ ಪೊಱಗಾಗಿ ಪೇೞ್ ಪುದುವೆ ದಾನಂ ಭೂಭುಜಂಗಬ್ಬಗ**
**ರ್ಭನುಮೊರ್ವಂ ಪೋಱಗಾಗಿ ಪೇೞ್ ಪುದುವೆ ಚಾತುರ್ಯ ನೃಪಂಗೆಂದು ಮೆ**
**ಚ್ಚನಿವಂ ಮತ್ತಿನ ಭೂಪರಂ ನೃಪವರಂ ಶ್ರೀರೂಪನಾರಾಯಣಂ’॥**

ಹಾಸನ ಜಿಲ್ಲೆಯ, ಬೇಲೂರು ಚೆನ್ನಕೇಶವ ದೇವಾಲಯದ ತಾಮ್ರ ಶಾಸನ (೧೧೧೭) ಹಳೇಬೀಡು ಹೋಬಳಿ ವೀರದೇವನ ಹಳ್ಳಿಯ ವೀರನಾರಾಯಣ ದೇವಾಲಯದ ಶಿಲಾಶಾಸನ (೧೧೮೭) ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲೂಕು, ಹಿರೇನಲ್ಲೂರು ಹೋಬಳಿ ಆಸಂದಿ ಗ್ರಾಮದ ವೀರಭದ್ರ ದೇವಾಲಯದ ಶಾಸನ (೧೨೦೫) ಇವು ಸೂರ್ಯಣ ಕವಿ ರಚಿತವೆಂದು ತಿಳಿದುಬರುತ್ತದೆ.[೭೪] ಇವುಗಳ ಆಧಾರದಿಂದ ಸೂರ್ಯಣ ಹೊಯ್ಸಳರ ಕಾಲದಲ್ಲಿ ‘ಬರೆವರಾಚಾರ್ಯ’ ‘ಬಿರುದಲೇಖಕ’ ‘ಮದನಮಹೇಶ್ವರ’ ಎಂಬುದಾಗಿ ಬಿರುದಾಂಕಿತನಾಗಿದ್ದ ಒಬ್ಬ ಖ್ಯಾತ ಶಾಸನಕವಿ ಎನ್ನಬಹುದು.

**ಬಿಜ್ಜಯ ನಾಯಕ (೧೧೭೨)**

ಮಹಾರಾಷ್ಟ್ರದ, ಸಾಂಗ್ಲಿ ಜಿಲ್ಲೆಯ, ಮೀರಜ್ ತಾಲೂಕಿನ, ಮಾಡಗಿಹಾಳ ಗ್ರಾಮದ[೭೫] ಶಾಸನವನ್ನು ‘ಬಿಜ್ಜಯ ನಾಯಕ’ ಶಾಸನಕವಿ ರಚಿಸಿದ್ದಾನೆ. ಇದು ಕಲಚುರಿ ದೊರೆ ರಾಯಮುರಾರಿ ಸೋಯಿದೇವನ ಕಾಲಕ್ಕೆ ಸಂಬಂಧಿಸಿದೆ ಈ ಶಾಸನದಲ್ಲಿ ಕಲಚುರಿ ವಂಶದ ವಿಸ್ತಾರವಾದ ವಂಶಾವಳಿಯೂ ಬಂದಿದೆ.

ಸೋಯಿದೇವನ ದಿಗ್ವಿಜಯದ ವರ್ಣನೆ ಇಲ್ಲಿ ದಾಖಲಾಗಿದೆ. ತರಿಕಾಡನಾಡು, ಕುಂತಲದೇಶ, ಮಾಳಿಗೆ (ಇಂದಿನ ಮಾಡಗಿಹಾಳ)ಗಳ ವಿಸ್ತಾರವಾದ ವರ್ಣನೆಯೂ ಬಂದಿದೆ. ಈ ತರಿಕಾಡನಾಡನ್ನು ಬಿಜಯನಾಯಕನು ಆಳುತ್ತಿದ್ದ ಆತ ಕವಿಯೂ ಆಗಿದ್ದ ಆತನಿಗೆ ‘ವರ್ಣಕವಿ’ ‘ಸತ್ಯಸಂಗ್ರಹ’ ‘ಕನ್ನಡಜಾಣ’ ಎಂಬ ಬಿರುದುಗಳಿದ್ದವು. ಬಿಜ್ಜಯನಾಯಕ ಮಾಳಿಗೆಯಲ್ಲಿ ಸೋಮನಾಥ ಹಾಗೂ ಬಿಜ್ಜೇಶ್ವರ ದೇವಾಲಯಗಳನ್ನು ಕಟ್ಟಿಸಿ ದತ್ತಿ ಬಿಟ್ಟ ವಿವರವೂ ಬಂದಿದೆ. ಬಿಲ್ಲಮನ ಅಧಿಕಾರಿ ಮಾಯಿದೇವ ದಂಡನಾಯಕನ ಪ್ರಸ್ತಾಪವೂ ಇಲ್ಲಿ ಬಂದಿದೆ. ಅನೇಕ ವ್ಯಾಪಾರಿಗಳ ಪ್ರಸ್ತಾಪವಿಲ್ಲಿ ಬಂದಿದ್ದು, ಇವರೆಲ್ಲ ದಾನಕಾರ್ಯಗಳಲ್ಲಿ ಪಾಲ್ಗೊಂಡ ಅಂಶವೂ ದಾಖಲಾಗಿದೆ. ಕಲ್ಯಾಣದೇವನ ಸಮ್ಮುಖದಲ್ಲಿ ಈ ದತ್ತಿಗಳನ್ನು ಬಿಡಲಾಗಿದೆ.

ಬಿಜ್ಜಯನಾಯಕನ ವರ್ಣನೆ ಹೀಗಿದೆ

ಕಳಚುರಿ ರಾಜ ರಾಜ್ಯಗೃಹ ದೀಪಕನೆಂಬ ಮಹತ್ವದೇಳ್ಗೆ
ತಂನೊಳೆ ರಿಪುರಾಯದಂಡುಗೆ ಪಡಿಗ್ಗಹನೆಂಬುರು ವೀರದೇಳ್ಗೆ
ತಂನೊಳೆ ಬುಧರೀಯೆ ವರ್ಣಕವಿ ಕನ್ನಡಜಾಣನೆನಿಪ್ಪ ಬಲ್ಮೆ
ತಂನೊಳೆ ನೆಲಸಲ್ಕುದಾತ್ತನೆನೆ ಬಿಜ್ಜಯನಾಯಕನಿರ್ದನುರ್ಬಿಯೊಳು॥

ಬಿಜ್ಜಯನಾಯಕನ ಪತ್ನಿ ಸಾಯಿಯಕ್ಕನ ಹಿರಿಮೆ :

ಆತನ ವಲ್ಲಭೆ ಕಾಂತಾಬ್ರಾತ ಶಿರೋಮಣಿ ಸರೋಜಲೋಚನೆ
ವಸುಧಾ ಮಾತೆಯೆನಿಪ್ಪಳು ವಿದಿತಂ ಮಾತೇಂ ಸಾವಿತ್ರಿದೇವಿ
ಮಹಿಮಾಗುಣದಿಂ ಜನನುತ ಹಂಸಯಾನೆ ವಿಭುಬಿಜ್ಜಯನಾಯಕ
ಚಿತ್ತಭೃಂಗ ಪದ್ಮಿನಿ ಕಳಹಂಸ ಗಾಮಿನಿ ಲತಾಂಗವಿಳಾಸಿನಿ
ಸಾಯಿಯಕ್ಕನೊಳ್ಪಿನ ಕಣಿ ದಾನಶೀಲೆ ಗುಣಶೀಲೆಯಶೋದಿಕೆ
ನಿತ್ಯಪುಣ್ಯಭಾಗಿನಿ ರತಿಗೌರಿ ಸೀತೆಯೆ ನಿಪಂನಟಿದೇವಿ ಧಾರಾತಳಾಗ್ರದೊಳು ॥

ಕವಿರಾಜ (ಕ್ರಿ.ಶ.೧೧೭೩)

ಹಾಸನ ಜಿಲ್ಲೆಯ, ಅರಸಿಕೆರೆ ತಾಲೂಕಿನ, ಅರಸಿಕೆರೆಯ ಗ್ರಾಮದ ಶಾಸನವನ್ನು 'ಕವಿರಾಜ' ಎಂಬುವವನು ಬರೆದಿದ್ದಾನೆ.[೭೬] ಪ್ರಸ್ತುತ ಶಾಸನವು ಹೊಯ್ಸಳರ ವಂಶಾವಳಿಯನ್ನು ಕುರಿತು ಹೇಳುತ್ತದೆ. ಎರಡನೇ ಬಲ್ಲಾಳನವರೆಗಿನ ವಂಶಾವಳಿ ದೊರಕುವುದು. ಹೆಗ್ಗಡೆ, ರಾಜ್ಯಾಧ್ಯಕ್ಷ, ಮಹಾಜನ, ಹರಿಹರ ಆತನ ಅಧೀನ ಅಧಿಕಾರಿಗಳ ಬಗ್ಗೆ ವಿವರಿಸುವುದು ಹಾಗೂ 'ಕೇಶವ ದೇವಾಲಯ' ಕುರಿತು ವರ್ಣನೆಯಿದೆ.

ವೀರಬಲ್ಲಾಳದೇವನ ಪಟ್ಟಬಂಧೋತ್ಸವ ಶುಭ ಮುಹೂರ್ತದಲ್ಲಿ ಬೂದಾನ, ದಿನನಿತ್ಯದ ಸೇವೆಗೆ ದೀಪದಾನ, ಮುಂತಾದವುಗಳನ್ನು ಚೆನ್ನಕೇಶವ ದೇವರಿಗೆ ನೀಡಿದ ವಿವರಗಳಿವೆ. ಜಾಯಗೊಂಡ ಬಲ್ಲಾಳಪುರ ಅರಸಿಕೆರೆಗೆ ಮಹಾಪ್ರಧಾನ ಹರಿಹರನು ನೀಡಿದ ವಿವರಗಳಿವೆ.

ಈ ಶಾಸನದ ಕಾವ್ಯಾತ್ಮಕವಾದ ಕೆಲವು ಸಾಲುಗಳನ್ನು ನೋಡಬಹುದು.:

ಅದನೆತ್ತಂ ವಿಘ್ನಮಂ ಮಾಡುವ ಬಗೆ ಮಿಗೆ ಶಾರ್ದೂಳನಾಕಾರದಿಂ
ಪೊಯ್ವುದುಮಾಗಳ್ ಯೋಗಿ ನೀ ಪೊಯ್ಸಳ ಯೆನೆ ಸುಭಟಂ
ನಿಶ್ಚಳಂ ಬೆತ್ತದಿಂ ಪೊಯ್ವುದುಮಾಯ್ತಾ ಪೊಯ್ಸಳಾಂಕಂ
ಯದು ನೃಪರೊಳೆ ದೇವಿಪ್ರಸಾದೋದ್ಭವ ಶ್ರೀವಿದಿತಂ ಶಾರ್ದೂಳದೊಳ್ಕೂಡಿದ ॥
ಸೆಳೆ ಪಿರಿದುಂ ಚಿಹ್ನಮಂದಿಂದಮಿತ್ತಲ್ ॥

**ಪುಲಿಯುಂಡಿಗೆಯುಂ ಸೆಳೆಯುಂ ಸಲೆ ತಂದೊಳೆಚಿಹ್ನಮಾಗೆ**
**ಯದುವಂಶದೊಳುಜ್ವಳಕೀರ್ತಿಗಳರಿನೃಪಸಂಕುಳಮರ್ದ್ದನಶೌರ್ಯ್ಯಶಾಲಿಗಳ್ಪಲರೆಸೆದರ್॥**
**ವಿನಯೇಂದೊಳುಜ್ವಕೀರ್ತ್ತಿ ಸಜ್ಜನಸುಧಾಂಭೋರಾಶಿಯಂ ಪೆರ್ಚಿಸಲು**
**ಘನಶೌರ್ಯರ್ಕ್ಕಮರೀಚಿ ದುರ್ದ್ದಮರಿಪುಶ್ರೇಣೀತಮಸ್ತೋಮಖಂಡನಮಂ**
**ಮಾಡೆ ವಿನೀತ ವೃತ್ತಿನಿಜಶೌರ್ಯಾಟೋಪದಿಂದಗ್ಗಳಂ ವಿನಯಾದಿತ್ಯನೃಪಾಳ**
**ನೆಂಬೆಸಕದಿಂದಾತಂ ತದಾಮ್ನಾಯದೊಳ್ ॥**

**ಬೂಚಿಮಯ್ಯ (ಕ್ರಿ.ಶ.೧೧೭೩)**

ಹಾಸನ ಜಿಲ್ಲೆ, ಹಾಸನ ತಾಲೂಕಿನ, ಮರ್ಕುಲಿ ಗ್ರಾಮದ[೭೭] ಕೋಟೆಯ ಬಸ್ತಿಗುಡಿಯಲ್ಲಿರುವ ಈ ಶಾಸನವನ್ನು ಬೂಚಿಮಯ್ಯ ಎಂಬ ಕವಿಯು ರಚಿಸಿದ್ದಾನೆ. ಈತನು ಹೊಯ್ಸಳ ವೀರಬಲ್ಲಾಳನ ಸಂಧಿವಿಗ್ರಹಿಯಾಗಿದ್ದನೆಂದು ತಿಳಿಯುತ್ತದೆ. ಇವನ ತಾಯಿ ಸುಗ್ಗವ್ವೆ, ಹೆಂಡತಿ ಶಾಂತಲೆ, ಗುರು ಶ್ರೀಪಾಳ ತ್ರೈವಿದ್ಯ. ಈ ಶಾಸನದಲ್ಲಿ ಈತನನ್ನು 'ಚತುರ್ವಿದ ಪಾಂಡಿತ್ಯ ಪಂಡಿತ' ಎಂದು ಕರೆಯಲಾಗಿದೆ. ಕವಿಚರಿತೆಕಾರರು ಬೂಚಿಮಯ್ಯನನ್ನು 'ಪೊನ್ನನಿಗೆ' ಸಮನಾದ ಪ್ರೌಢಕವಿ ಎಂದು ಹೇಳಿದ್ದಾರೆ.[೭೮]

**ಶಾಂತಿನಾಥ ಪಂಡಿತ (ಕ್ರಿ.ಶ.೧೧೭೩)**

ಹಾಸನ ಜಿಲ್ಲೆಯ, ಅರಸೀಕೆರೆ ತಾಲೂಕಿನ, ಕೆಲ್ಲಂಗೆರೆ ಗ್ರಾಮದ, ಲಕ್ಷ್ಮೀನಾರಾಯಣ ದೇವಾಲಯದ ಉತ್ತರದ ಕಡೆ ಇರುವ ಒಂದನೇ ಶಾಸನವನ್ನು[೭೯] ಚಬ್ಬರಾಜನ ಮಗ ಶಾಂತಿನಾಥ ಪಂಡಿತಕವಿ (ಚಬ್ಬರಾಜನ ಪುತ್ರ ಶಾಂತಿನಾಥಪಂಡಿತರು ಹೇಳಿದ ಶಾಸನ) ರಚಿಸಿದನೆಂದು ತಿಳಿದು ಬರುತ್ತದೆ. ಕವಿಯ ಬಗ್ಗೆ ಇನ್ನಾವುದೇ ಮಾಹಿತಿ ದೊರೆಯುವುದಿಲ್ಲ.

ಹೊಯ್ಸಳರ ನರಸಿಂಹ ಮತ್ತು ವೀರಬಲ್ಲಾಳನನ್ನು ಉಲ್ಲೇಖಿಸುವ ಈ ಶಾಸನದ ಕಾಲ ಕ್ರಿ.ಶ.೧೧೭೩. ಬಹುಭಾಗ ತ್ರುಟಿತವಾದ ಈ ಶಾಸನ ಮಹಾಪ್ರಧಾನಿ ಹೆಗ್ಗಡೆ ಕೇತಣ್ಣನು ಕೆಲಂಗೆರೆಯ ಚನ್ನಕೇಶವ ದೇವಾಲಯಕ್ಕೆ ನೀಡಿದ ದಾನವನ್ನು ವರ್ಣಿಸಲಾಗಿದೆ.

**ದೇವಪಾರ್ಯ (ಕ್ರಿ.ಶ.೧೧೭೩)**

ಹಾಸನ ಜಿಲ್ಲೆಯ, ಅರಸೀಕೆರೆ ತಾಲೂಕಿನ, ಕೆಲ್ಲಂಗೆರೆಯ ಶಾಸನ[೮೦] ಅರಸೀಕೆರೆ ಬಸ್ತಿಗೆ ಪಶ್ಚಿಮದಲ್ಲಿ ಬಿದ್ದಿರುವ ಶಿಲಾಶಾಸನವನ್ನು ದೇವಪಾರ್ಯ ರಚಿಸಿದನೆಂದು ತಿಳಿದುಬರುತ್ತದೆ. ಈ ಶಾಸನದ ಕೊನೆಯಲ್ಲಿರುವ ಒಂದು ಪದ್ಯದಲ್ಲಿ ಈತನನ್ನು ಹೀಗೆ ಬಣ್ಣಿಸಲಾಗಿದೆ.

**ಭುವನನುತ ವಾಜವಂಶೋ**
**ದ್ಭವಕರ ವಿಭು ಸೋಮನಾಥಪುತ್ರಂ ಪೇೞ್ದಂ**
**ಕವಿರಾಜಂ ಕಾಶ್ಯಪಗೋ**
**ತ್ರವರ್ಧನಂ ದೇವಪಾರ್ಯನೀ ಶಾಸನಮಂ ॥**

ಈ ಪದ್ಯದಿಂದ ದೇವಪಾರ್ಯ ಕಾಶ್ಯಪಗೋತ್ರೋದ್ಭವನು, ವಾಜಿವಂಶದವನು ಆಗಿದ್ದು; ಸೋಮನಾಥನ ಮಗ ಎಂದು ತಿಳಿಯುತ್ತದೆ. ಈತ ತನ್ನನ್ನು 'ಕವಿರಾಜ' ಎಂದು ಹೇಳಿಕೊಂಡಿದ್ದಾನೆ. ಪ್ರಸ್ತುತ ಶಾಸನವನ್ನು ಹೊಯ್ಸಳ ವೀರ ಬಲ್ಲಾಳನ ಕಾಲದಲ್ಲಿ ರಚಿಸಲಾಗಿದೆ. ಈ ಶಾಸನದಲ್ಲಿ ಹೊಯ್ಸಳ ವಂಶದ ಮೂಲ, ವಂಶಾವಳಿ (ವೀರ ಬಲ್ಲಾಳನವರೆಗೆ) ಆತನ ಗುಣಾವಳಿ, ಸಿದ್ಧಿಸಾಧನೆಗಳೆಲ್ಲ ಕಂಡುಬರುವುದು. ವೀರಬಲ್ಲಾಳನ ಪ್ರಧಾನನಾದ ಹರಿಹರನು ಅರಸೀಕೆರೆಯಲ್ಲಿ ಕಟ್ಟಿಸಿದ ಕೇಶವ ದೇವಾಲಯಕ್ಕೆ ಬಿಟ್ಟ ದಾನದತ್ತಿಗಳ ವಿವರಗಳನ್ನು ಅದು ಒಳಗೊಂಡಿದೆ.

ಸಮವೃತ್ತ, ಶ್ಲೋಕಗಳಿಂದ ಕೂಡಿದ ೧೦೬ ಸಾಲುಗಳನ್ನು ಹೊಂದಿದ್ದು ಶಬ್ದಸಂಪತ್ತು ಸಂಯೋಜನಾ ಸಾಮರಸ್ಯಗಳು ಮನೋಹರವಾಗಿವೆ. ಇದನ್ನು ಸಮರ್ಥಿಸುವ ಎರಡು ಪದ್ಯಗಳನ್ನು ನೋಡಬಹುದು.

**ಹೊಯ್ಸಳ ವೀರಬಲ್ಲಾಳನ ವರ್ಣನೆ :**

**ಉರಗೇಂದ್ರಂ ಧಾತ್ರಿಯಂ ಧಾರಿಣಿ ಹಿಮಗಿರಿಯಂ ಹಿಮಶೈಳಂ ಕುಭೃಜ್ಜಾ**
**ವರನಂ ಗೌರೀವರಂ ಚಂದ್ರಮನನಮಳಚಂದ್ರ ಕಳಾಸ್ತೋಮಮಂ ನಿ**
**ರ್ಭರದಿಂದಂ ತಾಳ್ದುವಂತಪ್ರತಿಮಯದುಕುಳೋದ್ಭೂತ ಸಾಮ್ರಾಜ್ಯಲಕ್ಷ್ಮೀ**
**ಭರಮಂ ಹೇಳಾಸುಸಾಧ್ಯ ತನಗೆನೆ ತಳೆದಂ ವೀರಬಲ್ಲಾಳ ಭೂಪಂ ॥**

**ಕೇಶವ ದೇವರ ವರ್ಣನೆ:**

**ಶ್ರೀಪಾದಾಂಭುಜಯುಗ್ಮಮತ್ಯಮಲಗಂಗಾಸೂತಿಕಾಗೇಹಮಾ**
**ಯ್ತಾ ಪಂಕೇರುಹಪೀಠನುದ್ಭವಗೃಹಂ ಶ್ರೀನಾಭಿಯಾಯ್ತೂರ್ಜಿತ**
**ಶ್ರೀಪತ್ನೀಪ್ರಥಮಾಸ್ಪದಂ ವಿಪುಳವಕ್ಷಂ ತಾನದಾಯ್ತೆಂದೊಡಿ**
**ನ್ನಾ ಪೂರ್ಣೋನ್ನತ ಕೇಶವ ಪ್ರಭುತೆಯಂ ಬಣ್ಣಿಪನೇವಣ್ಣಿಪಂ॥**

**ಕಾಳಿದಾಸ. (ಕ್ರಿ.ಶ.೧೧೭೪)**

ಅವಿಭಜಿತ ಧಾರವಾಡ ಜಿಲ್ಲೆಯ, ಗದಗ ತಾಲೂಕಿನ, ಚಿಕ್ಕಹಂದಿಗೋಳದಲ್ಲಿರುವ ಶಿಲಾಶಾಸನ[೧೧] ಅನುಪಮಕವಿ ಕಾಳಿದಾಸ (ಹಿಟ್ಟಿನ ಸೇನಬೋವ)ನನ್ನು ಹೆಸರಿಸುತ್ತದೆ. ಇದನ್ನು

ರಾಯಮುರಾರಿ ಸೋವಿದೇವನ ಕಾಲದಲ್ಲಿ ಬರೆಯಲಾಗಿದೆ. ಕಾಲ ನಿರ್ದೇಶನ ೧೧೭೪ ಕ್ಕೆ ಹೊಂದಬಹುದು ಮೂಲಸಂಘದ ದೇವಗಣದ ಬಾಹುಬಲಿಯತೀಶ್ವರರು ಹಂದಿಗೋಳ ಅಗ್ರಹಾರದಲ್ಲಿ 'ಘಟಾಂತಿಕ ಜನಸ್ಥಾನ' ಎಂಬ ಬಸದಿಯನ್ನು ನಿರ್ಮಿಸಿದರೆಂದೂ ಅದಕ್ಕೆ ದಾನದತ್ತಿಗಳನ್ನು ನೀಡಲಾಯಿತೆಂದೂ ತಿಳಿಸುವ ಈ ಶಾಸನದಲ್ಲಿ ಹಂದಿಗೋಳದ ಸುಂದರವಾದ ವರ್ಣನೆಯೂ ಕಂಡುಬರುತ್ತದೆ. ೪೯, ಸಾಲುಗಳುಳ್ಳ ಪ್ರಸ್ತುತ ಶಾಸನದ ಬಹುಭಾಗ ಜೀರ್ಣವಾಗಿದೆ. ಕೊನೆಯ ಪದ್ಯದಲ್ಲಿ ಕಾಳಿದಾಸಕವಿ ಅನುಪಮ ಕವಿಯಾಗಿದ್ದುದಲ್ಲದೆ, "ಹಂದಿಗೋಳವೆರಡರ (ಚಿಕ್ಕಹಂದಿಗೋಳ ಹೀರೆಹಂದಿಗೋಳ) ಹಿಟ್ಟಿನ ಸೇನಬೋವನಾಗಿದ್ದನೆಂದೂ ತಿಳಿದುಬರುತ್ತದೆ.

ಆ ಪದ್ಯ ಹೀಗಿದೆ :

**ವಿನಯ ನಿಧಿ ಪೇಟ್ಟನೀ ಶಾ**
**ಸನಗಬ್ಬಮನಲ್ತೆ ಹಂದಿಗೋಳವೆರಡರ ಹಿ**
**ಟ್ಟಿನ ಸೇನಬೋವನೆನೆ ನೆಗೆ**
**ಳ್ದನುಪಮಕವಿ ಕಾಳಿದಾಸನುಚಿತವಿಳಾಸಂ ॥**

ಈ ಶಾಸನಗಬ್ಬವನ್ನು 'ಸಮ್ಯಕ್ತ್ವ ರತ್ನಾಕರನಾದ' 'ಸೆಟ್ಟಿಯ ಮಗನು' ಬರೆದನೆಂದು ತಿಳಿದುಬರುತ್ತದೆ.

**ಕವಿಕಂದರ್ಪ (ಕ್ರಿ.ಶ.೧೧೭೪)**

ಕೊಪ್ಪಳ ಜಿಲ್ಲೆಯ, ಕೊಪ್ಪಳ ತಾಲೂಕಿನ, ಕವಲೂರು ಗ್ರಾಮದ, ಹರಿಹರೇಶ್ವರ ದೇವಾಲಯದ ಮುಂದೆ ಇರುವ ಶಾಸನವನ್ನು[೮೨] ಕವಿಕಂದರ್ಪ ಎಂಬುವವನು ರಚಿಸಿದನೆಂದು ತಿಳಿಯುತ್ತದೆ. ಕವಿಕಂದರ್ಪ ಎಂಬುದು ಈತನ ಬಿರುದಾಗಿದ್ದು, ನಿಜನಾಮ ಏನೆಂಬುದು ತಿಳಿಯದು, ಈತನು 'ಚತುರ್ಭಾಷಾ ಚಕ್ರವರ್ತಿ'ಯಾಗಿದ್ದನು. 'ಕನ್ನಡ' ಮತ್ತು 'ಸಂಸ್ಕೃತ' ಭಾಷೆಗಳಲ್ಲಿ ಸಿದ್ಧ ಹಸ್ತನಾಗಿದ್ದನು ಎಂಬುದು ಶಾಸನದಿಂದಲೇ ವೇದ್ಯವಾಗಿದೆ. ಆದರೆ ಉಳಿದೆರಡು ಭಾಷೆಗಳು ಯಾವುವು ಎಂಬುದು ತಿಳಿದಿಲ್ಲ.

ಈ ಶಾಸನದ ವಿಶೇಷವೇನೆಂದರೆ ಕ್ರಿ.ಶ.೧೧೭೪, ೧೧೭೭, ೧೧೭೮, ೧೧೭೯, ೧೧೮೦, ೧೧೮೬ ರ ಬೇರೆ ಬೇರೆ ಕಾಲಮಾನದ ಏಳು ಶಾಸನಗಳನ್ನು ಒಳಗೊಂಡಿದೆ. ಕಳಚೂರಿ ಚಕ್ರವರ್ತಿಗಳಾದ ಸೋಮೇಶ್ವರ, ಸಂಕಮದೇವ, ಬಿಜ್ಜಳರನ್ನೂ ಉಲ್ಲೇಖಿಸುತ್ತದೆ. ಬಹುಭಾಗ ತ್ರುಟಿತವಾಗಿರುವ ಈ ದೊಡ್ಡ ಶಾಸನದಲ್ಲಿ ಸರಿಯಾದ ಮಾಹಿತಿ ದೊರೆಯುವುದಿಲ್ಲ.

೧೧೭೪ರಿಂದ ೧೧೮೮ರವರೆಗೆ ಬೇರೆ ಬೇರೆ ಕಾಲದಲ್ಲಿ ಸ್ಥಳೀಯ ಹರಿಹರೇಶ್ವರ ದೇವರಿಗೆ ದತ್ತಿಗಳನ್ನು ನೀಡಿದ ವಿಷಯ ಶಾಸನದ ವಸ್ತು.

ಕ್ರಿ.ಶ.೧೨೦೪ರ ಬೆಳಗಾವಿಯ ಶಾಸನವನ್ನು[೮೩] ಕವಿಕಂದರ್ಪ ಬರೆದನೆಂದು ತಿಳಿದುಬರುತ್ತದೆ. ಮಹಾಕವಿಗಳಿಂದ ಪ್ರಶಂಸಿತನಾದ ಬಾಳಚಂದ್ರ ಕವಿ ಕಂದರ್ಪನು 'ಚತುರ್ಭಾಷಾ ಚಕ್ರವರ್ತಿ'ಯಾಗಿದ್ದನೆಂದು ತಿಳಿದುಬರುತ್ತದೆ. ಆದರೆ ಇವರಿಬ್ಬರೂ ಒಬ್ಬನೇ ವ್ಯಕ್ತಿಯಾಗಿದ್ದನೆಂಬುದೂ ಅನುಮಾನಕ್ಕೆ ಎಡೆಮಾಡಿಕೊಡುವುದು. ಏಕೆಂದರೆ 'ಕವಲೂರು' ಶಾಸನ ಬರೆದ ಕವಿಕಂದರ್ಪ ಚತುರ್ಭಾಷಾಕವಿಯಾಗಿದ್ದರೂ ಶೈವನಾಗಿದ್ದನೆಂದು ತಿಳಿದುಬರುವುದು. ಆದರೆ ಈ ಶಾಸನಕವಿ ಕಂದರ್ಪನು ಜೈನನಾಗಿದ್ದನೆಂಬುದು ತಿಳಿಯುತ್ತದೆ. ಅಷ್ಟೇ ಅಲ್ಲದೆ ಮೇವುಂಡಿ ಮಲ್ಲಾರಿಯವರು ಹೇಳುವಂತೆ ಕವಿಕಂದರ್ಪ ಜನ್ನನ ಪತ್ನಿ ಲಕುಮಾದೇವಿಯ ಗುರು.

ಈ ಭಿನ್ನತೆಯನ್ನು ಗಮನಿಸಿದರೆ ಇಬ್ಬರೂ ಬೇರೆ ಬೇರೆ ಎಂದು ತೋರುತ್ತದೆ.ಆದರೆ ಈ ಕವಿ 'ಕವಿಕಂದರ್ಪನು' ಮೊದಲು ಶೈವನಾಗಿದ್ದು ಮುಂದೆ ಜಿನೋಪಾಸಕನಾಗಿ ಆ ಕಾವ್ಯನಾಮದಿಂದಲೇ ಶಾಸನಗಳನ್ನೂ ಬರೆಯುತ್ತಿರಬಹುದು[೮೪] ಎಂಬ ಮೇವುಂಡಿಯವರು ಊಹೆ ಸತ್ಯಕ್ಕೆ ಸಮೀಪವಾಗಿದೆ.

**ಶಾರದಿನಾಥ ಪಂಡಿತ (ಕ್ರಿ.ಶ.೧೧೭೪)**

ಹಾಸನ ಜಿಲ್ಲೆಯ, ಅರಸೀಕೆರೆ ತಾಲೂಕಿನ, ಕಲ್ಲಂಗೆರೆ ಗ್ರಾಮದ[೮೫] ಲಕ್ಷ್ಮೀನಾರಾಯಣ ದೇವಾಲಯದ ಉತ್ತರಕ್ಕಿರುವ ಶಿಲಾಶಾಸನವನ್ನು ಈ ಶಾಸನಕವಿ ರಚಿಸಿದ್ದಾನೆ. ೭೫ ಸಾಲುಗಳಿರುವ ಈ ಶಾಸನದ ಅನೇಕ ಭಾಗಗಳು ಜೀರ್ಣಾವಸ್ಥೆಯಲ್ಲಿರುವುದರಿಂದ ಅಸ್ಪಷ್ಟವಾಗಿದೆ.

ಹೊಯ್ಸಳ ವಂಶದ ಪ್ರತಾಪ ನರಸಿಂಹನ ಕಾಲದ ಈ ಶಾಸನದಲ್ಲಿ ನಮೂದಿಸಿರುವ ಕಾಲವು ೧೧೭೪ಕ್ಕೆ ಸರಿ ಹೊಂದುತ್ತದೆ. ಶಾಸನದ ಮೊದಲ ಭಾಗದಲ್ಲಿ ಹೊಯ್ಸಳ ವಂಶಾವಳಿಯನ್ನು ನಂತರ ಪ್ರತಾಪಸಿಂಹ ಬಲ್ಲಾಳನ ಕಾಲದಲ್ಲಿದ್ದ ಮಹಾಪ್ರಧಾನ ಶ್ರೀಕರಣದ ಹೆಗ್ಗಡೆ ಕೇತಯಂಣನ ಬಗೆಗೆ ವಿವರಗಳನ್ನು ಕಲ್ಲಂಗೆರೆಯ ಚೆನ್ನಕೇಶವ ದೇವಾಲಯಕ್ಕೆ ಈತ

ನೀಡಿದ ದಾನ ದತ್ತಿಗಳ ವರ್ಣನೆಯನ್ನು ಕಾಣಬಹುದು ಕೆಲ್ಲಂಗೆರೆಯನ್ನು ಶಾಸನಕವಿ "ಶ್ರೀ ಮದನಾದಿ ಅಗ್ರಹಾರಂ ಹರಿಹರಪುರವಾದ ಕಲ್ಲಂಗೆರೆ" ಎಂಬುದಾಗಿ ವರ್ಣಿಸಿದ್ದಾನೆ.

ಶಾಸನದ ೬೩ನೇ ಸಾಲಿನಲ್ಲಿ ಶಾರದಿನಾಥ ಪಂಡಿತನ ಹೆಸರು ಕಂಡುಬರುತ್ತದೆ, "ಚಬ್ಬರಾಜನ ಪುತ್ರ ಶಾರದಿನಾಥ ಪಂಡಿತರು ಹೇಳ್ದ ಶಾಸನ" ಎಂದಿರುವುದರಿಂದ ಶಾರದಿನಾಥನು ಚಬ್ಬರಾಜನ ಪುತ್ರನಾಗಿದ್ದನೆಂಬ ವೈಯಕ್ತಿಕ ವಿಚಾರ ತಿಳಿದುಬರುತ್ತದೆ. ಶಾಸನ ಬಹಳ ಲುಪ್ತವಾಗಿದ್ದರಿಂದ ಪದ್ಯಗಳನ್ನು ಉದ್ಧರಿಸಲು ಅಸಾಧ್ಯವಾಗಿದೆ.

**ಹೋರಿಯ ನೀಲಯ್ಯ (೧೧೭೬)**

ಬಿಜಾಪುರ ಜಿಲ್ಲೆಯ, ಬಾಗೇವಾಡಿ ತಾಲೂಕಿನ, ಇಂಗಳೇಶ್ವರ ಗ್ರಾಮದಲ್ಲಿ ಸೋಮನಾಥ ದೇವಾಲಯದ ಮಂಟಪದ ಉತ್ತರ ಗೋಡೆಗೆ ಸೇರಿರುವ ಶಾಸನವನ್ನು[೮೬] ಈತ ರಚಿಸಿದ್ದಾನೆ. ಕವಿ, ಕಂಡರಣೆಕಾರರ ಪರಿಚಯದಿಂದಲೇ ಶಾಸನ ಆರಂಭವಾಗುವುದೊಂದು ಇಲ್ಲಿಯ ವಿಶೇಷ ಅದು ಹೀಗಿದೆ.

> **"ಶ್ರೀ ಮೂಲಸ್ಥಾನದೇವರ ದಿವ್ಯ ಶ್ರೀಪಾದಪದ್ಮಾರಾಧಕಂ ಶ್ರೀಸಾರಾದೇವಿ**
> **ಲಬ್ಧವರಪ್ರಸಾದಂ ಶ್ರೀಮತ್ ಕಾಸ್ಯಪಗೋತ್ರಪವಿತ್ರಂ ಹೋರಿಯನೀಲಯ್ಯಂ**
> **ಬರೆದ ಶಾಸನ ಶ್ರೀಮಲ್ಲಿಕಾರ್ಜುನದೇವರ ಪುತ್ರ ಶ್ರೀಸರಸ್ವತಿದೇವಿವರಪ್ರ**
> **ಸಾದಂ ಹೊಡಲ ರಾಮೋಜನ ಮಗಂ ರೇವೋಜಂ ಹೊಯ್ದ ಸಾಸನ"**

ಈ ಶಾಸನವು ಕಲಚುರಿ ಅರಸ ರಾಯಮುರಾರಿ ಸೋವಿದೇವನ ಕಾಲದಲ್ಲಿ ರಚನೆಗೊಂಡಿದೆ. ಇದರ ಕಾಲ ಕ್ರಿ.ಶ. ೧೧೭೬. ಅಮ್ಮಣ್ಣಯ್ಯ ದಂಡನಾಯಕನ ಮಗ ಸೋವಿದೇವ ದಂಡನಾಯಕನ ಬಿನ್ನಹದ ಮೇರೆಗೆ ಅರಸನು ಇಂಗಳೇಶ್ವರ ಗ್ರಾಮದ ಸೋಮನಾಥ ದೇವರಿಗೆ ತರ್ದವಾಡಿ ಸಾಸಿರದ 'ಸೋಗಿಲು ೧೨'ಕ್ಕೆ ಸೇರಿದ 'ಯಸಗಬಾಳು' ಎಂಬ ಗ್ರಾಮವನ್ನು ದಾನವಾಗಿ ನೀಡಿದುದು ಶಾಸನದ ಸಾರಾಂಶ. ಸೋಮನಾಥ ದೇವಾಲಯವನ್ನು ವಾಜಿಕುಲದ ಕೌಂಡಿಣ್ಯ ಗೋತ್ರೋದ್ಭವನಾದ ಹೀಳಸೋವರಸನೆಂಬುವನು ಕಟ್ಟಿಸಿ 'ಹೆಬ್ಬಾಳು ೧೨'ಕ್ಕೆ ಸೇರಿದ ಕೊಡಗನೂರು ಗ್ರಾಮವನ್ನು ಕ್ರಯಕ್ಕೆ ಕೊಂಡು ದೇವರಿಗೆ ದತ್ತಿ ಬಿಟ್ಟದ್ದನು ಇದೇ ಶಾಸನದಲ್ಲಿ ತಿಳಿಸಿದೆ. ಇದರಲ್ಲಿ ಇಂಗಳೇಶ್ವರದ ಐನೂರು ಮಹಾಜನರನ್ನು ಪ್ರಶಂಸಿದೆ. ಪೌರಾಣಿಕ ಅಸರ ಜನಮೇಜಯನು 'ಕರ್ನಾಟ ಕಾಶಿಪುರವಾದ' ಈ ಅಗ್ರಹಾರವನ್ನು ಸ್ಥಾಪಿಸಿದನೆಂದು ಹೇಳಿದೆ. ಇತರರು ಅನೇಕ ದತ್ತಿ ನೀಡಿದ ವಿವರಗಳಿವೆ. ಈ ದಾನಗಳ ಪ್ರತಿಗ್ರಹಿ

ಸಿಂಹಪರಿಸೆಗೆ ಸೇರಿದ ಮತ್ತು ವಿಜಯಾಪುರದ ಸ್ವಯಂಭು ಕೇದಾರೇಶ್ವರ ದೇವಾಲಯದ ಆಚಾರ್ಯನಾದ ಜ್ಞಾನರಾಶಿಪಂಡಿತನೆಂಬುವನು.

ಶಾಸನ ಭಾಷೆ ಸಂಸ್ಕೃತ ಹಾಗೂ ಕನ್ನಡ ಚಂಪೂ ಶೈಲಿಯಲ್ಲಿರುವ ಈ ಶಾಸನ ಕಾವ್ಯದ ರಚನೆಯಲ್ಲಿ ಕವಿ ಸ್ರಗ್ಧರೆ, ಮತ್ತೇಭವಿಕ್ರೀಡಿತ, ಶಾರ್ದೂಲ ವಿಕ್ರೀಡಿತ, ಉತ್ಪಲಮಾಲಾ ಮುಂತಾದ ವೃತ್ತಗಳನ್ನು ಬಳಸಿದ್ದಾನೆ.

ಸಂಸ್ಕೃತದಲ್ಲೂ ಕೆಲವು ಪದ್ಯಗಳನ್ನು ರಚಿಸುವುದರಿಂದ ಕವಿಗೆ ಸಂಸ್ಕೃತ ಪಾಂಡಿತ್ಯವಿತ್ತೆಂಬುದು ತಿಳಿಯುವುದು. ಪ್ರಸಿದ್ಧ ಪ್ರಾರ್ಥನಾ ಸ್ತುತಿ ಹಾಗೂ ಫಲಸ್ತುತಿ ಶ್ಲೋಕ ಹಾಗೂ ಶಾಲಿನೀ ವೃತ್ತಗಳಲ್ಲಿವೆ. ಕವಿಯ ಶೈಲಿಗೆ ಒಂದೆರಡು ನಿದರ್ಶನಗಳನ್ನು ಗಮನಿಸಬಹುದು, ಅಮ್ಮಣ ದಂಡಾದಿಪನ ಹಿರಿಮೆಯನ್ನು ವರ್ಣಿಸುವ ಬಗೆ:

**ಅಣುಮಾತ್ರಂ ಕನಕಾಚಳಂ ನಿಜಮಹೌನ್ನತ್ಯಕ್ಕೆ ವಾರಾಶಿ ವಾಃ**
**ಕಣಮಾತ್ರಂ ನಿಜಸದ್ಗಭೀರತೆಗೆ ಕಳ್ವೋರ್ವೀರುಹಂ ನಿಶ್ಚಯಂ**
**ತೃಣಮಾತ್ರಂ ನಿಜದಾನದೇಳ್ಗೆಯೆನಲಿಂ ಸಾಮಾನ್ಯವೇ ಪೆರ್ಮೆಯ**
**ಮ್ಮಣ ದಂಡಾಧಿಪರತ್ನನುದ್ಧ ಸಹವಾಸ್ಯಾಮ್ನಾಯ ಸತ್ಯೈಖರಂ ॥**

ಹೀಳ ಸೋವರಸ ಸೋಮನಾಥ ದೇವಾಲಯವನ್ನು ಕಟ್ಟಿದ ವಿಷಯವನ್ನು ಹೀಗೆ ಸಾರುತ್ತದೆ.

**ವಸುಧೆಗೆ ತನ್ನಕೀರ್ತಿ ಪೊಸಮುತ್ತಿನ ಬೆಳ್ಗೊಡೆಯಾಗಿ ಧಾತ್ರಿ ಕೀ**
**ರ್ತಿಸೆ ನೆಗಳ್ದಿಂಗಳೇಶ್ವರದ ಮಧ್ಯದೊಳೊಪ್ಪಿರೆ ತನ್ನ ನಾಮದಿಂ**
**ದೆಸೆಯ ನಿಜಾನ್ವಯೋದ್ಭವಸಮೃದ್ಧಿಗೆ ಕಾರಣಮಾಗೆ ಸದ್ಗುಣಂ**
**ಪಸರಿಸೆ ಹೀಳ ಸೋಮನೆಳೆ ಜೀಯೆನೆ ಮಾಡಿಸಿದಂ ತ್ರಿಕೂಟಮಂ ॥**

**ಹೆಮ್ಮಾಡಿ (ಕ್ರಿ.ಶ.೧೧೭೭)**

ಹಾಸನ ಜಿಲ್ಲೆಯ, ಅರಸೀಕೆರೆ ತಾಲೂಕಿನ, ಶಂಕರಹಳ್ಳಿ[೮೭] ಶಾಸನವು ಶಾಸನಕವಿ ಹೆಮ್ಮಾಡಿಯಿಂದ ರಚಿಸಲ್ಪಟ್ಟಿದೆ. ಈ ಶಾಸನವು ಹೊಯ್ಸಳ ವೀರಬಲ್ಲಾಳನ ಆಳ್ವಿಕೆಯ ಸಂದರ್ಭದಲ್ಲಿ ಮಹಾಸಾಮಂತ ಚೋಳಯ್ಯ, ಸಾಮಂತ ಬೋವಯ್ಯ ಅವರ ಹೆಂಡತಿಯರು ಹಾಗೂ ಮೊಮ್ಮಕ್ಕಳು, ಮಹಾಸಾಮಂತ ಲಕುಮನಾಯಕ ಕಿತ್ತಣಕೆರೆಯನ್ನು ಆಳುತ್ತಿದ್ದರು. ಈ ಸಂದರ್ಭದಲ್ಲಿ 'ಶಿವಲಿಂಗ' ಪ್ರತಿಷ್ಠಾಪನೆಯಾಗುವುದು, ಇದಕ್ಕೆ ಬೊಪ್ಪಗಾವುಂಡನ ಮಗ ಮಸಣಗೌಡ ಮಾರಗೌಡಿ ದೇವರ ನಂದಾದೀವಿಗೆಗೆ ಭೂದಾನ ನೀಡುವರು.

ಮಾಣಿಗಾವುಡಿಯ ವರ್ಣಿಸುವ ಅಶುದ್ಧ ಕಂದ ಪದ್ಯ ಹೀಗಿದೆ.:

**ಮಲ.....ಯ ಮ್ರಿದುವಚನೆ ಸಾದು**
**ಳ್ಳೆದಭಿಮಾನಿ ಸದ್ಗುಣೆ ಸದ್ರಕ್ಷಣಸಲುಭಾಗ್ಯವಂತೆ**
**ಮಸಣಗವುಡನ ಮನೋವಲ್ಲಭೆ**
**ಮಾಣಿಗಲುಡಿ ಬುಧಜನರುಕು...ವನಿಂ ॥**

**ಕಲ್ಯಾಣಶಕ್ತಿ ಪಂಡಿತ (ಕ್ರಿ.ಶ.೧೧೭೭)**

ಚಿತ್ರದುರ್ಗ ಜಿಲ್ಲೆಯ, ದಾವಣಗೆರೆ ತಾಲೂಕಿನ, ಗಂಗನರಸಿ ಗ್ರಾಮದಲ್ಲಿ ಕಲ್ಮೇಶ್ವರ ದೇವಾಲಯದ ಬಳಿಯಿರುವ ಶಾಸನವೊಂದರ[೮೮] ಕೊನೆಯಲ್ಲಿ "ವಾಮಶಕ್ತಿ ಪಂಡಿತರ ಮಗಂ ಕಲ್ಯಾಣಸಕ್ತಿ ಪಂಡಿತರು ಯೀ ಶಾಸವನ ಸೇನಬೋವ ಬೊಪ್ಪೆಯ ಬರೆದ ಕಲುಕುಟಿಗ ಮಳೋಜ ಹೊಯ್ದ" ಎಂದಿದೆ. ಕಲ್ಯಾಣಶಕ್ತಿ ಪಂಡಿತ ಈ ಶಾಸನವನ್ನು ರಚಿಸಿದನೆಂದು ಸೂಚಿತವಾಗಿದೆ. ಇದೇ ಗ್ರಾಮದಲ್ಲಿರುವ ಇನ್ನೊಂದು ಶಾಸನದಲ್ಲೂ[೮೯] ಈತನ ಉಲ್ಲೇಖವಿದೆ. ಈ ಶಾಸನದಿಂದ ಇವನ ಅನ್ವಯದ ಬಗ್ಗೆ ಕೆಲವು ವಿವರಗಳು ದೊರೆಯುತ್ತವೆ. ಈತ ಜ್ಞಾನಶಕ್ತಿಮುನಿಯ ಶಿಷ್ಯನಾದ ವಾಮಶಕ್ತಿಪಂಡಿತನ ಮಗ (ಶಿಷ್ಯ) ವಾಮಶಕ್ತಿಯ ಒಡಹುಟ್ಟಿದ ಆದಿತ್ಯನೆಂಬಾತನು ವಿಜಯಪಾಂಡ್ಯನ ದಂಡನಾಥನಾಗಿದ್ದ. ಅವನ ಮಗ ಸೇನಾಪತಿ ದಂಡನಾಥ. ಆ ಇನ್ನೊಂದು ಶಾಸನವನ್ನು ಇದೇ ಕವಿ ರಚಿಸಿರಬಹುದಾದ ಸಾಧ್ಯತೆ ಇದೆ. ಪ್ರಸ್ತುತ ಶಾಸನ ಪಾಂಡ್ಯ ಅರಸ 'ವಿಜಯಪಾಂಡ್ಯ'ನ ಕಾಲದ್ದಾಗಿದೆ, ಕ್ರಿ.ಶ.೧೧೭೭ ಕ್ಕೆ ಸೇರಿದೆ.

ವಿಜಯಪಾಂಡ್ಯ ಅರಸೀಕೆರೆಯ ಸ್ವಯಂಭೂ ಕಲಿದೇವರ ನಂದಾದೀಪ ಸೇವೆಗಾಗಿ ಗಾಣವೊಂದನ್ನು ದಾನ ನೀಡಿದ ಸಂಗತಿಯನ್ನು ಶಾಸನ ತಿಳಿಯುತ್ತದೆ. ಈ ದಾನವನ್ನು ಸ್ವೀಕರಿಸಿದವನು ತೇಜೋನಿಧಿಪಂಡಿತ. ಇದೇ ವ್ಯಕ್ತಿಯನ್ನು ಮೇಲೆ ಹೇಳಿದ ಇನ್ನೊಂದು ಶಾಸನದಲ್ಲಿ 'ತೇಜೋನಿಧಿ ಅಮೃತಹಸ್ತ' ಪಂಡಿತದೇವ ಎಂದು ಹೆಸರಿಸಿದ್ದು, ಆತ "ಶಿವಧರ್ಮ ಪ್ರವಿಪುಳ ಲಕ್ಷ್ಮೀ ವಿಳಾಸಂ ಭವನಂ ಪುಣ್ಯಾರ್ಣವನೆನಿಪಂ ಗುರುಕುಳ ಕೈರವಚಂದ್ರ" ಕಲ್ಯಾಣಶಕ್ತಿ ಪಂಡಿತನ ಒಡಹುಟ್ಟಿದವನೆಂದು ತಿಳಿಸಿದೆ. ಇಲ್ಲಿ ಒಡಹುಟ್ಟಿದವನೆಂಬುದು ಇವರಿಬ್ಬರೂ ಒಬ್ಬರೇ ಗುರುವಿನ ಶಿಷ್ಯರಾಗಿದ್ದರೆಂಬುದನ್ನು ನಿರ್ದೇಶಿಸುವಂತೆ ತೋರುತ್ತದೆ. ಕಲ್ಯಾಣಶಕ್ತಿ ಪಂಡಿತನ ಶೈಲಿ ತುಂಬಾ ಸರಳವಾಗಿದೆ, ವಿಶೇಷವಾಗಿ ಕಂದಪದ್ಯಗಳನ್ನೊಳಗೊಂಡ ತನ್ನ ರಚನೆಯಲ್ಲಿ ಈತ ಮಹಾಸ್ರಗ್ಧರೆ, ಹಾಗೂ ಮತ್ತೇಭವಿಕ್ರೀಡಿತ ವೃತ್ತಗಳನ್ನು ಬಳಸಿರುವುದನ್ನು ಕಾಣುತ್ತೇವೆ. ಇವನ ಶೈಲಿಗೆ ಒಂದು ಉದಾಹರಣೆಯನ್ನು ಗಮನಿಸಬಹುದು.

**ಆದಿತ್ಯದಂಡನಾಥನ ಮಹಿಮೆಯ ಪ್ರಶಂಸೆ :**

> **ವರಸೌಖ್ಯಾಚಾರದೊಳ್ತನ್ನನೆ ಪೊಗಳೆ ಜಗಂ ಮಂತ್ರದೊಳ್ಮಂತ್ರಿಗಳ್ಬಿ**
> **ತ್ತರಿಸಲ್ತನ್ನಂ ನಿಜೇಶಂ ಪತಿಹಿತಗುಣದೊಳ್ಮೆಚ್ಚಿ ಕೈಕೊಂಡು ಕೂರ್ತಾ**
> **ದರಿಸಲ್ತನ್ನಂ ದಿಟಂ ತನ್ನವೊಲನುಪಮರಾರೆಂಬಿನಂ ಕೀರ್ತಿಲಕ್ಷ್ಮೀ**
> **ವರನಾದಾದಿತ್ಯ ದಂಡಾಧಿಪನ ಮಹಿಮೆಯಂ ಬಣ್ಣಿಸಲ್ ಬಲ್ಲನಾವಂ॥**

**ದೇವಣ್ಣ (ಕ್ರಿ.ಶ.೧೧೭೮)**

ಬಳ್ಳಾರಿ ಜಿಲ್ಲೆಯ, ಹಡಗಲಿ ತಾಲೂಕಿನ, ಹೊಳಲು[೧೦] ಗ್ರಾಮದ ಗೌರಿಶ್ವರ ದೇವಾಲಯದಲ್ಲಿರುವ ಶಾಸನವನ್ನು ಶಾಸನಕವಿ 'ದೇವಣ್ಣ' ಎಂಬುವವನು ಬರೆದಿದ್ದಾನೆ. ಇದನ್ನು ಶಾಸನ ಕೊನೆಯ ೮೨ನೇ ಸಾಲಿನಲ್ಲಿ 'ದೇವಣ್ಣನ ಬರಹ ॥ ಗಂಗಾಪುರದ ಮಾರಿಯೋಜನ ಲಿಖಿತ॥ ಎಂದಿದೆ. ಈ ಶಾಸನದ ಕಾಲ ಕ್ರಿ.ಶ.೧೧೭೮. ಈ ಶಾಸನವು ವಿಜಯಪಾಂಡ್ಯದೇವನು 'ನೊಳಂಬವಾಡಿ ೩೨೦೦೦'ವನ್ನಾಳುತ್ತಿದ್ದ ವಿಜಯಪಾಂಡ್ಯದೇವರು ಶಂಕರದಂಡನಾಯಕನ ವಿನಂತಿಯಂತೆ, ಗವರೇಶ್ವರದೇವರಿಗೆ ಹೆಜ್ಜುಂಕದಲ್ಲಿ ಲಕ್ಷಕ್ಕೆ ಹಾಗವೊಂದನ್ನು ಧಾರಾಪೂರ್ವಕವಾಗಿ ಬಿಟ್ಟನು. ಮೂರು ಲಕ್ಷ ಅಡಕೆಯ ಸುಂಕವನ್ನು ವಸೂಲು ಮಾಡಿಕೊಡುವ ಜವಾಬ್ದಾರಿಯನ್ನು ೧೨೦ ಮಹಾಜನರು ಹೊರುತ್ತಾರೆ.

**ಕುಂತಳ ದೇಶದ ವರ್ಣನೆ :**

> **ಕುಂತಳದೇಶದೊಳಿದ್ದುದು ತಿಂತಿಣಿಯಾದುರ್ಗ್ಗಳಿಂ ಜನಾವಳಿಯಿಂದಂ**
> **ಕನ್ತುಗೆ ನೆಲೆವೀಡಾಯೆಂಬತೆಸೆವ ನೊಣಂಬವಾಡೆನಾಡತಿ ಮುದದಿಂ ॥**
> **ಅದು ಧರ್ಮಸಂಭವಾಸ್ಪದಮದು ಸಂಪದಭವನಮಧು ಸುಖಾವಾಸಮದೇನದು**
> **ನಾಕ ಲೋಕನಿಭಮೆನಲದನಾಕುಳಕುನ್ರಿಪತಿ ಪಾಳಿತಮಕ್ಕುಂ.॥**

ವಿಜಯಪಾಂಡ್ಯನ ವರ್ಣನೆ. :

> **ಆದನಾಳ್ವನಖಿಳ ರಿಪುನ್ರಿಪಮದೇಭ ವಜ್ರಾಂಕುಶಂ ಮಹೀಭುಜತಿಳಕಂ**
> **ಮದನಾಕಾರನುದಾರಂ ವಿದಿತಯಶಂ ವಿಜಯಪಾಂಡ್ಯನಾಹಶೌಣ್ಡಂ ॥**
> **ಆ ನರಪಾಳನುಂನತಿ ಸುರಾದ್ರಿಗೆ ತೇಜ ಯಿನಂಗೆ ಗುಣೋಪಾಥೋನಿಧಿಗಾರ್ಪ್ಪು**
> **ಕಳ್ಪತರುಗುತ್ಕಟಕಾಂತೆ ಸುಧಾಕರಂಗೆ ವಿಜ್ಞಾನಗುಣಂ ವಿರಂಚಿಗೆ**
> **ಸಮಜಿತಶೌರ್ಯ ಶೌಚಗುಣ ಮರುಂನದಿಸೂನುಗೆ ವೈಭವಂ**
> **ನಭಕೇಕೊಪ್ಪಿ ಭವ್ಯವೈರಿಗೆ ನೋಟ್ಟಿಡಗ್ಗಳಂ ॥**

**ಗೋಮಕವಿ (ಕ್ರಿ.ಶ.೧೧೭೮)**

ಅವಿಭಜಿತ ರಾಯಚೂರು ಜಿಲ್ಲೆಯ, ಇಂದಿನ ಕೊಪ್ಪಳ ಜಿಲ್ಲೆಯ, ಯಲಬುರ್ಗಿ ತಾಲೂಕಿನ, ಕುಕ್ಕನೂರಿನಲ್ಲಿ ಮಹಾಮಾಯಾ ದೇವಾಲಯದ ಮುಖಮಂಟಪದಲ್ಲಿ ನಿಂತಿರುವ

ಈ ಶಾಸನವನ್ನು[೯೧] ಶಾಸನೋಕ್ತ ಗೋಮಕವಿಯೇ ರಚಿಸಿರಬಹುದು. ಶಾಸನ ಕಲಚುರಿ ಅರಸ ಸಂಕಮದೇವನ ಕಾಲದ್ದು, ಕ್ರಿ.ಶ.೧೧೭೮ಕ್ಕೆ ಸೇರಿದ್ದಾಗಿದೆ.

ಧನ್ನುಗಿ ದಂಡನಾಯಕನು ಅರಸರ ಅನುಮತಿ ಪಡೆದು, ಜ್ಯೆಷ್ಠಾ ಹಾಗೂ ಸೋಮೇಶ್ವರ ದೇವಾಲಯಗಳಲ್ಲಿ ದೇವತಾರ್ಚನೆ, ನೈವೇದ್ಯ, ಮತ್ತು ಮುನಿಗಳ ಆಹಾರದಾನಕ್ಕೋಸ್ಕರ 'ಕುಕ್ಕನೂರು ೩೦'ಕ್ಕೆ ಸೇರಿದ 'ಸೆಲಗರ' ಎಂಬ ಗ್ರಾಮವನ್ನು ದತ್ತಿ ಬಿಟ್ಟದ್ದು ಶಾಸನದ ವಸ್ತು. ಈ ದತ್ತಿಯ ಪ್ರತಿಗ್ರಹಿ ಜ್ಯೇಷ್ಠಾದೇವಿಯ ಸ್ಥಾನಾಚಾರ್ಯ ಮತ್ತು ಸೋಮೇಶ್ವರದೇವರ ನವಮಠಾಚಾರ್ಯ ಸಿದ್ಧಾಂತಿ ರಾಜಗುರು ಕಳೇಶ್ವರ, ಈ ದತ್ತಿಯ ಕೆಲಭಾಗವನ್ನು ಗೋಮಕವಿ ಹಾಗೂ ದೇವಾಲಯದ ಸಿಬ್ಬಂದಿ ವರ್ಗದವರಿಗೆ ನೀಡಲಾಯಿತು.

ಮಧ್ಯಯುಗೀನ ಕನ್ನಡ ಲಿಪಿಯಲ್ಲಿ ತುಂಬಾ ಸುಂದರವಾಗಿ ಈ ಶಾಸನ ಕಾವ್ಯವನ್ನು ಕಂಡರಿಸಲಾಗಿದೆ. ಭಾಷೆ ಕನ್ನಡ; ಗದ್ಯ ಪದ್ಯಮಯವಾಗಿದೆ. ಪ್ರಾರ್ಥನಾಶ್ಲೋಕ ಹಾಗೂ ಫಲಸ್ತುತಿ ಶ್ಲೋಕಗಳಲ್ಲಿ ಕೆಲವು ಸಂಸ್ಕೃತ ಭಾಷೆಯಲ್ಲಿವೆ. ಕವಿತೆ ತುಂಬ ಪ್ರೌಢವಾದುದು, ಸ್ವತಂತ್ರ ಕಾವ್ಯವೆಂದೇ ಈ ಶಾಸನವನ್ನು ಪರಿಗಣಿಸಬಹುದು. ಕವಿ ಸುಪ್ರಸಿದ್ಧನೇ ಆಗಿರಬೇಕು. ಕುಂತಳ ದೇಶ, ಕುಕ್ಕನೂರು ಅಗ್ರಹಾರ ಮತ್ತು ಅಲ್ಲಿನ ದೇವತೆಗಳು (ವಿಶೇಷವಾಗಿ ಜ್ಯೇಷ್ಠಾದೇವಿ) ರಾಜಗುರು ಕಳೇಶ್ವರ, ಕಳಚೂರಿ ಅರಸರು ಹಾಗೂ ಅವರ ಸಾಮಂತರಾದ ಸಿಂಧರು ಮುಂತಾದ ವಿಷಯಗಳನ್ನು ಕವಿಯು ತುಂಬಾ ಸೊಗಸಾಗಿ ಚಿತ್ರಿಸಿದ್ದಾರೆ. ಬೆಳ್ವಲ ಪ್ರದೇಶವನ್ನಾಳುತ್ತಿದ್ದ ಧನ್ನುಗಿ ದಂಡನಾಯಕನ ಅನ್ವಯವನ್ನೂ ಶಾಸನದಲ್ಲಿ ಕೊಟ್ಟಿದೆ.

ಕವಿ ತನ್ನ ಸಂಸ್ಕೃತ ಶ್ಲೋಕ ರಚನೆಯಲ್ಲಿ ಅನುಷ್ಟುಪ್ ಹಾಗೂ ಶಾಲೀನೀ ವೃತ್ತಗಳನ್ನು ಕನ್ನಡ ಪದ್ಯರಚನೆಯಲ್ಲಿ ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ, ಮಹಾಸ್ರಗ್ಧರೆ, ಉತ್ಪಲಮಾಲೆ, ಚಂಪಕಮಾಲೆ, ಹಾಗೂ ಕಂದಪದ್ಯಗಳನ್ನು ಬಳಸಿದ್ದಾನೆ. ಕಾವ್ಯದ ಬಂಧ, ಶೈಲಿಗಳು ಸರಳ ಸುಂದರವಾಗಿವೆ, ಭಾಷೆ ಛಂದಸ್ಸುಗಳ ದೃಷ್ಟಿಯಿಂದ ಶಾಸನಪಾಠ ಶುದ್ಧವಾಗಿದೆ.

**ಕುಂತಳ ದೇಶದ ಬಣ್ಣನೆ :**

> **ಶ್ರೀಮಜ್ಜನಸೇವ್ಯಂ ಸುಮ**
> **ನೋಮಾಳಾಬಹುಸುವರ್ಣರತ್ನಾಶ್ರಯವೆಂ**
> **ಬೀ ಮಹಿಮೆಯಿನೆಣೆಯಾದುದಿ**
> **ಳಾಮಹಿಳೆಯ ಕುಂತಳಕ್ಕೆ ಕುಂತಳದೇಶಂ ॥**

ಕುಕ್ಕನೂರಿನ ಅಧಿದೇವತೆ, ಜ್ಯೇಷ್ಠಾದೇವಿಯ ಮಹಿಮೆ :

> ತಪದಿಂ ನೋಡಿರೆ ಕುಂಭಕರ್ಣನಜನಂ ಮೆಚ್ಚಿಪ್ಪುದುಂ ಮೆಚ್ಚನಿ
> ತ್ತಪೆನೆಂದಬ್ಜಭವಂಗೆ ದಾನವವರಂ ನಿರ್ದೆಯ್ವಕ್ಕೆಂದು ಯಾ
> ಚಿಪುದೆಂ ಮಾನ್ದಿಸಿ ನಿಂದು ನಾಲಗೆಯೊಳೆಂದುಂ ನಿದ್ರೆಯಕ್ಕೆಂದು ಯಾ
> ಚಿಪುದಂ ಮಾಡಿಸಿಯನ್ನನಂ ಕಿಡಿಸಿದಳ್ ಬಲ್ಪೆಂತುಟೋ ಜ್ಯೇಷ್ಠೆಯಾ ॥

ಸಂಸ್ಕೃತಬೂಯಿಷ್ಠ ಗದ್ಯ ಶೈಲಿ :

> ಆ ಘನವರ್ಣ್ನದ ಕಾಳಿಕಾಜ್ಯೇಷ್ಠೆಯಿಂ ಕಪಾಳೀಶನಿಂ ಸ್ತಂಭನಂ ಕೃಷ್ಣವರ್ಣ್ನದ
> ಭದ್ರಕಾಳೀಜ್ಯೇಷ್ಠೆಯಿಂ ಪ್ರಳಯಾಂತಕನಿಂ ವಿಷಹರಣಂ ಧೂಮ್ರವರ್ಣ್ನದ
> ಮಹಾಕಾಳೀಜ್ಯೇಷ್ಠೆಯಿಂ ಮಹಾಕಾಳನಿಂ ಜ್ವರಹರಣಂ ಮಹಾಕೃಷ್ಣವರ್ಣ್ನದ
> ನೀಲಾಜ್ಯೇಷ್ಠೆಯಿಂ ಭದ್ರಕಾಳನಿಂ ವಿದ್ವೇಷಣಂ...........

ಕಳೇಶ್ವರಾರ್ಯ ಗೋಮಕವಿಗೆ ನೀಡಿದ ದಾನವನ್ನು ಹೀಗೆ ವರ್ಣಿಸಿದೆ. :

> ಉತ್ತಮವೆನೆ ಕುಡುಗುಂಟೆಯೊ
> ಳಿತ್ತಂತಿರೆ ಗೋಮಕವಿಗೆ ದಯೆಯಿಂ ಹಂನಿ
> ರ್ಮ್ಮತ್ತರ್ಕೆಯ್ಯುಂ ಮನ್ನೆಯುಮ
> ನಿತ್ತಂ ಸೆಲಗರದೊಳಂ ಕಳೇಶ್ವರದೇವಂ ॥

"ದತ್ತಿಗಳನ್ನು ಪಡೆದಿದ್ದ ಕಳೇಶ್ವರಾರ್ಯರು ಆ ಸಂದರ್ಭದಲ್ಲಿ ಹನ್ನೆರಡು ಮತ್ತರು ಭೂಮಿ ಮತ್ತು ಮನೆ ಕೊಟ್ಟು, ಗೋಮಕವಿಗೆ ಮರ್ಯಾದೆ ಮಾಡಿದರೆಂಬುದನ್ನು ಗಮನಿಸಿದರೆ; ಈ ಶಾಸನವನ್ನು ಬರೆದವನು ಏತತ್ಕವಿಯೇ ಎಂದು ಸಹಜವಾಗಿಯೇ ಗೊತ್ತಾಗುವುದು." ಎಂದು ಮೇವುಂಡಿ ಮಲ್ಲಾರಿ ಅಭಿಪ್ರಾಯ ಪಡುತ್ತಾರೆ.[೨]

ಈ ಕಾವ್ಯದ ಎರಡು ಪದ್ಯಗಳು ಬೆಳಗಾವಿ ಜಿಲ್ಲೆಯ, ಸವದತ್ತಿ ತಾಲೂಕಿನ, ಸಿರಸಂಗಿ ಗ್ರಾಮದ ಕ್ರಿ.ಶ.೧೧೮೬ಕ್ಕೆ ಸೇರುವ ಶಾಸನವೊಂದರಲ್ಲಿ ಕೊಂಚ ಬದಲಾವಣೆಗಳೊಂದಿಗೆ ಕಂಡುಬರುತ್ತದೆ. ಮೇವುಂಡಿಯವರ ಪ್ರಕಾರ[೩] ಹೀಗಿರುವುದಕ್ಕೆ ಕಾರಣವೆಂದರೆ ಕುಕ್ಕನೂರು ಪ್ರಸಿದ್ಧ ಅಗ್ರಹಾರವಾಗಿದ್ದರಿಂದ ಗೋಮಕವಿಯ ಕವಿತೆಗಳು ಪ್ರಖ್ಯಾತಿ ಹೊಂದಿ ಸಿರಸಂಗಿ ಪ್ರದೇಶದಲ್ಲಿ ಹರಡಿರಬಹುದು. ಅಥವಾ ಗೋಮಕವಿಯೇ ಆ ಶಾಸನವನ್ನು ರಚಿಸಿರಬಹುದು ಎಂಬುದು. ಆದರೆ ಆ ಶಾಸನವನ್ನು ಸಜ್ಜನತಿಲಕನೆಂಬುವನು ರಚಿಸಿದ್ದಾನೆ. ಶಾಸನಗಳಲ್ಲಿ ಈ ತೆರೆನ ಸಾಮ್ಯ ಅಲ್ಲಲ್ಲಿ ಕಂಡುಬರುವುದರಿಂದ ಸಜ್ಜನತಿಲಕ ಮತ್ತು ಗೋಮಕವಿ ಒಬ್ಬನೇ ಇರಬಹುದೆಂದು ಮಲ್ಲಾರಿಯವರ ಊಹೆಗೆ ಪುಷ್ಠಿಸಾಲದು.

**ನಾಗದೇವ (ಕ್ರಿ.ಶ.೧೧೮೦):**

ಮೈಸೂರು ಜಿಲ್ಲೆಯ, ತಿ.ನರಸಿಪುರ ತಾಲೂಕಿನ, ತುಂಬಲ ಗ್ರಾಮದ ಶಾಸನವನ್ನು[೯೪] ಹೆಗ್ಗಡೆ ಬಮ್ಮದೇವನ ಅಳಿಯ 'ನಾಗದೇವ' ಶಾಸನಕವಿ ಈ ಶಾಸನವನ್ನು ಬರೆದಿದ್ದಾನೆ. ಹೊಯ್ಸಳ ವೀರಬಲ್ಲಾಳದೇವನು ಶ್ರೀಮದ್ರಾಜಧಾನಿ ದೋರಸಮುದ್ರದ ನೆಲೆವೀಡಿನಿಂದ ಆಳುತ್ತಿದ್ದಾಗ, 'ತಿರುಮಕೂಡಲ ಅಗಸ್ತ್ಯೇಶ್ವರದೇವರ ದಿವ್ಯಾಂಗಭೋಗ ನಿವೇಧ್ಯಕ್ಕಾಗಿ ಎಡೆತೊರೆನಾಡ ತುಂಬಲ' ಆ ತುಂಬಲದ ಕಾಲುಹಳ್ಳಿ ಸಬ್ರಮಾಣಿಯಹಳ್ಳಿ, ಸೆಟ್ಟಿಗವುಡನಹಳ್ಳಿ, ಬಾಚಗವುಡನಹಳ್ಳಿ ಇನ್ತೀ ಹಳ್ಳಿಗಳೊಳಗಾದ ಚತುಸ್ಸೀಮೆಯ ಭೂಮಿಯನ್ನು ಆ ಸ್ಥಾನದ ಸ್ಥಾನಿಕ ಪಿಚ್ಚಜೀಯರ ಮಗ ಅಘತಿಜೀಯರ್ಗ್ಗೆ ಸರ್ವನಮಸ್ಯ ದತ್ತಿಯಾಗಿ ಶ್ರೀ ವೀರಬಲ್ಲಾಳದೇವರು ಧಾರಾಪೂರ್ವಕವಾಗಿ ಕೊಟ್ಟ ವಿವರಗಳು ಈ ಶಾಸನದಲ್ಲಿದೆ.

**ಬಲ್ಲಾಳ ಭೂಪನ ವರ್ಣನೆ :**

**ತತ್ತನೆಯಂ ಯಾದವವಂಶೋತ್ತಮನವುದಾತ್ತಕೀರ್ತಿ ಸಾಹಸಧನನು**
**ದ್ವೃತ್ತವಿರೋಧಿನೃಪಾಳಕಮತ್ತದ್ವಿಪಸಿಂಹನೆನಿಸಿದಂ ನರಸಿಂಹ ಆತನ**
**ತನಯನತಿಪ್ರಖ್ಯಾತನುದಾರಂ ಸಮಸ್ತಲೋಕಾಧಾರಂ ನೀತಿವಿದನೆಂದೊಡುಪಮಾ**
**ತೀತಂ ಬಲ್ಲಾಳಭೂಪ ಸಮರಾಟೋಪಂ ॥**

**ರಾಮದೇವ (ಕ್ರಿ.ಶ.೧೧೮೦)**

ಶಿವಮೊಗ್ಗ ಜಿಲ್ಲೆಯ, ಹೊನ್ನಾಳಿ ತಾಲೂಕಿನ, ಬೆಳಗುತ್ತಿ ಗ್ರಾಮದಲ್ಲಿರುವ ಸಿದ್ದೇಶ್ವರ ದೇವಾಲಯದ ಹಿಂದೆ ನೆಟ್ಟಿರುವ ಒಂದು ಶಾಸನವನ್ನು[೯೫] ಅದೇ ತಾಲೂಕಿನ ಚಿಕ್ಕಯೆರೆಹಳ್ಳಿ ಗ್ರಾಮದಲ್ಲಿ ರಾಮೇಶ್ವರದೇವಾಲಯದ ಪ್ರಕಾರದಲ್ಲಿರುವ ಶಾಸನವೊಂದನ್ನು[೯೬] ರಚಿಸಿದನೆಂದು ತಿಳಿದುಬರುತ್ತದೆ. ಮೊದಲನೆಯ ಶಾಸನದಲ್ಲಿ ಕವಿಯ ಹೆಸರು ಪೂರ್ಣವಾಗಿ ದೊರೆಯುವುದಿಲ್ಲವಾದರೂ ಎರಡನೆಯ ಶಾಸನದಲ್ಲಿ ದೊರೆಯುವ ಆಧಾರದ ಮೇಲೆ ಎರಡೂ ಶಾಸನಗಳ ಕರ್ತೃವು ಒಬ್ಬನೇ ಎಂದು ನಿರ್ಧರಿಸಬಹುದು. ಕವಿಯ ಬಗ್ಗೆ ತಿಳಿಸುವ ಕಂದಪದ್ಯ ಹೀಗಿದೆ.

**ವಿರಚಿಸಿದನೊಪ್ಪ ಲಕ್ಷ್ಮೀ**
**ಧರತನಯಂ ರಾಮದೇವನೀ ಶಾಸನಮಂ**
**ಬರೆದಂ ಪದುಮರಸಂ ಕಂ**
**ಡರಿಸಿದನಿದನತ್ತಿಯೋಜನೂರ್ಜಿತವಾಗಲ್ ॥**

ಕವಿಯ ಬಗ್ಗೆ ಆತ ಲಕ್ಷ್ಮೀಧರನ ಮಗನೆಂಬ ಅಂಶಬಿಟ್ಟು ಹೆಚ್ಚಿನ ವಿವರಗಳೇನೂ ದೊರೆಯುವುದಿಲ್ಲ. ಬಿಜಾಪುರದ ಶಾಸನವೊಂದರಲ್ಲಿ[೭] ರಾಮದೇವನೆಂಬ ಶಾಸನಕವಿ ಕಾಣಬರುತ್ತಾನೆ. ಈತ ಪ್ರಸ್ತುತ ಶಾಸನ ಕರ್ತೃವಿನಿಂದ ಬೇರೆಯೇ ಎಂದು ತಿಳಿಯಲು ಅವಕಾಶವಿದೆ.

ಮೊದಲನೆಯ ಶಾಸನ ಕಲಚುರಿ ಸಂಕಮದೇವನ ಕಾಲದ್ದು ಇದರ ಕಾಲ ಕ್ರಿ.ಶ.೧೧೮೦ ಈ ಕಾಲದಲ್ಲಿ ಸಂಕರಾಸಿ ಪಂಡಿತನೆಂಬುವನ ಧರ್ಮೋಪದೇಶ ಕೇಳಿ ಮೇಲಾಳ್ಕೆಯ ಮಹದೇವನಾಯಕ ಮತ್ತು ಇತರ ಅನೇಕರು ದಾನಗಳನ್ನು ನೀಡಿದ ವಿಷಯ ಈ ಶಾಸನದ ಸಾರಾಂಶ.

ಎರಡನೇ ಶಾಸನ ಆಹವಮಲ್ಲನ ಆಳ್ವಿಕೆಗೆ ಸೇರಿದೆ. ಇಲ್ಲಿ ಹೇಳಿರುವ ತೇದಿ ವಿವರ ಕ್ರಿ.ಶ.೧೨೦೮ಕ್ಕೆ ಸರಿಹೊಂದುತ್ತದೆ. ಬೆಳಗುತ್ತಿಯ ಸಿಂಧಸಾಮಂತ ಈಶ್ವರ ಭೂಪನ ಕೈಕೆಳಗೆ ಅಧಿಕಾರಿಯಾಗಿದ್ದ ನಾಡಪ್ರಭು ಹತ್ತಿಯೂರ ಕೇತಗಾವುಂಡನು ತನ್ನ ಬಂಧುಗಳೊಡಗೂಡಿ ರಾಮನಾಥದೇವರ ಪೂಜೆ ಪುರಸ್ಕಾರಗಳಿಗೆ ದತ್ತಿ ಬಿಟ್ಟದ್ದನ್ನು ಶಾಸನದಲ್ಲಿ ಹೇಳಿದೆ. ಇತರ ಕೆಲವರೂ ದಾನ ನೀಡಿದುದರ ಉಲ್ಲೇಖವಿದೆ. ಬೆಳಗುತ್ತಿ ಸಿಂಧರಸನ ಹಾಗೂ ದಾನಿ ಕೇತಗಾವುಂಡನ ವಂಶಾವಳಿಯನ್ನು ಕೊಟ್ಟಿದೆ.

ಶಾಸನದ ಭಾಷೆ ಸಂಸ್ಕೃತ ಹಾಗೂ ಕನ್ನಡ, ಶಾಸನಗಳ ಬಂಧದಿಂದ ಈತ ಪ್ರೌಢಕವಿಯಾಗಿದ್ದನೆನ್ನಬಹುದು. ಶೈಲಿ ಮನೋಹರ, ಸುಲಲಿತವಾಗಿದೆ. ತನ್ನ ರಚನೆಯಲ್ಲಿ ಶ್ಲೋಕವಲ್ಲದೆ ಶಾರ್ದೂಲವಿಕ್ರೀಡಿತ, ಮತ್ತೇಭ ವಿಕ್ರೀಡಿತ, ಮಹಾಸ್ರಗ್ಧರೆ, ಉತ್ಪಲ, ಚಂಪಕ, ವೃತ್ತಗಳನ್ನು ಕಂದವನ್ನೂ ಬಳಸಿದ್ದಾರೆ.

**ಕವಿಯ ಸಂಸ್ಕೃತಭೂಯಿಷ್ಠ ಶೈಲಿಗೆ ಸಮುದ್ರ ವರ್ಣನೆ :**

> **ಪರಿದಾವನ್ಮತ್ಸ್ಯಪುಚ್ಛಾಹತಮಕರರಾಸ್ಫಾಳನಾಬೀಳನಕ್ರ**
> **ಸ್ಫುರಿತೋದ್ಯಚ್ಛಿಂಶುಮಾರಕ್ರಮಣಸಮುದಿತೋಚ್ಚಂಡವಾತಾಭಿಘಾತೋ**
> **ದ್ಧುದವೀಚೀಶೀಕಕಾಘಸ್ಥಗಿತ ನಿಖಿಳ ದಿಙ್ಮಂಡಲಂ ರಂಜಿಕುಂ ಭಾ**
> **ಸುರಜಂಬೂದ್ವೀಪಮಂ ಸುತ್ತಿಱಿದಖಿಳಧರಾಭೋಗಭದ್ರಂ ಸಮುದ್ರಂ ॥**

**ಸಿಂಧವಂಶದ ಪಿರಿಯ ಚಟ್ಟರಸನ ಶೌರ್ಯ:**

> **ಅದಟರನಟ್ಟಿ ಮೆಟ್ಟಿ ರಿಪುಬೀರರ ಬಿನ್ನಣಮಂ ಕಳಲ್ಚಿ ಮಿೂ**
> **ಱಿದ ಸುಭಟರ್ಕಳಂ ಪರಿಯೆ ಪೊಯ್ದಿದಿರಾಂಪರನಿಕ್ಕಿ ಖಡ್ಗದಂ**
> **ಡದಿನುಱಿದಾಜಿಯೊಳ್ ವಿಜಯಲಕ್ಷ್ಮಿಗಧೀಶ್ವರನಾದುದಾತ್ತ ಶೌ**
> **ರ್ಯದ ಕಣೆಯೆಂಬಿನಂ ಪಿರಿಯ ಚಟ್ಟರಸಂ ಪೆಸರ್ವೆತ್ತನುರ್ವಿಯೊಳ್ ॥**

**ಬೊಪ್ಪಣ ಪಂಡಿತ (ಕ್ರಿ.ಶ.೧೧೮೦)**

ಶ್ರವಣಬೆಳಗೊಳದ ಗೊಮ್ಮಟೇಶ್ವರ ಸ್ವಾಮಿಯ ದ್ವಾರಪಾಲಕರ ಬಾಗಿಲ ಎಡಗಡೆ ನಿಲ್ಲಿಸಿರುವ ಶಾಸನವನ್ನು[೬೮] ಬೊಪ್ಪಣ ಪಂಡಿತ ಕವಿಯು ರಚಿಸಿದನೆಂದು ತಿಳಿದುಬರುತ್ತದೆ. ಈ ಶಾಸನವು ಬೊಪ್ಪಣನ ಗೊಮ್ಮಟ ಜಿನಸ್ತುತಿ ಎಂದೇ ಪ್ರಸಿದ್ಧವಾಗಿದೆ. ಇದನ್ನು ಪುಟ್ಟ ಚಂಪೂಕಾವ್ಯವೆಂದೂ ಕರೆಯುತ್ತಾರೆ. ಇಡೀ ಕಾವ್ಯದಲ್ಲಿ ಗೊಮ್ಮಟನ ಪ್ರಶಸ್ತಿಯನ್ನು ಮಾಡಲಾಗಿದೆ. ಹಾಗೂ ಕವಿ ಇದನ್ನು 'ಗೊಮ್ಮಟ ಜಿನೇಂದ್ರ ಗುಣಸ್ತವ ಶಾಸನ' ಎಂದು ಕರೆದಿದ್ದಾನೆ. ೩೨ ಪದ್ಯಗಳಿಂದ ಕೂಡಿದ ಈ ಶಾಸನದ ಕಾಲವನ್ನು ವಿದ್ವಾಂಸರು ಕ್ರಿ.ಶ.೧೧೮೦ ಎಂದು ಗುರ್ತಿಸಿದ್ದಾರೆ.

ಬೊಪ್ಪಣ ಕವಿಗೆ 'ಕನ್ನಡಗವಿಬಪ್ಪ' 'ಸುಜನೋತ್ತಂಸ' 'ಸುಕವಿಸಮಾಜನುತ' 'ವಿದ್ಯಾಜಿತವೃಜಿನ' ಎಂಬ ಬಿರುದುಗಳಿದ್ದವೆಂದು ಈ ಶಾಸನದಿಂದ ತಿಳಿದುಬರುತ್ತದೆ. ಇಷ್ಟೆಲ್ಲಾ ಮಹತ್ವಪೂರ್ಣ ಬಿರುದನ್ನು ಪಡೆದಿರಬೇಕಾದರೆ ಖಂಡಿತವಾಗಿಯೂ ಕನ್ನಡ ಕಾವ್ಯಗಳನ್ನು ಬರೆದಿದ್ದಾನೆ. ಆದರೆ ಅವು ಯಾವುವೂ ಉಪಲಬ್ಧವಾಗಿಲ್ಲ, 'ಸುಜನೋತ್ತಂಸ' ಎಂಬ ತನ್ನ ಪ್ರಶಸ್ತಿಯ ಅರ್ಥ 'ಸುಜನರಾದ ಭವ್ಯರೇ ತನಗೆ ಉತ್ತಂಸವಾಗಿದ್ದವರು ಎಂದೇ ಹೊರತು, ಸುಜನರಿಗೆ ತಾನು ಉತ್ತಂಸನಾದವನಲ್ಲ, ಎಂದು ತಿಳಿಸಿರುವಲ್ಲಿ ಕವಿಯ ವಿನಯಶೀಲತೆ ವ್ಯಕ್ತವಾಗಿದೆ.

ತನ್ನ ಗುರು ಸೈದ್ಧಾಂತಿಕ ಚಕ್ರೇಶ್ವರನಾದ ನಯಕೀರ್ತಿಯತಿಯ ಶಿಷ್ಯ ಬಾಳಚಂದ್ರ ಮುನೀಂದ್ರರ ಆದೇಶದಂತೆ ಈ ಶಾಸನ ಕಾವ್ಯವನ್ನು ಬರೆದನೆಂದು ಕವಿ ಹೇಳಿಕೊಂಡಿದ್ದಾನೆ. ಪುರುಸೂನು ಬಾಹುಬಲಿಯ ವರ್ಣನೆ, ಆತನ ರೂಪಿಗೆ ಸಮನಾದ ೫೨೫ ಬಿಲ್ಲಳತೆಯ ಪ್ರತಿಕೃತಿಯನ್ನು ಭರತನು ಪೌದನಪುರದಲ್ಲಿ ಮಾಡಿಸಿದ ವಿಷಯ, ಅಂತಹುದೇ ಮೂರ್ತಿಯನ್ನು ಚಾವುಂಡರಾಯನು ಶ್ರವಣಬೆಳಗೊಳದಲ್ಲಿ ಮಾಡಿಸಿದ ಸಂಗತಿ ಬಾಗಡೆಯ ರುದ್ರನಿಂದ ಅದರ ಪ್ರತಿಷ್ಠೆಯಾದ ಮಾತು ಗೊಮ್ಮಟೇಶ್ವರನ ವರ್ಣನ–ಸ್ತುತಿ–ಮಹಿಮೆ ಈ ಚಿಕ್ಕ ಕೃತಿಯು ಒಳಗೊಂಡಿದೆ.

**ಮನದಿಂ ನುಡಿಯಿಂ ತನುವಿನಂ**
**ದೆನಸುಂ ಮುನ್ನೆಱಿಪಿದಘಮನಲೞಿಪೆನೆಂಬೀ**
**ಮನದಿಂದಮೊಸೆದು ಗೊಮ್ಮಟ**
**ಜಿನನಂ ಸ್ತುತಿಯಿಸಿದನಿಂತು ಸುಜನೋತ್ತಂಸಂ ॥**

ಸುಜನರ್ಭಿವ್ಯರೆ ತನಗವ
ರಜಪ್ರಮುತ್ತಂಸಮಪ್ಪ ಪುರುಳಿಂ ಬೊಪ್ಪಂ
ಸುಜನೋತ್ತಂಸನೆನಿಪ್ಪಂ
ಸುಜನರ್ಗುತ್ತಂಸಮೆಂಬ ಪುರುಳಿಂದೆನಿಸಂ॥

ಈ ಜಿನನುತಿಶಾಸನಮಂ
ಶ್ರೀ ಜಿನಶಾಸನವಿಂದಂ ವಿನಿರ್ಮಿಸಿದಂ ವಿ
ದ್ಯಾಜಿತವೃಜಿನಂ ಸುಕವಿಸ
ಮಾಜನುತಂ ವಿಶದಕೀರ್ತಿ ಸುಜನೋತ್ತಂಸಂ॥

ವರಸೈದ್ಧಾಂತಿಕ ಚಕ್ರೇ
ಶ್ವರ ನಯಕೀರ್ತಿವ್ರತಿಂದಶಿಷ್ಯಂ ನಿಜಚಿ
ತ್ತರಿಣತನಧ್ಯಾತ್ಮಕಳಾ
ಧರನು ಜ್ವಳಕೀರ್ತಿ ಬಾಳಚಂದ್ರಮುನೀಂದ್ರಂ॥
'ತನ್ಮುನಿನಿಯೋಗದಿಂ'

ಇದು ಇಡೀ ಶಾಸನ ಕಾವ್ಯದಲ್ಲಿ ವ್ಯಕ್ತಗೊಂಡ ಚಿಕ್ಕ ಗದ್ಯ ಇದನ್ನು ಹೊರತುಪಡಿಸಿ ಎಲ್ಲವೂ ಪದ್ಯಭಾಗವೇ ಆಗಿದೆ.

ಶಾಸನದ ಕೊನೆಯ ವೃತ್ತ ಪದ್ಯ ಹೀಗಿದೆ:

ಪೊಡವಿಗೆ ಸಂದ ಗೊಮ್ಮಟಜಿನೇಂದ್ರಗುಣಸ್ತವ ಶಾಸನಕ್ಕೆ ಕ
ನ್ನಡಗವಿಬಪ್ಪನೆಂದೆನಿಪ ಬೊಪ್ಪಣಪಂಡಿತನೊಲ್ದು ಪೇಟ್ದಿವಂ
ಕಡೆಯಿಸಿದಂ ಬಲಂಕವಡಮಯ್ಯನ ದೇವಣನಟ್ಟೆಯಿಂದೆ ಬಾ
ಗಡೆಗೆಯ ರುದ್ರನಾದರದೆ ಮಾಡಿಸಿದಂ ವಿಳಸತ್ಪ್ರತಿಷ್ಠೆಯಂ॥

**ಉದಯಕಲ್ಪ (ಕ್ರಿ.ಶ.೧೧೮೧)**

ಅವಿಭಜಿತ ಧಾರವಾಡ ಜಿಲ್ಲೆಯ, ಹಾವೇರಿ ತಾಲೂಕಿನ, ಹರಳಹಳ್ಳಿ ಶಾಸನವನ್ನು[೯] ಶಾಸನಕವಿ ಉದಯಕಲ್ಪ ಒಂದನೂರ ಹನ್ನೆರಡು ಸಾಲುಗಳುಳ್ಳ ಸುದೀರ್ಘವಾದ ಶಾಸನಕಾವ್ಯವೊಂದನ್ನು ರಚಿಸಿದ್ದಾನೆ. ಕವಿಯ ಹೆಸರು ಕಾವ್ಯದ ಈ ಕೊನೆಯ ಪದ್ಯದಲ್ಲಿದೆ. ಈ ಶಾನದ ಕಾಲ ಕ್ರಿ.ಶ.೧೧೮೧.

ಕಲ್ಯಾಣಶಕ್ತಿಯತಿಪತಿ
ಕಲ್ಯಾಣಶರೀರಿಯಾಗಿ ಸುಖಮಿರ್ಕೆ ಯಶಃ
ಕಲ್ಯಾಣಸ್ತುತಿಗಮುದಯ
ಕಲ್ಪಂಗೆ ಕವೀಶ್ವರಂಗೆ ಸಮನಿಕೆ ಸಂತತಂ॥

ಗುತ್ತ ವಂಶದ ಜೋಯಿದೇವ, ಸೋಮನಾಥ, ವಿಕ್ರಮೇಶ್ವರ ಮತ್ತು ಗುತ್ತೇಶ್ವರ ದೇವಾಲಯಗಳ ಜೀರ್ಣೋದ್ಧಾರ ಮುಂತಾದ್ದಕ್ಕೆಂದು, ದತ್ತಿಗಳನ್ನು ಕೊಟ್ಟು ರಾಜಗುರು ಕಲ್ಯಾಣಶಕ್ತಿ ದೇವರಿಗೆ ಧಾರಾಪೂರ್ವಕವಾಗಿ ಒಪ್ಪಿಸಿದನೆಂದು ಹೇಳುವುದು ಶಾಸನದ ಉದ್ದೇಶ. ಆದರೆ ಪೃಥ್ವಿಯಿಂದ ಹಿಡಿದು ಎಲ್ಲ ಸ್ಥಳಗಳು ಆಳುವ ಅರಸರು, ಅವರ ಮಾಂಡಲಿಕರು, ಧರ್ಮಗುರುಗಳು. ಇವೆಲ್ಲ ಕವಿಯ ಕಾವ್ಯಕ್ಕೆ ವಸ್ತುವಾಗಿದ್ದಾರೆ. ಕೆಲವೆಡೆಗಳಲ್ಲಿ ವರ್ಣನೆ ಸಾಂಪ್ರದಾಯಿಕವಾಗಿದ್ದರೂ; ಇನ್ನು ಕೆಲವೆಡೆಗಳಲ್ಲಿ ಕವಿ ನಿಜವಾದ ತನ್ನ ಸಾಮರ್ಥ್ಯವನ್ನು ತೋರಿಸಿದ್ದಾನೆ. ಪ್ರಾರಂಭದಲ್ಲಿ ಮಧ್ಯದಲ್ಲಿ ಎರಡು ಮೂರು ಸಂಸ್ಕೃತ ಶ್ಲೋಕಗಳನ್ನು ಸೇರಿಸಿದ್ದಾನೆ. ಶಾಸನಗಬ್ಬದ ಕೆಲವು ಪದ್ಯಗಳು ಹೀಗಿವೆ.

ಗುತ್ತ ವಿಕ್ರಮಾದಿತ್ಯನಿಗೆ ಕವಿ ರಕ್ಷೆಯನ್ನು ಕೋರುತ್ತಾನೆ.:

ಶ್ರೀವರನೊಲ್ದುರಂಗಬಲಿಯಂ ಪದರಂಗದೊಳಾಗುಮಾಡೆ ನೇ
ತ್ರಾವೃತರೋಚಿಯಿಂ ಪದಸಖಿಪ್ರತಿಬಿಂಬಿತ ರೂಪಶೋಭೆಸ
ಥ್ಭಾವದೆ ವಾಮನಂಬೊಲಿರೆ ಭೂವಧುವೆತ್ತನದಾವನಿಂದವಂ
ದಾ ವಿಭು ವಿಕ್ರಮೇಶನೊಲವಿಂ ಪರಿಪಾಳಿಕೆ ವಿಕ್ರಮಾರ್ಕ್ಕನಂ ॥

**ಭೂಲೋಕ ವರ್ಣನೆ:**

ಭುವನಚತುರ್ದ್ದಶ ಗಿರಿಶನಾಜ್ಞೆಯಿನುದ್ಭವಿಪಂದು ಮಾಡಿ ಭೂ
ಭುವನಮದೆನ್ತನತ್ತಿಱವು ಲೋಕದ ಲೌಕಿಕರಿಲ್ಲಿ ಧರ್ಮ ಕ
ರ್ಮ್ಮವನೆಸಗಲ್ಬಳಿಕ್ಕೆಸಗಿದಂತುಟನೆಯ್ದುವರೆಂದೊಡಿನ್ತು ವಂ
ದ್ಯವೆ ದಿವಮೆಂಬಿನಮ್ಮೆಱೆಗುಮುರ್ಬ್ಬರೆ ಯುರ್ಬ್ಬರೆಯಾಗದಾಗಳುಂ॥

**ಲವಣಸಮುದ್ರ :**

ಹೊಸೆದೆಂನಂ ನೋಳ್ಕೆ ದೇವಾಸುರತತಿ ಮಕರಂ ಕಂತುಲಕ್ಷ್ಮಕ್ಕೆ ನೀರ್ಮ್ಮಾ
ನಸೆಯನ್ನಾರಾಯಣೋರಸ್ಥಳಕೆ ಜಳಗಜಂ ದೇವನಾಥಂಗೆ ಶಂಖ
ಪ್ರಸರಂ ಶ್ರೀವಿಷ್ಣುಹಸ್ತಕ್ಕೊದವಿದ ನೊರೆ ದೇವಬ್ರಜಾಸ್ವಾದನಕ್ಕಂ
ದೆಸೆಮಂತೀವಿರ್ದ್ದಮೆಂಬನ್ತೆಸೆದು ಲವಣವಾರಾಸಿ ಭೋರೆಂಬುದಿಂಬಿಂ॥

**ಜಂಬೂದ್ವೀಪ ವರ್ಣನೆ:**

ಅಂಬೂಧಿ ತಿಳಿಗೊಳನದರೊ
ಳ್ಜಂಬೂದ್ವೀಪಮೆ ಸರೋಜಮುಗಕುಳದಡಮಾ
ಜಂಬೂನದಾದ್ರಿ ಕರ್ಣ್ಣಿಕೆ
ಯೆಂಬಿನವಿಂಬಾಯ್ತು ಸಿರಿಗೆ ಮೆಯ್ಸಿರಿಯಿಂದಂ॥

ಕುಂತಳ ದೇಶವನ್ನು ಚಾಳುಕ್ಯರಾಳುತ್ತಿದ್ದರು. ಅವರ ನಂತರ ಕಲಚುರಿಗಳು ಅದಕ್ಕಧಿಪತಿಗಳಾದರು. ಕವಿ ಅದನ್ನು ಹೀಗೆ ಬಣ್ಣಿಸಿದ್ದಾನೆ.

ಕುಂತಳದೇಶದೊಳ್ಮಿಸುಪ ಕೀರ್ತಿಯೆ ಹೂಹೆಱೆಯಾಗೆ ಮಧ್ಯ ಸೀ
ಮಂತ ಸುಮಾರ್ಗ್ಗಮಾಗೆ ನಿಜದಿಗ್ವಿಜಯೋದ್ಗತಿ ವಿಕ್ರಮಪ್ರಭಾ
ವಂ ತನಿಗೆಂಪು ಸೊಂಪೆಸೆವ ಸೆಂದುರದಂದಮದಾಗೆ ನೋಡ ಭೂ
ಕಾಂತೆಗೆ ಮೆಚ್ಚುವೆತ್ತ ಮೊಗವಚ್ಚಮನಾಗಿಸಿದಾ ಚಳುಕ್ಯರೊಳ್ ॥

ಕಳಚುರಿ ಆಹವಮಲ್ಲನ ಶೌರ್ಯ:

ದೆಸೆಗಳನುಟ್ಟುಕೊಂಡು ದೆಸೆಗೆಟ್ಟರಿಸಂತತಿ ನಾಣಪುತ್ತಿನಿಂ
ಮುಸುಕಿ ಪೊದಳ್ದ ಪುತ್ತನಭಿವಾಂಛಿಸಿ ಮೂಡಿ ಮುಳುಂಕಿ ಜೀವನ
ಪ್ರಸರದೊಳಿಲ್ಲ ಜೀವನಮದೆಂದು ಕರಂ ಕರಿದಾದ ಭೀತಿಯಂ
ವಿಸಸನದೊಳ್ಬೆಳರ್ಚೆ ನಗುತೀಕ್ಷಿಪನಾಹವಮಲ್ಲ ಭೂಭುಜಂ॥

ಗುತ್ತ ವಿಕ್ರಮಾದಿತ್ಯನ ಹಿರಿಮೆ:

ಎನಿತಂದಾ ವಿಕ್ರಮಾದಿತ್ಯನ ವಿತರಣವೀ ವಿಕ್ರಮಾದಿತ್ಯನೊಳ್ದ
ಲ್ಪುನರುಕ್ತಂ ಬಂಣಿಪಾಗಳ್ಬಿನದದೆಸಕಮಂ ಪೇಳ್ವೊಡಿಂತೀ ಜಗಕ್ಕ
ತ್ಯನುಭೂತಂ ನೀತಿಯಂ ವರ್ತ್ತಿಪುದನುಸಿರ್ವ್ವಡಾರ್ಷ್ಯಾಗಮಂ ಸಾಲ್ಗುಮೀ ವ
ರ್ಣನಕಾವ್ಯಂ ಪೇಳ್ವೆವೆಂದಿ ಕವಿವಿತತಿ ಕೃಪಾದಾನವಂ ಬೇಡಿ ಬಾಳ್ಗುಂ॥

ಗುತ್ತ ವಿಕ್ರಮಾದಿತ್ಯನ ಮಗ ಜೋಮನೃಪ:

ವಿನಯದೆ ನಾಂಟಿ ವಿದ್ಯೆಗಳಿನೆಯ್ದೆ ತಳಿರ್ತ್ತು ವಿವೇಕಕೋಟಿಯಿಂ
ಕೊನೆತು ವಿಳಾಸದಿಂ ನನೆತು ವಿಕ್ರಮದಿಂದೆ ಮುಗುಳ್ತು ನೀತಿವ
ರ್ತ್ತನದೊಳೆ ಕಾಯ್ತು ರಾಜ್ಯವನದೊಳ್ಸಫಳಾತ್ಮಕಮಾಯ್ತು ಪುಣ್ಯಮೆಂ
ದನಿಮಿಷಭೂಜಮೆಂದೊಡೆಣೆ ಯಾರೊ ಚರಿತ್ರದೆ ಜೋಯಿದೇವನೊಳ್॥

ಎರಡನೇ ಜೋಮನ ಆಸ್ಥಾನದ ವರ್ಣನೆ :

ವನಿತೆಯರಿರ್ದ್ದರೋಲಗಿಸುತಂ ನಗೆಗಣ್ಣೆಡುವುರ್ಬ್ಬು ಪೀವರ
ಸ್ತನವಳಕಂ ಬಳಲ್ದಮುಡಿ ಮೆಲ್ನುಡಿಯೊಪ್ಪಿರೆ ಕಾಮನಂಬು ಕಾ
ಮನ ಧನು ಕಾಮನಿರ್ಪ ಗಿರಿ ಕಾಮನ ಹೇರಣಿ ಕಾಮಪಾಶಮಾ
ನೆನೆಯಿಪ ಕಾಮಮಾತ್ರಮೆನೆ ಜೋಮನೃಪಾಳ ಸಭಾನ್ತರಾಳದೊಳ್॥
ರಸವೊಸರ್ವಂತೆ ಪಾಡುತಿರೆ ಪಾಡುವವರ್ಮನಮೆಂಬ ಕೋಕಿ ನ
ರ್ತ್ತಿಸೆ ಘನನಾದಮಂ ಮೆಱೆಯೆ ವಾದಕರಿಂದ್ರಧನುಃಪ್ರಭಾವಮಂ ।
ಪಸರಿಸೆ ಪಚ್ಚವಾಡುತಿರೆ ಜಂತ್ರದ ಮಿಂಚಿನ ಪೆಂಣಿದೆಂಬಿನಂ
ಮಸಗುವ ಪಾತ್ರಮೊಪ್ಪಿದುದು ಜೋಮನ ಮುನ್ತೆ ಸುಖಾಂಬುದಾಗಮಂ ॥

ರಾಜಧಾನಿ ಗುತ್ತಿವೊಳನ ಸೌಂದರ್ಯ, ಜೋಮದೇವನ, ಧರ್ಮಪರಾಯಣತೆ, ಆತನ ಮಂತ್ರಿ ಸುಸಂಗ, ಹೀಗೆ ಕವಿ ಬಣ್ಣಿಸಿದ ವಸ್ತುಗಳು ಇನ್ನೂ ಎಷ್ಟೋ ಇವೆ. ಆದರೂ ಅವನಿಗೆ ತೃಪ್ತಿಯಿಲ್ಲ, ಎಂತಲೇ ಹೇಳುತ್ತದೆ 'ಆ ಪ್ರಸಂಗಮತಿವಿಸ್ತರ ವಿಂತೀ ಸ್ವಲ್ಪ ಕಾವ್ಯ ರಚನೆಗಮಬಿತಂ' ಎಂದು.

**ಲಕ್ಷ್ಮೀಧರ (ಕ್ರಿ.ಶ.೧೧೮೩)**

ಕೊಪ್ಪಳ ಜಿಲ್ಲೆಯ, ಯಲಬುರ್ಗಾ ತಾಲೂಕಿನ, ಕುಕ್ಕನೂರು ಗ್ರಾಮದ ಶಾಸನವನ್ನು ಲಕ್ಷ್ಮೀಧರನು ರಚಿಸಿದ್ದಾನೆ.[೧೦೦] ಕಳಚೂರಿ ವಂಶದಲ್ಲಿ ಕೃಷ್ಣ ಎಂಬ ರಾಜ ಹುಟ್ಟಿದ. ಇವನ ಮಗ ಜೋಗಮ. ಇವನ ಮಗ ಪೆರ್ಮಾಡಿ. ಈತ ಶೂರನಾಗಿದ್ದು, ಎಲ್ಲಾ ದಿಕ್ಕುಗಳಿಗೂ ತನ್ನ ಕೀರ್ತಿ ಪಸರಿಸುವಂತೆ ಮಾಡಿದ್ದ. ಇವನ ಮಗ ಸೋಮ, ಇವನ ಚಿಕ್ಕ ತಮ್ಮ ಸಂಕಮ. ಇವನ ತಮ್ಮ ಆಹವಮಲ್ಲ, ಇವನ ತಮ್ಮ ಸಿಂಘಣದೇವ.

ಸಿಂಘಣದೇವನು ದೈವಭೀರುವಾಗಿದ್ದು ಕುಕ್ಕನೂರು ಜೇಷ್ಠಾದೇವಿಗೆ 'ಬೆಳ್ವೊಲ ೩೦೦'ರಲ್ಲಿದ್ದ ಕುಕ್ಕನೂರನ್ನು ಎಲ್ಲ ರೀತಿಯ ತೆರಿಗೆಗಳಿಂದ ಮುಕ್ತಗೊಳಿಸಿ ರಾಜನಾಗಲೀ ಅಧಿಕಾರಿಯಾಗಲಿ, ಪ್ರವೇಶಿಸದಂತೆ ಊರಿನ ಸಾವಿರ ಮಹಾಜನರ ಕೈಲಿ ಅಧಿಕಾರ ನೀಡುತ್ತಾನೆ. ದಿವಾಕರ ದಂಡನಾಯಕನು ೫ ಮತ್ತರು ಭೂಮಿಯನ್ನು ಕೊಂಡುಕೊಂಡು ದಾನ ಬಿಟ್ಟದ್ದಲ್ಲದೆ ಒಂದು ಮನೆಯನ್ನು ನೀಡುತ್ತಾನೆ.

ಪ್ರಸ್ತುತ ಶಾಸನವು ೮೯ ಸಾಲುಗಳನ್ನು ಒಳಗೊಂಡಿದ್ದು ಶಾಸನ ೮೩-೮೪ನೇ ಸಾಲಿನಲ್ಲಿ ಕವಿಯ ಬಗ್ಗೆ ಉಲ್ಲೇಖವಿದೆ.

> **"ಕೃತಿರಿಯಂ ತ್ರಿಭುವನವಿದ್ಯಾಚಕ್ರವರ್ತ್ತಿನಃ**
> **ಶ್ರೀಮದಾದಿತ್ಯ ದೇವಸ್ಯ ಲಿಖಿತಮಿದಂ**
> **ಪಂಡಿತಲಕ್ಷ್ಮೀಧರೇನ ಉತ್ಕೀರ್ಣಂ**
> **ರಾಜವಿಜ್ಞಾನಿನಾ ಪಂದೆಯೇನ"**. ಎಂದಿದೆ.

**ನಾಗದೇವ ಭಟ್ಟ (ಕ್ರಿ.ಶ.೧೧೮೪)**

ಅವಿಭಜಿತ ಧಾರವಾಡ ಜಿಲ್ಲೆಯ, (ಇಂದಿನ ಗದಗ ಜಿಲ್ಲೆ) ಗದಗ ತಾಲೂಕಿನ, ಡಂಬಳ ಗ್ರಾಮದಲ್ಲಿ ದೊಡ್ಡಬಸಪ್ಪ ದೇವಾಲಯದ ಮುಂದೆ ನಿಂತಿರುವ ಶಾಸನವನ್ನು[೧೦೧] ರಚಿಸಿದ ಈತ ತನ್ನ ಬಗ್ಗೆ ಹೀಗೆ ಹೇಳಿಕೊಳ್ಳುತ್ತಾನೆ.

> **ವರವರದ ಪರಮ ನಿರುಪಮ**
> **ಗಿರಿಜೇಶನ ಚರಣ ಶರಣನೀ ಶಾಸನಮಂ**
> **ವಿರಚಿಸಿ ಬರೆದಂ ಕವಿ ಬ**
> **ಮ್ಮರಸನ ಸುತ ನಾಗದೇವಭಟ್ಟವರಿಷ್ಠಂ ॥**

ಈ ಮೇಲಿನ ಪದ್ಯದಿಂದ ಈತನ ತಂದೆ ಬಮ್ಮರಸನೂ ಕವಿಯಾಗಿದ್ದನೆಂದು ತಿಳಿದುಬರುತ್ತದೆ, ಈ ಶಾಸನದಲ್ಲಿ ಸಂಸ್ಕೃತ-ಕನ್ನಡ ಪದ್ಯಗಳಿಂದ ಮಿಶ್ರಣವಾಗಿರುವುದರಿಂದ ಕವಿಯು ಉಭಯ ಭಾಷಾ ಪ್ರವೀಣನಾಗಿದ್ದನೆನ್ನಬಹುದು. ಈ ಶಾಸನವನ್ನು ರಚನೆ ಮಾಡಿದ್ದು ಮಾತ್ರವಲ್ಲದೆ ಕಲ್ಲಿನ ಮೇಲೆ ಬರೆದವನು ನಾಗದೇವಭಟ್ಟನೇ ಹಾಗಾಗಿ ಉತ್ತಮ ಲಿಪಿಕಾರನೂ ಆಗಿದ್ದ ಎಂಬುದು ವೇದ್ಯವಾಗುವುದು.

ಪ್ರಸ್ತುತ ಶಾಸನ ಕಲ್ಯಾಣ ಚಾಲುಕ್ಯ ಅರಸ ನಾಲ್ವಡಿ ಸೋಮೇಶ್ವರನ ಆಳ್ವಿಕೆಯ ಕಾಲದ್ದಾಗಿದೆ. ಮಹಾಪ್ರಧಾನ, ಸೇನಾಧಿಪತಿ, ತೇಜಿಮಯ್ಯ, ದಂಡನಾಯಕ, ಆತನ ಕೈಕೆಳಗಿನ ಅಧಿಕಾರಿಗಳಾದ ಬಾಕಣದಂಡನಾಯಕ ಹಾಗೂ ರೇವರಸರು, ಸ್ವಯಂಭು ದೇವರ ಸನ್ನಿಧಾನದಲ್ಲಿ ಧರ್ಮವೊಳಲ ಮೈಳಬೇಶ್ವರ ದೇವರಿಗೆ ಸರ್ವಮಾನ್ಯವಾಗಿ ದತ್ತಿ ಬಿಟ್ಟ ತೋಟಗಳ ಹೊರತಾಗಿ, ಉಳಿದೆಲ್ಲ ತೋಟಗಳಿಂದ ಪನ್ನಾಯ ತೆರಿಗೆಯಿಂದ ಬಂದ ಆದಾಯವನ್ನು ಗೋನಸಮುದ್ರದ ಅಗರ್ತೆ, ತೂಂಬು, ಕಲ್ಲುಗೆಲಸ, ಮರಗೆಲಸ, ಮೊದಲಾದ ಕಾರ್ಯಗಳಿಗೆ ದಾನನೀಡಿದ ವಿವರಗಳಿವೆ. ಗ್ರಾಮದ ಷೋಡಶ ಸೆಟ್ಟಿಯರು, ಅಧಿಕಾರಿಗಳು ಮತ್ತು ನಖರರ ಪ್ರತಿಪಾಲನೆಗೆ ಈ ದತ್ತಿಯನ್ನು ಒಪ್ಪಿಸಲಾಯಿತು. ನಖರರೊಂದಿಗೆ ಸೇರಿ ಈ ಷೋಡಶ ಸೆಟ್ಟಿಯರೂ ಕೆಲ ಭೂಮಿ ಕಾಣಿಕೆಗಳನ್ನು ದಾನ ನೀಡಿದ್ದಾರೆ. ಶಾಸನೋಕ್ತ ಧರ್ಮಪುರ ಅಥವಾ ಧರ್ಮವೊಳಲು ಮಾಸವಾಡಿ ನಾಡಿಗೆ ಸೇರಿತ್ತು.

ಚಂಪೂ ಶೈಲಿಯಲ್ಲಿರುವ ಪ್ರಸ್ತುತ ಶಾಸನದಲ್ಲಿ ಕೆಲವು ಪದ್ಯಗಳು ಸಂಸ್ಕೃತದಲ್ಲಿರುವುದರಿಂದ ಕವಿಯೂ ಪ್ರೌಢ ಕವಿಯಾಗಿದ್ದನೆನ್ನಬಹುದು. ಮಹಾಸ್ರಗ್ಧರೆ, ಮತ್ತಭವಿಕ್ರೀಡಿತ, ಉತ್ಪಲಮಾಲೆ, ಚಂಪಕಮಾಲೆ, ಕಂದ ಮೊದಲಾದ ವೃತ್ತಗಳನ್ನು ಬಳಸಿ ಬರೆದಿದ್ದಾನೆ.

**ಚಾಲುಕ್ಯ ಅರಸ ಸೋಮೇಶ್ವರನ ವರ್ಣನೆ :**

**ಕದನದೊಳಣ್ಮಿ ತಮ್ಮೊಳಿದಿರಾಂತ ವೀರರಿಲ್ಲದ ವೀರವೃತ್ತಿ ಪೆ**
**ರ್ಚಿದ ನಿಜರಾಜ್ಯದೊಳ್ ಬಯಸಿ ಬೇಡುವರಿಲ್ಲದುದಾರವೃತ್ತಿ ಲೋ**
**ಕದ ಸಕಳಾಗಮೋಕ್ತಿಗಳ ನೋಡದೆ ಬಲ್ಲ ವಿವೇಕವೃತ್ತಿಗಾ**
**ಸ್ಪದ ಮಹಿಮಾಭಿರಾಮ ನೃಪಸೋಮನ ರಾಜ್ಯವಿಳಾಸ ಪುಜ್ಯಮಾ ॥**

**ತೇಜಿಮಯ್ಯ ದಂಡನಾಯಕನ ಪರಾಕ್ರಮದ ವರ್ಣನೆ :**

**ಭುಜಬಲಗರ್ವದಿಂದೆ ಮಲೆದೊಡ್ಡಿದ ವೈರಿನರೇಂದ್ರಸೇನೆಯಂ**
**ನಿಜಬಳದಿಂದೆ ಕೊಲ್ವನಿದಿರಾನ್ತಡೆ ತಾಗದೆ ಭೀತರಾದ ಭೂ**
**ಭುಜರ ಪರಿಗ್ರಹಪ್ರಜೆಯ ರಕ್ಷಿಸುವ ಪ್ರತಿಪನ್ನಸಾರನುಂ**
**ಭುಜದಳನೇತ್ರ ವೀರಲಕ್ಷ್ಮೀಪತಿ ತೇಜುಗಿ ದಂಡನಾಥನುಂ॥**

**ಭಾಸ್ಕರ (ಕ್ರಿ.ಶ.೧೧೮೬)**

ಆಂಧ್ರಪ್ರದೇಶದ, ಕರ್ನೂರು ಜಿಲ್ಲೆಯ, ಆದೋನಿ ತಾಲೂಕಿನ, ನಂದವರಂ ಗ್ರಾಮದ ಪರ್ವತೇಶ್ವರ ದೇವಾಲಯದ ಒಂದು ಶಾಸನವನ್ನು[೧೦೨] ಭಾಸ್ಕರ ಕವಿಯು ರಚಿಸಿದನೆಂದು ತಿಳಿಯುತ್ತದೆ, ಈ ಶಾಸನದಲ್ಲಿ ಸಂಸ್ಕೃತ ಮತ್ತು ಕನ್ನಡ ಮಿಶ್ರಣವಾಗಿದ್ದು ಕವಿ, ಉಭಯ ಭಾಷಾವಿಶಾರದನಾಗಿದ್ದನೆಂದು ತಿಳಿಯುತ್ತದೆ.

**"ಯೋ ಹರತಿ ಕವಿರ ಶಕ್ತಶ್ಚೋರ ಇವಾರ್ಥ ಪರೇಣ ಕವಿನಾದೃಷ್ಟಂ ।**
**ತಂಹಸತಿ ಸುಕವಿಪದ್ಮಪ್ರಭಾಕರೋ ಭಾಸ್ಕರಃ ಕುಕವಿಮುಖಮುದ್ರಃ ॥**

ಭಾಸ್ಕರ ಕವಿಯು ಅನ್ಯಕವಿಯ ಅರ್ಥವನ್ನು ಕಳ್ಳನಂತೆ ಕಳ್ಳತನ ಮಾಡುವ ಕೈಲಾಗದ ಕವಿಗಳಿಗೆ ಸುಕವಿಗಳೆಂಬ ಕಮಲಗಳಿಗೆ ಸೂರ್ಯನಾಗಿಯೂ; ಕುಕವಿಗಳ ಮುಖಕ್ಕೆ ಬೀಗಮುದ್ರೆಯಾಗಿಯೂ, ಇರುವ ಭಾಸ್ಕರನು ತನ್ನ ಕುರಿತು ಪ್ರಶಂಸಿಸಿಕೊಂಡಿದ್ದಾನೆ. ಇದೇ ಈ ಮೇಲಿನ ಶ್ಲೋಕದ ಅರ್ಥ.

ಕಲ್ಯಾಣ ಚಾಲುಕ್ಯರ ನಾಲ್ಕನೇ ಸೋಮೇಶ್ವರನನ್ನು ಉಲ್ಲೇಖಿಸುವ ಈ ಶಾಸನದ ಕಾಲ ಕ್ರಿ.ಶ.೧೧೮೬. ಮಹಾಪ್ರಧಾನಿ ತೇಜಿಮಯ್ಯ ದಂಡನಾಯಕನ ಕೈಕೆಳಗಿನ ಅಧಿಕಾರಿಗಳಾದ ಬಾಕಣದಂಡನಾಯಕ ಮತ್ತು ದೇವರಸನು ಮೈಳವೇಶ್ವರದೇವರಿಗೆ ದಾನ ನೀಡಿದ ಉಲ್ಲೇಖವಿದೆ. ಅಗ್ರಹಾರ ನಂದಾವುರದ ಶ್ರೀ ಮಲ್ಲಿಕಾರ್ಜುನ ದೇವರಿಗೆ ದಾನ ಮಾಡಿದ ಸಿಂದವಾಡಿ ಸಾಸಿರದ ಮಹಾಪ್ರಚಂಡ ದಂಡನಾಯಕ ಮಾಳಪರಸನ ವರ್ಣನೆ ಹೀಗಿದೆ, :

**ಪವನಪಥದಂತುಪಾಶ್ರಿತ**
**ಕವಿರಾಜನನಂತನಂತೆ ಬಹುಭೋಗದರಂ**
**ದಿವಸಕರನಂತೆ ತೇಜೋ**
**ಭವನಂ ಮಾಳಪಚಮೂಪನೆಸೆವಂ ಧರೆಯೊಳ್ ॥**

ಇಲ್ಲಿ ಶ್ಲೇಷಾಲಂಕಾರಕ್ಕೆ ಬಳಸಿರುವ 'ಕವಿರಾಜ' ಎಂಬ ಪದವು ಭಾಸ್ಕರಕವಿಯ ಬಿರುದು ಆಗಿರಲಿ ಬಿಡಲಿ, ಅದನ್ನು ತಾನು ತನಗನ್ವಯಿಸಿಕೊಂಡೇ ಹೇಳಿರಲು ಸಾಕು ಅರ್ಥಾತ್, ಈ ಭಾಸ್ಕರ ಕವಿಗೆ 'ಸಿಂದವಾಡಿಸಾಸಿರ'ದ ಮಂಡಳೇಶ್ವರ ಮಾಳಪರಸನು ಆಶ್ರಯದಾತನಾಗಿದ್ದಂತೆ ತೀಳಿದುಬರುತ್ತದೆ.

**ಚಾವಣಿ ಪಂಡಿತ (ಕ್ರಿ.ಶ.೧೧೮೬)**

ಹಾಸನ ಜಿಲ್ಲೆಯ, ಚನ್ನರಾಯಪಟ್ಟಣದ ಕೇಶವದೇವಾಲಯದ ಒಂದು ಶಾಸನವನ್ನು[೧೦೩] ಈತನು ರಚಿಸಿದ್ದಾನೆ. ಹೊಯ್ಸಳ ವೀರಬಲ್ಲಾಳ IIನ್ನು ಉಲ್ಲೇಖಿಸುವ ಈ ಶಾಸನದ ಕಾಲ ಕ್ರಿ.ಶ.೧೧೮೬. ಈ ಶಾಸನದಲ್ಲಿ ಸಂಸ್ಕೃತ ಮಿಶ್ರಿತವಾಗಿದ್ದು ಕನ್ನಡ ಗದ್ಯ ಪದ್ಯ ಮಿಶ್ರಣಗಳಾಗಿವೆ. ಬಹಳ ತ್ರುಟಿತವಾದ ಈ ಶಾಸನದಲ್ಲಿ ಒಂದು ಪದ್ಯವನ್ನು ಪೂರ್ಣ ಗುರ್ತಿಸಲು ಸಾಧ್ಯವಿಲ್ಲ, ಈ ಶಾಸನದಲ್ಲಿ ವೀರಬಲ್ಲಾಳನ ಆರೋಗ್ಯ, ಐಶ್ವರ್ಯ ಅಭಿವೃದ್ಧಿಗೆ ಹೊಯ್ಸಳ ಅಧಿಕಾರಿಯೊಬ್ಬ **'ಕೊಳತೂರ'** ಅಗ್ರಹಾರವನ್ನು ಸ್ಥಾಪಿಸಿ ಅಲ್ಲಿನ ರಾಮೇಶ್ವರ ದೇವಾಲಯಕ್ಕೆ ದಾನಕೊಟ್ಟ ವಿವರಗಳಿವೆ.

**ತ್ರಿವಿಕ್ರಮಾಂಕ: (ಕ್ರಿ.ಶ.೧೧೮೭)**

ಹಾಸನ ಜಿಲ್ಲೆಯ, ಅರಸೀಕೆರೆ ತಾಲೂಕಿನ, ಬಾಣಾವರ ಗ್ರಾಮದ ಬಾಣೇಶ್ವರ ದೇವಸ್ಥಾನದ ಬಳಿ ಇರುವ ಶಾಸನವನ್ನು[೧೦೪] ಶಾಸನಕವಿ ತ್ರಿವಿಕ್ರಮಾಂಕನು ರಚಿಸಿದ್ದಾನೆ. ಈ ಶಾಸನ ಕಾಲ ಕ್ರಿ.ಶ.೧೧೮೭.

ಇದೇ ಕವಿಯು ಕ್ರಿ.ಶ.೧೧೮೯ರ ಅರಸೀಕೆರೆಯ ದೊಡ್ಡಕೆರೆಯ ಕೆಳಗೆ ಪಾಳು ದೇವಾಲಯದ ಬಳಿ ಇರುವ ಶಾಸನವನ್ನು[೧೦೫] ಮತ್ತು ಅರಸೀಕೆರೆಯ ಜಿ.ಎಸ್. ಗೌರಮ್ಮ ಪ್ರೌಢಶಾಲೆಯ ಬಳಿ ನಿಂತಿರುವ ಶಾಸನವನ್ನು[೧೦೬], ಕ್ರಿ.ಶ.೧೧೮೯ರಲ್ಲಿ ರಚಿಸಿದ್ದಾನೆ. ಕ್ರಿ.ಶ.೧೧೯೪ ರಲ್ಲಿದ್ದ ಹರಿಹರಸೂರಿ ಎಂಬ ಶಾಸನಕವಿಯು, ಅರಸೀಕೆರೆ ತಾಲೂಕಿನ ಬಮ್ಮನಹಳ್ಳಿ ಶಾಸನದಲ್ಲಿ[೧೦೭] ತ್ರಿವಿಕ್ರಮಾಂಕನನ್ನು 'ಕವೀಶ್ವರ' ಎಂದು ಕರೆದಿದ್ದಾನೆ. ಮತ್ತು ಹರಿಹರಸೂರಿಯ ಶಾಸನಕಾವ್ಯವನ್ನು ತಿದ್ದಿಕೊಟ್ಟನೆಂದು ಹೇಳಿಕೊಂಡಿದೆ. (ತ್ರಿವಿಕ್ರಮ ಕವೀಶ್ವರ ನೂರ್ಜಿತವಾಗಿ ತಿಳ್ದ ತಾಂ ಬರೆದ ನುಪೇತಲ ಲಕ್ಷಣಗಣಂ)

ಇಷ್ಟೆಲ್ಲಾ ಆಧಾರದಿಂದ ತ್ರಿವಿಕ್ರಮಾಂಕ ಅಥವಾ ತ್ರಿವಿಕ್ರಮ ಕವಿಯು ಶಾಸನಕಾವ್ಯ ಬರೆಯುವುದರಲ್ಲಿ ತ್ರಿವಿಕ್ರಮನಾಗಿದ್ದು; ಆ ಕಾಲದ ಪ್ರಖ್ಯಾತ ಕವಿಗಳಲ್ಲಿ ಪ್ರಮುಖನಾದವ ಎನ್ನಬಹುದು.

ಈ ಕವಿ ಬರೆದ ಮೂರು ಶಾಸನಗಳಲ್ಲಿಯೂ ಹೊಯ್ಸಳ ಅರಸ ಇಮ್ಮಡಿ ವೀರಬಲ್ಲಾಳನ ಉಲ್ಲೇಖವಿದ್ದು, ಮೊದಲನೇ ಶಾಸನದಲ್ಲಿ ಕಮ್ಮಟದ 'ಚಟ್ಟಿಸೆಟ್ಟಿ' ಎಂಬಾತ ಆ ವೂರಿನ ಚಟ್ಟೇಶ್ವರ ದೇವಾಲಯವನ್ನು ಕಟ್ಟಿಸಿ ದೇವರ ನೈವೇದ್ಯಾದಿ ಸೇವೆಗಳಿಗೆ ಭೂದಾನ ನೀಡಿದ ಉಲ್ಲೇಖವಿದೆ.

ಎರಡನೇ ಶಾಸನದಲ್ಲಿ ಕಾಳಿಗಾಮುಂಡನೆಂಬುವನು ಅನೇಕ ಪಂಡಿತರ ಸಮ್ಮುಖದಲ್ಲಿ ಮಲ್ಲೇಶ್ವರ ದೇವಾಲಯವನ್ನು ಕಟ್ಟಿಸಿದನೆಂದು ತಿಳಿಯುತ್ತದೆ.

ಮೂರನೇ ಶಾಸನದಲ್ಲಿ ಅರಸ ವೀರಬಲ್ಲಾಳನು ತನ್ನ ಹೆಸರಿನ ವೀರಬಲ್ಲಾಳೇಶ್ವರ ದೇವಾಲಯವನ್ನು ಕಟ್ಟಿಸಿ ಭೂಮಿಯನ್ನು ದಾನ ನೀಡಿದ ಉಲ್ಲೇಖವಿದೆ.

ಈ ಮೂರು ಶಾಸನಗಳು ಅನೇಕ ವೃತ್ತಗಳಿಂದ ಕೂಡಿದ್ದು ಕನ್ನಡ ಸಂಸ್ಕೃತ ಭಾಷೆಗಳಿಂದ ಮಿಶ್ರಣವಾಗಿದೆ. ಒಟ್ಟಾರೆ ತ್ರಿವಿಕ್ರಮ ಕವಿಯು ಹೊಯ್ಸಳ ಅರಸ ಇಮ್ಮಡಿ ವೀರಬಲ್ಲಾಳನ ಆಸ್ಥಾನದಲ್ಲಿ ಶಾಸನಕವಿಯಾಗಿದ್ದು ಪ್ರಖ್ಯಾತಿ ಪಡೆದಿದ್ದಾಗಿ ಹೇಳಬಹುದು.

ಕವಿಯ ಕಾವ್ಯ ಶೈಲಿಗೆ ಒಂದು ಉದಾಹರಣೆ:

**ಮುನಿಸಿಂದರುಣತೆ ಕಡೆಗ**  
**ಣ್ಗೆನಿಸೊದವೆ ವಿರೋಧಿನರ ಪನಪ್ತಾಂಗಂವಿ**  
**ಷ್ಣುನೃಪಾಳಂಗಪ್ಪುವುನೋ**  
**ಡನುಪಮಮವನಳವಿ ಯಿತರರವಿಯೆ ಜಗದೊಳ್ ॥**

**ಮಾರ್ತಂಡದೇವ (ಕ್ರಿ.ಶ.೧೧೮೭)**

ಧಾರವಾಡ ಜಿಲ್ಲೆಯ, ನವಲಗುಂದ ತಾಲೂಕಿನ, ಅಣ್ಣಿಗೇರಿಯ ಒಂದು ಶಾಸನವನ್ನು[೧೦೮] ಮಾರ್ತಂಡದೇವ ಎಂಬ ಕವಿ ರಚಿಸಿದ್ದಾನೆ. ಚಾಲುಕ್ಯರ ನಾಲ್ಕನೇ ಸೋಮೇಶ್ವರನನ್ನು ಉಲ್ಲೇಖಿಸುವ ಈ ಶಾಸನಕಾಲ ಕ್ರಿ.ಶ.೧೧೮೭. ಶಾಸನ ತ್ರುಟಿತವಾಗಿರುವುದರಿಂದ ಉಳಿದ ವಿವರಗಳು ದೊರೆಯುವುದಿಲ್ಲ.

**ಬಾಚಯ್ಯ (ಕ್ರಿ.ಶ.೧೧೮೮)**

ಹಾಸನ ಜಿಲ್ಲೆಯ, ಬೇಲೂರು ತಾಲೂಕಿನ, ಮಾರೇನಹಳ್ಳಿ ಗ್ರಾಮದ ತೋಟವೊಂದರಲ್ಲಿರುವ ಶಾಸನವನ್ನು[೧೦೯] ಬಾಚಯ್ಯ ಕವಿಯು ರಚಿಸಿದ್ದಾನೆ. ಹೊಯ್ಸಳ ಬಲ್ಲಾಳದೇವನನ್ನು ಉಲ್ಲೇಖಿಸುವ ಈ ಶಾಸನದ ಕಾಲ ಕ್ರಿ.ಶ.೧೧೮೮. ಈ ಶಾಸನದಲ್ಲಿ ೧೭ ಪದ್ಯಗಳಿವೆ.

ಈ ಶಾಸನದಲ್ಲಿ ಹೊಯ್ಸಳ ವಂಶ ವರ್ಣನೆ ವೀರಬಲ್ಲಾಳನ ಆಳ್ವಿಕೆಯ ಉಲ್ಲೇಖಗಳ ೧೪ ಪದ್ಯಗಳ ತರುವಾಯ ಶಾಸನ ಮದ್ಯದಲ್ಲಿಯೇ 'ಬಾಚಯ್ಯನು ಪೇಳ್ದ ಪದ್ಯ' ಎಂದು ಬರುತ್ತದೆ. ಮುಂದೆಯೂ ಗದ್ಯದ ಕೊನೆಗೆ ಮೂರು ಪದ್ಯಗಳುಂಟು. ಈ ಮೂರು ಪದ್ಯಗಳು ಮಾತ್ರವೇ ಬಾಚಯ್ಯನವೆಂದು ಕೆಳಗಣ ಅವತರಣಿಕೆಯಿಂದ ಸ್ಪಷ್ಟವಾಗಿ ಗೋಚರಿಸುತ್ತದೆ. ಮೊದಲಿನ ೧೪ ಪದ್ಯಗಳು ಅನ್ಯಕೃತಿಗಳು ಬಹುಶಃ ಬೇರೆ ಶಾಸನದಿಂದ ಎತ್ತಿಕೊಂಡವು ಇರಬೇಕೆಂದು ಮೇವುಂಡಿಯವರು ಅಭಿಪ್ರಾಯಪಡುತ್ತಾರೆ.[೧೧೦]

ಬೆನಕ ಎಂಬುವನ ಪತ್ನಿ ಮಾರವ್ವೆ ಎಂಬಾಕೆ ಕೊಂಡಲಿಯ ಆಶೇಷ ಮಹಾಜನರಿಗೆ ನೀಡಿದ ದಾನವನ್ನು ಕುರಿತು ಈ ಶಾಸನದಲ್ಲಿ ವರ್ಣನೆ ಮಾಡಲಾಗಿದೆ. ಹಾಗೆಯೇ ಈಕೆ ಮತ್ತು ಮಹಾಜನರು ಶಾಂತಲೇಶ್ವರ ದೇವಾಲಯದ ಜೀರ್ಣೋದ್ಧಾರಕ್ಕಾಗಿ ಭೂದಾನವಿತ್ತುದನ್ನು ತಿಳಿಸಲಾಗಿದೆ.

ಕವಿಯ ಕಾವ್ಯ ಶೈಲಿಗೆ ಕಂದಪದ್ಯ ಉದಾಹರಣೆ :

**ಎನೆ ನೆಗಳ್ದಾ ಇವ್ವರ್ಗ್ಗಂ**
**ಜನಯಿಸಿದರ್ಸ್ಸುತರು ನೆಗಳ್ದಂ ಬಲ್ಲಾಳಂ ವಿ**
**ಷ್ಣುನೃಪಾಳಕನು ದಯಾದಿ**
**ತ್ಯನೆಂಬರೆಂಬಿವರು ಮುದಾರ ರಾಹವಧೀರರು.**

**ಜನ್ನ (ಕ್ರಿ.ಶ.೧೧೮೯)**

ಜನ್ನನಿಗಿಂತ ಹಿಂದೆ ಹಲವು ಕವಿಗಳು ಕನ್ನಡ ಶಾಸನಗಳನ್ನು ಅಥವಾ ಶ್ರೇಷ್ಠ ಕಾವ್ಯಗಳನ್ನು ರಚಿಸಿದ್ದಾರೆ. ಆದರೆ ಅವರು ಜನ್ನನ ಹಾಗೆ ಶಾಸನಗಳನ್ನೂ, ಕಾವ್ಯಗಳನ್ನು ರಚಿಸಿದ ಪ್ರೌಢಕವಿಗಳಲ್ಲ. ಬಹುಶಃ ಶಾಸನಕರ್ತರೂ ಪ್ರೌಢಕವಿಗಳೂ ಆದವರಲ್ಲಿ ಜನ್ನನು ಅಗ್ರಗಣ್ಯನೆಂದು ಹೇಳಬಹುದು.

ಆಂಡಯ್ಯ, ಕಮಲಭವ, ಮಧುರ, ಮೊದಲಾದ ಕೆಲವು ಶ್ರೇಷ್ಠ ಕವಿಗಳು ಜನ್ನನನ್ನು ಮನಸಾರೆ ಹೊಗಳಿದ್ದಾರೆ. ಜನ್ನನೇ ಸ್ವತಃ ತಾನು ರಚಿಸಿದ ಶಾಸನ ಮತ್ತು ಕಾವ್ಯಗಳಲ್ಲಿ 'ಸುಕವಿಜನಮಿತ್ರ' 'ಕವಿಭಾಳನೇತ್ರಂ' 'ಉದ್ದಂಡಕವಿ' ಅಸಹಾಯಸುಕವಿ' 'ಕವಿಗಳೊಳಗೆ ವೈಯಾಕರಣಂ' 'ತರ್ಕವಿನೋದಂ'.

'ಭರತ ಸುರತಶಾಸ್ತ್ರ ವಿಳಾಸಂ' 'ಕವಿರಾಜಶೇಖರಂ' ಇತ್ಯಾದಿ ಬಿರುದುಗಳಿಂದ ತನ್ನನ್ನು ಹೊಗಳಿಕೊಂಡಿದ್ದಾನೆ. ಅವನು ಬಹುಶಾಸ್ತ್ರ ಬಲ್ಲಿದನೂ, ಸಂಸ್ಕೃತ ಮತ್ತು ಕನ್ನಡದಲ್ಲಿ ಕವನ ಮಾಡುವ ಯೋಗ್ಯತೆಯುಳ್ಳವನೂ ಆಗಿದ್ದನು. ಅವನ ಕವಿತ್ವಕ್ಕೆ ಮೆಚ್ಚಿ ಹೊಯ್ಸಳ ವೀರಬಲ್ಲಾಳನು 'ಕವಿಚಕ್ರವರ್ತಿ' ಎಂಬ ಬಿರುದನ್ನೂ ದಯಪಾಲಿಸಿದ್ದನು. ಅವನು ಹೊಯ್ಸಳ 'ಎರಡನೆಯ ನರಸಿಂಹನ' ಆಸ್ಥಾನದಲ್ಲಿ ಗಣ್ಯಕವಿಯಾಗಿದ್ದಂತೆ ದಂಡಾಧೀಶನೂ ಮಂತ್ರಿಯು ಆಗಿದ್ದನೆಂದು ಅನಂತನಾಥ ಪುರಾಣದಲ್ಲಿ ಬರುವ ಈ ಕೆಳಗಿನ ಪದ್ಯದಿಂದ ತಿಳಿಯುವುದು.

**ನರಸಿಂಹನ ಚೋಳಕುಳೋ**
**ದ್ಧರಣನ ಸರ್ವಜ್ಞಭೂಪನೋಲಗದೊಳ್ ನಿಂ**
**ದಿರೆ ದಂಡಾಧೀಶಂ, ಕು**
**ಳ್ಳಿರೆ ಮಂತ್ರಿ, ತೊಡಂಕೆ ಕವಿ ಜನಾರ್ಧನದೇವಂ ॥**

ಈ ಮಾತುಗಳನ್ನು ಕವಿಯೇ ತನ್ನ ಬಗ್ಗೆ ಹೇಳಿಕೊಂಡಿದ್ದಾನೆ.

'ಮಧುರನು' 'ಧರ್ಮನಾಥ ಪುರಾಣದಲ್ಲಿ''ಜನ್ನನು' ನೇಮಿಯೊಡನೆ ಕರ್ನಾಟಕೃತಿಗೆ ಸೀಮಾಪುರುಷನೆಂದು ಹೊಗಳಿದ್ದಾನೆ.

ಈ ಪ್ರಕಾರ ಕವಿಗಳ, ರಾಜರ ಮತ್ತು ಪಂಡಿತರ ಗೌರವಾದರಗಳಿಗೆ ಪಾತ್ರನಾದ ಜನ್ನನು ಜೈನ, ಬ್ರಾಹ್ಮಣ, ಕಮ್ಮೆವಂಶದವರು, ಕಾಶ್ಯಪಗೋತ್ರದವನು, 'ಕವಿಸುಮನೋಬಾಣ'ನೆಂದು ಪ್ರಸಿದ್ಧನಾದ 'ಶಂಕರನಪುತ್ರ' ಜಗದೇಕಮಲ್ಲನಲ್ಲಿ ಕಟಕೋಪಾದ್ಯಾಯನಾಗಿದ್ದ ಮೂರನೆಯ ನಾಗವರ್ಮನ ಶಿಷ್ಯರು.

ಜನ್ನನು ನಾಲ್ಕು ಶಾಸನಗಳನ್ನೂ 'ಯಶೋಧರಚರಿತೆ' ಮತ್ತು 'ಅನಂತನಾಥಪುರಾಣ' ಎಂಬ ಎರಡು ಕಾವ್ಯಗಳನ್ನು ಬರೆದಿದ್ದಾನೆ. ಅವನು 'ಚನ್ನರಾಯಪಟ್ಟಣದ' ೧೭೯ ನೇ ಶಾಸನವನ್ನು ಕ್ರಿ.ಶ.೧೧೯೧ರಲ್ಲಿಯೂ, ಮತ್ತು ತರೀಕೆರೆ ೪೫ನೇ ಶಾಸನವನ್ನು ಕ್ರಿ.ಶ.೧೧೯೬ ರಲ್ಲಿಯೂ ಈ ಎರಡು ಶಾಸನಗಳ ಕೊನೆಯಲ್ಲಿ 'ಜನ್ನಯ್ಯನ ಕವಿತೆ' ಎಂದಿದೆ.[೧೧೧] ಆದರೆ ಎರಡನೆಯದಾದ ಅಮೃತಾಪುರ ಶಾಸನ ಬರೆಯುವಾಗ ಅವನು "ಉದ್ದಂಡ ಕವಿಭಾಳನೇತ್ರ

ಸುಕವಿಜನಮಿತ್ರಂ ಜನ್ನಯ್ಯನ ಕವಿತೆ" ಈ ಎರಡನೆ ಶಾಸನ ಬರೆವ ಕಾಲಕ್ಕೆ ಕವಿಯ ಆತ್ಮವಿಶ್ವಾಸ ಹೆಚ್ಚಿದೆ ಎನ್ನಬಹುದು. ಇದೇ ಬಿರುದನ್ನು 'ಅನಂತನಾಥ ಪುರಾಣ'ದಲ್ಲಿಯೂ ಹೇಳಿಕೊಂಡಿದ್ದಾನೆ.

ತರೀಕೆರೆ ೪೨ನೆಯ ಶಾಸನ ಮತ್ತು ೬೮ನೇ ಶಾಸನಗಳನ್ನು ಸಹ, ಅವುಗಳಲ್ಲಿ ಶಾಸನಕವಿಯ ಹೆಸರು ನಾಶವಾಗಿದ್ದರೂ ಜನ್ನನೇ ಬರೆದಿರಬೇಕೆಂದು ಹೇಳಬೇಕಾಗುತ್ತದೆ. ಏಕೆಂದರೆ ತರೀಕೆರೆ ೪೨ನೇ ಶಾಸನದಲ್ಲಿ ಬರುವ ವೀರಬಲ್ಲಾಳನ ವಂಶವರ್ಣನೆಯ ಪದ್ಯಗಳೆಲ್ಲವೂ ೪೫ನೇ ಶಾಸನದಲ್ಲಿ ಬಂದಿವೆ. ಮತ್ತು ಅವುಗಳಲ್ಲಿಯ ಒಂದೆರಡು ಪದ್ಯಗಳು ಜನ್ನನು ರಚಿಸಿದ ಕಾವ್ಯಗಳಲ್ಲಿಯೂ ಬಂದಿವೆ. ೪೨ನೇ ಶಾಸನವು ೪೫ನೇ ಶಾಸನದ ಚಿಕ್ಕ ಪ್ರತಿಬಿಂಬವಾಗಿದೆ. ೬೮ನೆಯ ಶಾಸನದಲ್ಲಿಯ ನಾಗಗಾವುಂಡನ ವಂಶವರ್ಣನೆಯ ಪದ್ಯಗಳು ೪೨ನೆಯ ಶಾಸನದಲ್ಲಿ ಬಂದಿವೆ.[೧೧೨]

ಚನ್ನರಾಯಪಟ್ಟಣ ೧೭೯ನೇ ಶಾಸನದಲ್ಲಿ ಹೊಯ್ಸಳ ವೀರಬಲ್ಲಾಳನ ಕೆಳಗೆ ಮಹಾಪ್ರಧಾನನೂ ಶ್ರೀಕರಣ ಹೆಗ್ಗಡೆಯೂ ಆದ ಮಾಚಣನು 'ಕೇಶವಪುರವೆಂಬ' ಮತ್ತೊಂದು ಹೆಸರುಳ್ಳ 'ಆನೆಗನಕೆರೆ' ಎಂಬ ಅಗ್ರಹಾರವನ್ನು ಶ್ರೀಮತ್ ಪ್ರಸನ್ನ ಕೇಶವದೇವರ ಆರಾಧಕರಾದ ವಿವಿಧ ಗೋತ್ರದ ಮಹಾಜನಗಳಿಗೆ ಶ್ರೀವೀರಬಲ್ಲಾಳದೇವರ ಶ್ರೀಹಸ್ತದಿಂದ ಧಾರೆಯೆರೆಸಿ ಕೊಡಿಸಿದನು.[೧೧೩]

ದಾನಕೊಟ್ಟ 'ಆನೆಗನಕೆರೆಯ' ಅಗ್ರಹಾರವು 'ಕುಬುಹು' ಎಂಬ ನಾಡೊಳಗಿತ್ತು. ಈ ಶಾಸನದಲ್ಲಿ ಇನ್ನೂರು ಮೇಲ್ಪಟ್ಟು ಸಾಲುಗಳಿವೆ. ಅದನ್ನು ಚಂಪೂ ಪದ್ಧತಿಯಲ್ಲಿ 'ಕಂದ ವೃತ್ತ' ಮತ್ತು ವಚನಗಳನ್ನು ಬಳಸಿ 'ಜನ್ನ' ಕವಿಯು ರಚಿಸಿದ್ದಾನೆ. ಶಾಸನಾರಂಭಕ್ಕೆ ಕೇಶವ ಮತ್ತು ವರಾಹದೇವರ ಸ್ತುತಿಯಿದೆ. ವರಾಹದೇವರು 'ಗಿರಿದುರ್ಗಮಲ್ಲ' ಅರ್ಥಾತ್ ವೀರಬಲ್ಲಾಳನನ್ನು ರಕ್ಷಿಸಲೆಂದು ಕವಿಯು ಮನದಟ್ಟಾಗುವ ರೀತಿಯಲ್ಲಿ ಈ ಪದ್ಯ ಚಿತ್ರಿಸಿರುವನು:

**ಶ್ರೀವಧುವಿಂಗೆ ಪೀಲಿದಟೆಯಿರ್ಪವೊಲಿರ್ದುದು ಕೋಡೊಳಿರ್ದ ಧಾ**
**ತ್ರೀವಳಯಂ ಸಮುದ್ರಮದು ಝುಲ್ಲರಿಯಿರ್ಪವೊಲಿರ್ದುದಾಂತ ದಾಂ**
**ಷ್ಟ್ರಾವರಶೋಭೆ ಕೆತ್ತಿಸಿದ ಮುತ್ತಿನ ಕಾವುವೊಲಿರ್ದುದಿಂತು ಸ**
**ದ್ಭಾವಮನಾಳ್ದ ಸೂಕರವರಂ ಪೊರೆಗೀ ಗಿರಿದುರ್ಗಮಲ್ಲನಂ......**

ಶಾಸನದ ಮುಂದಿನ ಸಾಲುಗಳಲ್ಲಿ ವಿಷ್ಣುವರ್ಧನನ ಪರಾಕ್ರಮ, ಈತನ ಮಗನಾದ ನರಸಿಂಹ ಮತ್ತು ಆತನ ರಾಣಿ ಏಚಲದೇವಿ ಇವರ ಉದರದಲ್ಲಿ ಜನಿಸಿದ ವೀರಬಲ್ಲಾಳ ಸೊರಟೂರಿನಿಂದ ಬೆಳ್ವಲದವರೆಗಿನ ವಿಜಯದ ವಿಷಯ ಹೀಗೆ ಹೇಳಿದೆ.:

**ಇನ್ನುಂ ಬೀರದ ತೋರ ಬಿತ್ತಿನಗೆವೊಯ್ದಂತಿರ್ಪುದಾರೂಢಸಂ**
**ಪನ್ನಂ ದಕ್ಷಿಣಚಕ್ರಿ ಗೆಲ್ದ ಸೊರಟೂರಿಂ ಬೆಳ್ವಲಂ ಮುಟ್ಟೆ ಸಂ**
**ಛನ್ನೋದ್ಘೃಷ್ಟ ಕೃಷೀವಳಾವಳಿ ಪ್ರಾಗ್ಭಾಗ ನಿಃಕೀಲತೋ**
**ತ್ಪನ್ನಂ ಸೇವುಣ ಸೈನ್ಯಸದ್ಭಟ ಕರೋಟಿ ಕೋಟಿ ಸಂಘಟ್ಟನಂ ॥**

ವೀರಬಲ್ಲಾಳನು ವೈರಿಗಳನ್ನು ನೇಗಿಲು ಹೊಡೆದು ನಿರ್ಮೂಲ ಮಾಡಿ ತನ್ನ ಶೌರ್ಯದ ಅಗೆಗಳನ್ನು ಬಿತ್ತಿದನೆಂದು ಕವಿಯು ವರ್ಣಿಸಿದ್ದಾನೆ.

ಶ್ರೀಕರಣ ಪ್ರೌಢ ಪ್ರಧಾನ ಮಾಚಿರಾಜನನ್ನು ಸ್ತುತಿಸಿ ಪದ್ಯ:

**ಸಿರಿಗುದ್ಯದ್ಯೌವನಂ, ವಾಣಿಗೆ ಸೊಬಗು ಕುಲಶ್ರೀಗೆ ನಿತ್ಯೋತ್ಸವಂ ಸ**
**ಚ್ಚರಿತಕ್ಕಾಲಂಬನಂ, ಸ್ವಾಮಿಗೆ ಬಲದ ಭುಜಂ ರಾಜ್ಯಸಂತುಷ್ಟಿಗಾಯುಂ ।**
**ಸಿರಿಗೋತ್ರಕ್ಕೆಯ್ದೆ ಕಣ್ಣುಂ ಗತಿ ಪರಹಿತ ಮಾರ್ಗಕ್ಕೆ ಜನ್ಮಾಕರಂ ಶ್ರೀ**
**ಕರಣ ಪ್ರೌಢಪ್ರಧಾನಂ ಸಕಳಬುಧಮರುದ್ಭೂಜನೀ ಮಾಚಿರಾಜಂ ॥**

ತರೀಕೆರೆ ೪ನೇ ಶಾಸನವು ೧೧೯ ಸಾಲುಗಳನ್ನು ಒಳಗೊಂಡಿದ್ದು ಒಂದು ಕಿರು ಚಂಪೂಕಾವ್ಯ. ಅದರಲ್ಲಿ ಕವಿಯು ಕಂದ ಪದ್ಯಗಳನ್ನು, ಮತ್ತೇಭ, ಚಂಪಕಮಾಲಾ, ಮೊದಲಾದ ವೃತ್ತ ಮತ್ತು ಗದ್ಯಭಾಗಗಳನ್ನು ಸಮಯೋಚಿತವಾಗಿ ಬಳಸಿದ್ದಾನೆ. ಈ ಶಾಸನ ಬಂಧವು ಸಂಸ್ಕೃತ ಭೂಯಿಷ್ಟವಾಗಿದ್ದು ಪ್ರೌಢವಾಗಿದೆ. ಎರಡನೆಯ ಪದ್ಯದಲ್ಲಿ ಕವಿಯು ತನ್ನ ಒಡೆಯನಾದ ಅಮಿತನನ್ನು ರಕ್ಷಿಸಲಿ ಎಂದು ಪ್ರಾರ್ಥಿಸುವ ಪದ್ಯ ಇಂತಿದೆ:

**ಶ್ರೀಮತ್ಸೇನಾಧಿನಾಥೋತ್ತಮನನಮಿತನಂ ರಕ್ಷಿಸುತ್ತಿರ್ಕ್ಕೆತಾರಾ**
**ಸ್ತೋಮಮಂ ನಿಲ್ವನ್ನೆಗಂ ನಾರದಮಸೃಣರಪ ವ್ಯಕ್ತಗೀತಾಮೃತಂ ಗೌ**
**ರೀಮುಗ್ಧಸ್ನಿಗ್ಧ ಮಂದಸ್ಮಿತ ಮಧುರ ಕಟಾಕ್ಷಾಮೃತಂ ದೇವರಾಜ**
**ಪ್ರೇಮಸ್ತುತ್ಯಾದಿ ಸದ್ಭಾಗಮೃತನಮೃತನಾಥಂ ತ್ರಿಲೋಕೈಕನಾಥಂ ॥**[೧೧೪]

ಈ ಪದ್ಯವು ಸಮಾಸಗಳಿಂದ ಕೂಡಿಕೊಂಡು ಪ್ರೌಢವಾಗಿದೆ.

ಹೊಯ್ಸಳ ಎರೆಯಂಗನನ್ನು ಹೊಗಳುವ ಪದ್ಯವನ್ನು ಕಾಣಬಹುದು.:

**'ನೆಱವಿಂದಂ ವೈರಿಬೃಂದಂ ಕವಿವುದುಮನಿತೊಂದಂ ರಣೋತ್ಸಾಹದಿಂದಂ**
**ತಱಿದೊಟ್ಟಲ್ ಸೀೞ್ದು ಮೆಟ್ಟಲ್ ಯಮಪುರಿಗಿರಿದಟ್ಟಲ್ ಚಲಂ ಮುಟ್ಟೆಕಟ್ಟಲ್**
**ನೆಱೆದೆತ್ತಂ ಕಯ್ದುವೊತ್ತಂ ವಸುಧೆಯೊಳಗೆ ಮತ್ತಂ ಜನಂ ಬೆತ್ತನಾ ಸಂ**
**ದೆಱೆಯಂಗಂ ವೀರಗಂಗಂ ರಿಪುತಿಮಿರ ಪತಂಗಂ ಜಯಶ್ರೀ ಭುಜಂಗಂ' ॥**

ಈ ಎರೆಯಂಗ ರಾಜನಿಗೆ ಮತ್ತು ರಾಣಿ ಏಚಲೆಗೆ ವಿಷ್ಣುವರ್ಧನನು ಮಗನಾದನೆಂದು ಹೇಳುವ ಪದ್ಯವನ್ನು ಇಲ್ಲಿ ಗಮನಿಸಬಹುದು.

‘ಚಲದೆಱೆಯಂಗೆ ಚಾಗದೆಱೆಯಂಗೆ ಜನಕೆಱೆಯಂಗೆ ಮಿಕ್ಕದೋ
ರ್ವಲದೆಱೆಯಂಗೆ ವೀರದೆಱೆಯಂಗೆ ಕುಲೋನ್ನತಿ ತನ್ನೊಳೊಪ್ಪುವೇ
ಚೆಲೆಯೆಱೆಯಂಗೆ ಕೀರ್ತಿಯೆಱೆಯಂಗೆಱೆಯಂಗ ನೃಪಂಗೆ ನಂದನಂ
ಜಲಧಿ ಪರೀತ ಭೂವಳಯ ವರ್ಧನನಂಕದ ವಿಷ್ಣುವರ್ಧನಂ’

ಇಲ್ಲಿ ‘ಎರೆಯಂಗ’ ಪದವು ಭೂಮಿಯ ಒಡೆಯ ಮತ್ತು ಒಬ್ಬ ವ್ಯಕ್ತಿಯ ಹೆಸರಿನಲ್ಲೂ ಬಂದಿದೆ. ಈ ಎರಡೂ ಪದ್ಯಗಳಲ್ಲಿ ಬಳಸಿದ ಅನುಪ್ರಾಸವನ್ನು ನೋಡಬಹುದು.

ಈ ವಿಷ್ಣುವರ್ಧನನ ಮಗನಾದ ನರಸಿಂಹನ ವೀರತನಕ್ಕೆ ಪಾಂಡ್ಯರು ಹೆದರಿ ಚಲ್ಲಾಪಿಲ್ಲಿಯಾದರೆಂದೂ ಅವರ ಹೆಣದಿಂದ ನರಸಿಂಹನು ತುಂಗಭದ್ರಾ ನದಿಯನ್ನು ಕಟ್ಟಿದನೆಂದು ವರ್ಣಿಸುವ ಪದ್ಯ ಇಂತಿದೆ:

‘ಕೆದಱೆತ್ತಳ್ಕಿತ್ತು ಬಳ್ಕಿತ್ತಗಿದುದಸ್ಮದ್ಭಳಂ ನಿಲ್ಲದಿಂನೀ ಪದದೊಳ್
ಕೈಕೊಳ್ವೆನೆಂದೊಡ್ಡಿದಿರೊಳೊಡವಿ ನಿಸ್ಸಾಣಮಂ ತಾನೆ ಸೂಳೈ
ಸಿದನತ್ತಲ್ತ್ರೈಪುಮಾಣ್ಮರ್ಮಲೆದೊಡೆ ತಲೆಗೊಂಡೆತ್ತಿದಂ ತುಂಗಭದ್ರಾ
ನದಿಯಂ ಪಾಂಡ್ಯಾವನೀಭೃದ್ಬಳದ ಪೆಣಗಳಿಂ ಕಟ್ಟಿದಂ ನಾರಸಿಂಹಂ’॥

**ತ್ರಿಭುವನಶಕ್ತಿ (ಕ್ರಿ.ಶ.೧೧೯೦)**

ತುಮಕೂರು ಜಿಲ್ಲೆಯ, ಚಿಕ್ಕನಾಯಕನಹಳ್ಳಿ ತಾಲೂಕಿನ, ಬೂದಿಹಾಳು ಗ್ರಾಮದ ಹಿರಿಯಕೆರೆ ಏರಿಯ ಮೇಲಿರುವ ಶಾಸನವನ್ನು[೧೧೫] ಈತ ರಚಿಸಿದನೆಂದು ತಿಳಿದುಬರುವುದು. “ತ್ರಿಭುವನಸಕ್ತಿ ಬರದ ಸಸನ॥ ರೂಹರಿ ಬಂದೋಜನ ಮಗ ಸುರಿಯಾಚಾರಿ ಬರದ” ಎಂದು ಶಾಸನ ಅಂತ್ಯಗೊಳ್ಳುತ್ತದೆ. ‘ಬರದ’ ಎಂಬುದರ ಮೊದಲ ಉಲ್ಲೇಖ ಕರ್ತೃತ್ವವನ್ನೂ ಎರಡನೇ ಉಲ್ಲೇಖ ಲೇಖಕತ್ವವನ್ನೂ ತಿಳಿಸುತ್ತದೆ. ಇದೇ ತಾಲೂಕಿನ ಶಾಸನಸಂಖ್ಯೆ ೧೬ರಲ್ಲಿ[೧೧೬] ಕೆಲವು ಪದ್ಯಗಳಿರುವುದರಿಂದ ಈ ಶಾಸನವನ್ನೂ ತ್ರಿಭುವನಶಕ್ತಿ ಎಂಬ ಕವಿಯು ರಚಿಸಿದ್ದನೆಂದು ತೋರುತ್ತದೆ. ಈತ ಕಾಳಾಮುಖ ಶೈವ ಮುನಿಯಿರಬಹುದೆಂದು ಆತನ ಹೆಸರಿನಿಂದ ಊಹಿಸಬಹುದು. ಈತನು ಹುಳಿಯಾರಿನ ಹಿರಿಯ ಕ್ರಿಯಾಶಕ್ತಿಯ ಶಿಷ್ಯ.

ಈ ಶಾಸನಗಳಲ್ಲಿ ಹೊಯ್ಸಳ ದೊರೆ ಇಮ್ಮಡಿ ವೀರಬಲ್ಲಾಳನ ಉಲ್ಲೇಖವಿದ್ದು ಕ್ರಿ.ಶ.೧೧೯೦ ರ ಕಾಲಕ್ಕೆ ಸೇರಿವೆ. ಬೂದಿಹಾಳದ ಮಾಚಿಗೌಡ ಮತ್ತು ಕೇತಗೌಡರು ಹುಳಿಯಾರಿನ ಹಿರಿಯ ಕ್ರಿಯಾಶಕ್ತಿದೇವನ ಶಿಷ್ಯ ಹಾರುವ ಮಹಾದೇವರ ಕಾಲ್ತೊಳೆದು ಧರ್ಮೇಶ್ವರ ದೇವಾಲಯದ ಖರ್ಚುಗಳಿಗೆ ಭೂಮಿಯನ್ನು ದಾನ ಮಾಡಿದ ವಿವರವನ್ನು ಬಣ್ಣಿಸಿದೆ.

ಎರಡೂ ಶಾಸನದಲ್ಲಿರುವ ಪ್ರಾರ್ಥನಾಸ್ತುತಿ ಸರಳ ಸುಂದರ ಕಂದಪದ್ಯ:

**ಪತ್ತಿರೆ ಗಂಗೆಯ ಪನಿಗಳ್**
**ಮುತ್ತಿನ ಬಾಸಿಗವಿದೆನಿಸಿ ವಾಸುಗಿ ಸುಖದಿಂ**
**ಸುತ್ತಿರ್ದ ಜೂಟದನ್ದೇ**
**ವೋತ್ತಮನೆಸೆವಗೊಸೆದು ಕುಡುಗೆ ಸುಖಸಂಪದಮಂ ॥**

'ಮಂಡಳಿಕರವಿರಾಹು' ದಾನಿ ಬಲ್ಲೆಯನಾಯಕನ ಅನ್ವಯವನ್ನು ಹೇಳಿದ ನಂತರ ಅವನ ಸಾಹಸದ ಪ್ರಶಂಸೆ :

**ಕಪ್ಪವನಿತ್ತು ಕಂಡು ಬೆಸಕೆಯ್ದನೆ ತಾಂ ಸುಜನಂ ಬಳಿಕ್ಕವೆಂ**
**ತಪ್ಪಡವೊಪ್ಪು ಗಿಂತಿನಿತನೊಲ್ಲದೆ ಬಲ್ಲಿದೆನೆಂದು ಗರ್ವವಾ**
**ಗಿಪ್ಪಿನ ಬಂಟನೇಟಿಸುತೆ ಪಾಡಿಸುತಂ ಸೆಣಸುತ್ತ ಬಪ್ಪಿನಂ**
**ತೊಪ್ಪೆನೆ ಪೊಯ್ದನೆಯ್ದೆ ಸಿಡಿಲಂ ತವೆ ಬಲ್ಲೆಯನೇಂ ಪ್ರತಾಪಿಯೋ.॥**

**ಬೆಡಗಿನ ಸೋಮನಾಥ ಪಂಡಿತ (೧೧೯೦):**

ಬಿಜಾಪುರ ಜಿಲ್ಲೆಯ, ಇಂಡಿ ತಾಲೂಕಿನ, ಹಿರೇಬೇವಿನೂರು ಗ್ರಾಮದ ಶಾಸನವನ್ನು[೧೧೭] ಇದೇ ಇಂಡಿ ತಾಲೂಕಿನ ಚಿಕ್ಕಂಡಿ ಶಾಸನವನ್ನು[೧೧೮] ಬೆಡಗಿನ ಸೋಮನಾಥ ಕವಿಯು ರಚಿಸಿದ್ದಾನೆ. ಎರಡೂ ಶಾಸನಗಳಲ್ಲೂ 'ಬೆಡಗಿನ ಸೋಮನಾಥ' ಎಂದಿದೆ.

ಎರಡೂ ಶಾಸನಗಳಲ್ಲಿ ಸೇವುಣ ಅರಸ ಬಿಲ್ಲಮ ಮತ್ತು ಜೈತುಗಿಯರನ್ನು ಉಲ್ಲೇಖಿಸಿದೆ. ಮೊದಲನೇ ಶಾಸನವು ಕ್ರಿ.ಶ.೧೧೯೦ರ ಕಾಲಕ್ಕೆ ಸೇರಿದೆ. ಎರಡನೇ ಶಾಸನವು ಕ್ರಿ.ಶ.೧೧೯೬ಕ್ಕೆ ಸೇರಿದೆ.

ಮೊದಲನೇ ಶಾಸನದಲ್ಲಿ ಬೊಪ್ಪಣನಾಯಕನ ಪತ್ನಿ ಸಿರಿದೇವಿ ಎಂಬಾಕೆ 'ಕ್ಷಿತಿರುಹನೋಂಪಿ' ಯನ್ನಾಚರಿಸ ಬಯಸಿದಾಗ (ವೃಕ್ಷಗಳನ್ನು ನೆಡುವ ಹಾಗೂ ದಾನ ಮಾಡುವ ವೃತವೇ ಕ್ಷಿತಿರುಹನೋಂಪಿ) ಅರಸನ ಪ್ರಧಾನ ದಂಡನಾಯಕ ಮಾಯಿದೇವನು ಆಕೆಯ ಬಯಕೆಯಂತೆ ಹಲವಾರು ವೃಕ್ಷಗಳನ್ನು ನೆಡಸಿದನಲ್ಲದೆ, 'ತರ್ದವಾಡಿ ೧೦೦೦' ಪ್ರದೇಶಕ್ಕೆ ಸೇರಿದ ಬೇವಿನೂರಿನಲ್ಲಿ ಧರ್ಮಸಂತೆಯನ್ನೇರ್ಪಡಿಸಿದನೆಂದು ಶಾಸನ ಸಾರುತ್ತದೆ. ಬೊಪ್ಪನಾಯಕ ಮೂವತ್ತಾರು ಗ್ರಾಮಗಳ ಒಡೆಯನಾಗಿದ್ದ. ಮೇಲಿನ ಧರ್ಮದ ನಿರ್ವಹಣೆಗಾಗಿ ಮಾಯಿದೇವ ಬೊಪ್ಪನಾಯಕ ಮತ್ತು ತರ್ದವಾಡಿಯ ಮನ್ನೆಯ ಬಂದರಸರಿಗೆ ಭೂಮಿ ಹಾಗೂ ಮನೆಯನ್ನು ನೀಡಿದ; ತಲೆಯಕಾವದೇವ, ರೇವಣೇಶ್ವರ, ಹಾಗೂ ಭೋಗೇಶ್ವರ ದೇವಾಲಯಗಳಿಗೆ ವೃಕ್ಷಗಳನ್ನು ದಾನ ನೀಡಲಾಯಿತು.

ಶಾಸನದ ಭಾಷೆ ಸಂಸ್ಕೃತ ಕನ್ನಡಗಳ ಸಮ್ಮಿಶ್ರವಾಗಿದ್ದು, ರಚನೆ ಗದ್ಯಪದ್ಯಮಯವಾಗಿದೆ. ಸೃಗ್ಧರೆ, ಮತ್ತೆಭವಿಕ್ರೀಡಿತ, ಉತ್ಪಲಮಾಲೆ, ಚಂಪಕಮಾಲೆ ಮತ್ತು ಕಂದ ಇತ್ಯಾದಿ ವೃತ್ತಗಳನ್ನು ಬಳಸಿ ಶಾಸನಕಾವ್ಯವನ್ನು ರಚಿಸಿದ್ದಾನೆ. ಈ "ಸಾಸನವ ಪೇಳ್ದ ಬೆಡಗಿನ ಸೋಮನಾಥಪಂಡಿತರ್ಗೆ ಮಾಮರನೆಂಟು"........ ಎಂದು ಶಾಸನದಲ್ಲಿ ಹೇಳಿದೆ.

ಬಿಜಾಪುರ ವಸ್ತು ಸಂಗ್ರಹಾಲಯದಲ್ಲಿಟ್ಟಿರುವ ಎರಡನೇ ಶಾಸನವು ಸೇವುಣ ಅರಸ ಜೈತುಗಿಯ ಆಳ್ವಿಕೆಗೆ ಸೇರಿದೆ. 'ಕಿಱುಯಿಂಡಿಯ' ಬಂದೇಶದೇವರಿಗೆ ದೇಡರ ಚೀಲಯ್ಯನೆಂಬಾತ ಭೂಮಿ ಹಾಗೂ ನಿವೇಶನವನ್ನು ಅರಸನಿಂದ ಪಡೆದು ದಾನವಾಗಿತ್ತ ಸಂಗತಿಯನ್ನು ಇದು ನಿರೂಪಿಸುತ್ತದೆ. ದಾನವನ್ನು ಸ್ವೀಕರಿಸಿದವನು ಚಂದ್ರಾಭರಣಬ್ರತಿ.

"ಖ್ಯಾತ ಬೆಡಗಿನ ಸೋಮಂ ಸಾತಿಶಯೋಕ್ತಿಯೊಳೆ ಪೇಳ್ದನೆನೆ ಮೆಚ್ಚದರಾರ್" ಎಂಬುದು ಕವಿಯ ಹೇಳಿಕೆ, ಚಂಪೂಶೈಲಿಯಲ್ಲಿರುವ ಈ ಕಾವ್ಯ ಶ್ಲೋಕ, ಕಂದ, ಶಾರ್ದೂಲವಿಕ್ರೀಡಿತ ಮತ್ತು ವಿಶೇಷವಾಗಿ ಮತ್ತೇಭವಿಕ್ರೀಡಿತ ವೃತ್ತಗಳಿಂದ ರಚಿತವಾಗಿದೆ. ಶಾಸನವನ್ನು ಕೇತೋಜ ಹಾಗೂ ಬಮ್ಮೋಜರೆಂಬುವರು ಕಂಡರಿಸಿದರು. ಪ್ರಸನ್ನವೂ ಸುರಸವೂ ಆದ ಕವಿಯ ಶೈಲಿಯನ್ನು ಗಮನಿಸಲು ಎರಡೂ ಶಾಸನಗಳಿಂದ ಒಂದೊಂದು ಉದಾಹರಣೆ ನೋಡಬಹುದು:

**ಬೊಪ್ಪಣ ಚಮೂಪತಿಯ ವರ್ಣನೆ**

> **ಸುರಪತಿಯಿರ್ದ ದೇವಸಭೆ ಪಂಕಜಮಿರ್ದ ಸರೋಜಷಂಡವಾ**
> **ಸುರತರುವಿರ್ದ ನಂದನವನಂ ಹರಿಯಿರ್ದಮೃತಾಬ್ಧಿಯೊಪ್ಪುವಂ**
> **ತಿರೆ ನೃಪಮೇರು ಭಿಲ್ಲಮನಮಾತ್ಯಶಿಖಾಮಣಿ ಮಾಯಿದೇವನಾ**
> **ದರಿಸುವ ಮಂತ್ರಿ ಬೊಪ್ಪಣಚಮೂಪತಿಯಿರ್ದೆಡೆಯಿಂತಿವೊಪ್ಪುಗುಂ ॥**

**ಕಿಱೆ ಇಂಡಿಯನ್ನು ಕವಿ ವರ್ಣಿಸುವುದು ಹೀಗೆ :**

> **ಎಳೆಮಾವಿಂ ಗಿಳಿಯಿಂ ಲತಾಪ್ರತತಿಯಿಂ ಭೃಂಗಾಳಿಯಿಂ ಪೂತ ಪೂ**
> **ಗೊಳದಿಂ ಶಾಳಿವನಾಳಿಯಿಂ ಶಿವಗೃಹವ್ರಾತಂಗಳಿಂ ಮತ್ತಕೋ**
> **ಕಿಳದಿಂ ಶೋಭಿಸುವಿಕ್ಷುವಾಟತತಿಯಿಂ ಪೂಗೀವನ ಶ್ರೇಣಿಯಿಂ**
> **ದಿಳೆಗಾದರ್ಶದ ಭಂಗಿಯಿಂ ಸೊಗಯಿಕುಂ ಚಿಕ್ಕಿಂಡಿಯೀ ಧಾತ್ರಿಯೊಳ್ ॥**

**ಮಾಳೆಯ (ಕ್ರಿ.ಶ.೧೧೯೨)**

ಶಿವಮೊಗ್ಗ ಜಿಲ್ಲೆಯ, ಶಿಕಾರಿಪುರ ತಾಲೂಕಿನ, ಬಳ್ಳಿಗಾವಿಯ ಕೇದಾರೇಶ್ವರ ದೇವಾಲಯದ ಶಾಸನವನ್ನು[೧೧೯] ಮಾಳೆಯ ಎಂಬ ಕವಿಯು ರಚಿಸಿದನೆಂದು ತಿಳಿದುಬರುತ್ತದೆ. ಈ ಕವಿಗೆ 'ಕವಿರಾಜ ಪಂಡಿತ' ಎಂಬ ಬಿರುದಿತ್ತೆಂದು ತಿಳಿದುಬರುವುದು. ಹೊಯ್ಸಳ ಇಮ್ಮಡಿ

ಬಲ್ಲಾಳನನ್ನು ಉಲ್ಲೇಖಿಸುವ ಈ ಶಾಸನವು ಕ್ರಿ.ಶ.೧೧೯೨ರ ಕಾಲಕ್ಕೆ ಸೇರಿದೆ. ಈ ಶಾಸನದಿಂದ ಮಾಳೆಯ ಕವಿಯು 'ವಾಮಶಕ್ತಿಯ' ಶಿಷ್ಯನಾಗಿದ್ದನು. ಶಾಸನದ ಕೊನೆಯ ಭಾಗದಲ್ಲಿ "ಕವಿರಾಜರ ಪಂಡಿತ ಮಾಳೆಯನ ಕವಿತೆ ಕಲ್ಲೊಜ ಚಟ್ಟಯನ ಲಿಖಿತ" ಎಂದಿದೆ. ಮಾಳೆಯನಿಗೆ 'ಕವಿರಾಜರಪಂಡಿತ' ಎಂಬ ವಿಶೇಷಣವನ್ನು ಗಮನಿಸಿದಾಗ ಈತ ಪ್ರಸಿದ್ಧ ಕವಿಯಾಗಿದ್ದನೆಂದು ತಿಳಿದುಬರುವುದು.

ಪ್ರಸ್ತುತ ಶಾಸನವು ಬಲಿವಂಶದ ಎಱೆಯಣ ಚಮೂನಾಥ ಎಂಬ ಹೊಯ್ಸಳ ಅಧಿಕಾರಿ ಬಲಿಪುರದ (ಈಗಿನ ಬಳ್ಳಿಗಾವಿ) ದಕ್ಷಿಣ ಕೇದಾರೇಶ್ವರ ದೇವರ ಪೂಜೆ, ನೈವೇದ್ಯ, ನಂದಾದೀವಿಗೆ, ಚೈತ್ರಪವಿತ್ರ ಮುಂತಾದ ಸೇವೆಗಳಿಗೂ ತಪೋಧನರ ಆಹಾರದಾನ ಹಾಗೂ ದೇವಾಲಯದ ಜೀರ್ಣೋದ್ಧಾರ ಮುಂತಾದ ಧರ್ಮಕಾರ್ಯಗಳಿಗೂ ತನ್ನ ಆಳ್ವಿಕೆಗೆ ಸೇರಿದ ಸಾಂತಳಿಗೆ ನಾಡ ಮುದ್ಧ ಕುಂದಾನಿಯ ವೃತ್ತಿಯೊಳಗಣ ಚೀಯನ ಸಾಲಿವೂರೆಂಬ ಗ್ರಾಮವನ್ನು ಸರ್ವ ಸಾಮಾನ್ಯವಾಗಿ ದತ್ತಿ ಬಿಟ್ಟಿದ್ದು ಶಾಸನದ ವಸ್ತು ಅರಸ ಬಲ್ಲಾಳ, ದಾನಿ ಎಱೆಯಣ ಹಾಗೂ ಪ್ರತಿಗ್ರಹಿ ವಾಮಶಕ್ತಿದೇವರ ಅನ್ವಯಗಳನ್ನು ಶಾಸನದಲ್ಲಿ ಹೇಳಿದೆ.

ಶಾಸನವು ಕನ್ನಡ ಹಾಗೂ ಸಂಸ್ಕೃತ ಭಾಷೆಗಳಲ್ಲಿ ರಚಿತವಾಗಿದೆ. ಶಾಸನಕಾವ್ಯವನ್ನು ಗಮನಿಸಿದಾಗ ಕವಿಗೆ ಸಂಸ್ಕೃತದಲ್ಲಿ ಉತ್ತಮ ಪಾಂಡಿತ್ಯವಿತ್ತೆಂಬುದು ಮನದಟ್ಟಾಗುವುದು. ಚಂಪೂ ಶೈಲಿಯಲ್ಲಿ ರಚಿತವಾಗಿರುವ ಈ ಶಾಸನಕಾವ್ಯದಲ್ಲಿ ವಿಶೇಷವಾಗಿ ಸ್ರಗ್ಧರೆ, 'ಶಾರ್ದೂಲವಿಕ್ರೀಡಿತ' ಮತ್ತು ಚಂಪಕಮಾಲೆ ವೃತ್ತಗಳನ್ನು ಶ್ಲೋಕ, ಮಾಲಿನಿ ಮತ್ತೇಭವಿಕ್ರೀಡಿತ, ಅನುಷ್ಟುಪ್, ಮಂದಾಕ್ರಾಂತ, ವಸಂತತಿಲಕ, ಹಾಗೂ ಕಂದಗಳನ್ನು ಬಳಸಲಾಗಿದೆ.

ಕವಿಯ ಕಾವ್ಯ ಶೈಲಿಗೆ ಒಂದೆರಡು ಕನ್ನಡ ಭಾಷೆಯಲ್ಲಿ ರಚಿತವಾಗಿರುವ ಉದಾಹರಣೆಗಳನ್ನು ಆಯ್ದು ಕೊಡಬಹುದು. ಹೊಯ್ಸಳ ಅರಸ ನರಸಿಂಹನ ಪರಾಕ್ರಮದ ಪ್ರಶಂಸೆ ಹೀಗಿದೆ.

**ತೆರಳದಾರತಿ ಭೂಭುಜರ ನಿಟ್ಟೆಲುವಂ ಸಲೆ ತೇದು ಬೊಟ್ಟ ನಿ**
**ಟ್ಟುರುಳ್ವ ಶಿರಂಗಳಂ ಬಲುಗರುಳ್ಗಳೊಳಾಗಡೆ ಕೋದು ಕಂಠದೊಳ್**
**ಧರಿಸಿ ಕಪಾಲಮಂ ಪಿಡಿದು ನೆತ್ತರನೀಂಟಿ ಮನೋನುರಾಗದಿಂ**
**ಧುರದೊಳ್ ಖಡ್ಗಕಾಳಿ ಕುಣಿದಾಡುವಳೀ ನರಸಿಂಹಭೂಪನಾ ॥**

**ಪ್ರತಿಗ್ರಹಿ ಕೇದಾರದೇವಾಲಯದ ಸ್ಥಾನಾಚಾರ್ಯನಾದ ವಾಮಶಕ್ತಿಪಂಡಿತ :**

> **ಕಡೆವಂದಬುಧಿಯೊಳ್ಸುರೇಂದ್ರಗಜಮಂ ಸ್ತ್ರೀರತ್ನಮಂ ಲಕ್ಷ್ಮಿಯಂ**
> **ತೊಡೆವಂ ಕೌಸ್ತುಭಮಂ ಸರಸ್ವತಿಯುಮಂ ದೇವಾದಿಗಳ್ಮುನ್ನಿವಂ**
> **ಪಡೆದಂತೀ ಸತುಪುತ್ರನಂ ಸುಜನನಂ ಧರ್ಮಜ್ಞನಂ ಧನ್ಯನಂ**
> **ಪಡೆದಂ ಸದ್ಗುಣಿ ವಾಮಶಕ್ತಿಯತಿಯಂ ಲೋಕೋತ್ತಮಂ ಗೌತಮಂ ॥**

**ಮಾಚರಸ (ಕ್ರಿ.ಶ.೧೧೯೨):**

ಆಂಧ್ರಪ್ರದೇಶದ ಕಡಪ ಜಿಲ್ಲೆ ಪ್ರೊದ್ದುಟೂರು ತಾಲೂಕಿನ ಚೌದೂರು ಶಾಸನವನ್ನು[೧೨೦] ಶಾಸನಕವಿ ಮಾಚರಸನು ರಚಿಸಿದ್ದಾನೆ. ಇದರಲ್ಲಿ ವಲ್ಲೂರಪುರದಿಂದ 'ರೇನಾಡು೭೦' 'ಕನ್ನೆ ೩೦೦' ಮೊದಲಾದವುಗಳನ್ನು ಆಳುತ್ತಿದ್ದ ಮಹಾಮಂಡಳೇಶ್ವರ ನಲಸಿದ್ದಣದೇವ ಚೋಮಹಾರಾಜನ ರಾಜ್ಯಭಾರವನ್ನು ಹೇಳಿದೆ. ಇವನು ಕಂಚಿಯಿಂದ ಕಪ್ಪವನ್ನು ಪಡೆದಿದ್ದನೆಂದೂ ಹೇಳಿದೆ. ಚೋಳಜೀಯ ಪಂಡಿತ ಎಂಬುವವನು ಪ್ರೋಲಜೀಯ ಎಂಬುವವನಿಗೆ ಭೂಮಿದತ್ತಿಯನ್ನು ನೀಡಿದನೆಂದು ಇಲ್ಲಿ ದಾಖಲಿಸಿದೆ.

ಶಾಸನದ ಕೊನೆಯಲ್ಲಿ ಶಾಸನ ಕವಿಯ ಪ್ರಸ್ತಾಪವಿದೆ. "ಬರದ ಸೋನಬೋವನ ಮಾಚರಸನು ಕಂಡರಿಸಿದಂ ಬಂಮೋಜ ॥ ಎಂದಿದೆ.

**ಸೇನಬೋವ ಮಾಯಂಣ (ಕ್ರಿ.ಶ.೧೧೯೩)**

ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು ತಾಲೂಕಿನ ಉಪ್ಪವಳ್ಳಿ ಗ್ರಾಮದ ಶಾಸನವನ್ನು 'ಸೇನಬೋವ ಮಾಯಂಣ' ಎಂಬುವವನು ರಚಿಸಿದ್ದಾನೆ.[೧೨೧] ಇದನ್ನು ಶಾಸನದಲ್ಲಿ ಹೀಗೆ ಹೇಳಿದೆ. "ಈ ಸಾಸನವಂ ಬರದಾತ ಯಿಂದವೂರ ಸೇನಬೋವ ಮಾಯಂಣಯಿರುವ ಮಾಡಿದರುವರಿ ಬೋಗೋಜ" ಎಂದಿದೆ.

ಈ ಶಾಸನದಲ್ಲಿ ಹೊಯ್ಸಳ ದೊರೆ II ಬಲ್ಲಾಳನ ಉಲ್ಲೇಖವಿದೆ. ಇದೇ ಕಾಲಾವಧಿಯಲ್ಲಿ ತುರುಗಳ ರಕ್ಷಣೆಗಾಗಿ ಹೋರಾಡಿ ಮಡಿದ ವೀರಶಾಸನ ಇದಾಗಿದೆ. ಉಪ್ಪವಳ್ಳಿಯ ಮಾಚಗವುಡನ ಮಗ ಜಕ್ಕಗವುಡನು ತನ್ನ ಊರಿನ 'ತುರುಹರಿವಲ್ಲಿ' 'ಅವತೆಯ' 'ಬಾಸಿವೆಗಡೆಯೊಡನೆ' ಕಾದಾಡಿ ಇದಿರಾದವರನ್ನು ಕೊಂದು ತುರುಗಳು (ಗೋವು) ರಕ್ಷಣೆ ಮಾಡಿ ಕಾಳಗದಲ್ಲಿ ಮಡಿದು ಸುರಲೋಕ ಪ್ರಾಪ್ತನಾದನು.

**ಶಾಸನ ಗದ್ಯ ಹೀಗಿದೆ.**

"ಹೋಸಣ ವೀರಬಲ್ಲಾಳದೇವರು ಸುಖಸಂಕಥಾವಿನೋದದಿಂ, ದೋರಸಮುದ್ರದಲು ಪ್ರಿಥ್ವಿರಾಜ್ಯಂಗೆಯ್ಯುತ್ತಿರಲು....... ಉಪ್ಪವಳ್ಳಿಯ ಜಕಗೌಡನ ಮಗ ಮಾಚಗೌಡ ಮಾಚಗೌಡನ ಮಗ ಜಕಗೌಡ ತಂನುರ ತುರುಹರಿವಲ್ಲಿ ಅವತೆಯ ಬಾಸಿವೆಗಡೆಯೊಡನೆ ಕಾದಿ ಇದಿರಾಂತರಕೊಂದು ತುಱುವ ಮಗುಚಿ ಸುರಲೋಕಪ್ರಾಪ್ತನಾದ" ಎಂದಿದೆ. ಇಲ್ಲಿ 'ಮಾಚಗೌಡನ ಮಗ ಜಕಗವುಡನ' ಸರಿಯಾದರೂಪವಿರಬಹುದು. ಏಕೆಂದರೆ ಶಾಸನದಲ್ಲಿ ಲಿಪಿಕಾರನ ಬರವಣಿಗೆ ದೋಷದಿಂದ ಪುನರಾವರ್ತನೆಗೊಂಡಿರಬೇಕೆಂದು ತೋರುತ್ತದೆ.

**ಹರಿಹರಸೂರಿ (ಕ್ರಿ.ಶ.೧೧೯೪)**

ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕಿನ ಬೊಮ್ಮನಹಳ್ಳಿಯಲ್ಲಿ ಪಾಳುದೇವಾಲಯದ ಬಳಿ ನಿಂತಿರುವ ಶಾಸನವನ್ನು[೧೨] ಸೀಗುರಿಯ ಕಾಮನ ತಮ್ಮನಾದ ಈತನು ರಚಿಸಿದನೆಂದು ತಿಳಿದುಬರುವುದು. ಶಾಸನವನ್ನು ತಿದ್ದಿ ಕಲ್ಲಿನ ಮೇಲೆ ಬರೆದ ತ್ರಿವಿಕ್ರಮಕವಿಶ್ವರ ಮತ್ತು ಕಂಡರಿಸಿದ ಗಿಣಿದಾಸಮರೂ ಉಕ್ತರಾಗಿದ್ದಾರೆ. ಅದು ಹೀಗಿದೆ:

**ಹರಿಹರಸೂರಿ ಸೀಗುರಿಯ ಕಾಮನ ತಮ್ಮನುಮೇಶದತ್ತವಾ**
**ಗ್ವಿರಚಿಸಿದಂ ತ್ರಿವಿಕ್ರಮಕವೀಶ್ವರನೂರ್ಜಿತವಾಣಿ ತಿರ್ದಿ ತಾಂ**
**ಬರೆದನುಪೇತಲಕ್ಷಣಗಣಂ ಗುಣಿದಾಸಮನೊಪ್ಪುವನ್ತು ಕಂ**
**ಡರಿಸಿದನಿನ್ತು ಶಾಸನದೊಳಾದುದಯಂ ಧರೆಗುತ್ತರೋತ್ತರಂ॥**

ಹೊಯ್ಸಳ ಅರಸ ಇಮ್ಮಡಿ ಬಲ್ಲಾಳನ ಆಳ್ವಕೆಯ ಕಾಲಕ್ಕೆ ಸೇರಿದ ಕ್ರಿ.ಶ.೧೧೯೪ ಈ ಶಾಸನಕಾಲ. ಅರಸನು ಬಾಗುಳಿಯ ನೆಲೆವೀಡಿನಿಂದ ಆಳುತ್ತಿದ್ದನು. ಈ ಕಾಲದಲ್ಲಿ ಮಹಾಪ್ರಧಾನನಾದ ಮಾಚಿರಾಜಯ್ಯ ದಂಡನಾಯಕನು ಮಧುಸೂದನಪುರದ ತ್ರಿಕೂಟದ ಮಲ್ಲಿಕಾರ್ಜುನ ಮತ್ತು ಮಧುಸೂದನ ದೇವರ ನೈವೇದ್ಯ, ಅಂಗಭೋಗ, ನಂದಾದೀವಿಗೆ, ಪೂಜಾರಿ, ಹಾಗೂ ಪರಿಚಾರಕ ಜೀವಿತಕ್ಕಾಹಾರದಾನ ಮತ್ತು ದೇವಾಲಯದ ಜೀರ್ಣೋದ್ಧಾರ ಮುಂತಾದ ಧರ್ಮಕಾರ್ಯಗಳಿಗೆ ಆ ಗ್ರಾಮದ ಮಹಾಜನರ ಅನುಮತಿಯಿಂದ ದಾನ ನೀಡಿದನೆಂಬುದು ಶಾಸನದ ವಸ್ತು.

ಮಧುಸೂದನ ಪುರದ ಅಗ್ರಹಾರವನ್ನು ಸ್ಥಾಪಿಸಿ, ಅಲ್ಲಿ ತ್ರಿಕೂಟ ದೇವಾಲಯವನ್ನು ಕಟ್ಟಿಸಿದವನು ದಾನಿಯ ತಮ್ಮನಾದ ಮಧುಸೂದನ ದಂಡನಾಯಕನೆಂಬಾತ ಶಾಸನದಲ್ಲಿ ಅರಸನ ಹಾಗೂ ಮಧುಸೂದನ ದಂಡನಾಥನ ವಂಶಾವಳಿಯನ್ನು ನೀಡಿದೆ.

ಶಾಸನದ ಭಾಷೆ ಸಂಸ್ಕೃತ ಹಾಗೂ ಕನ್ನಡ ಗದ್ಯಪದ್ಯಮಯವಾಗಿರುವ ಈ ಶಾಸನ ಕಾವ್ಯವನ್ನು ಗಮನಿಸಿದಾಗ ಬಂಧದ ಬಿಗಿ ಶೈಲಿಯ ಸೊಗಸು ಕವಿಯ ಪ್ರೌಢಿಮೆಯನ್ನು ಸಾರುತ್ತದೆ. ಈ ಕಾವ್ಯರಚನೆಯಲ್ಲಿ ಕವಿ, ಶ್ಲೋಕ, ಕಂದ, ಶಿಖರಿಣಿ, ಮಹಾಸ್ರಗ್ಧರೆ, ಚಂಪಕಮಾಲೆ, ಉತ್ಪಲಮಾಲೆ ಮುಂತಾದ ಪದ್ಯಗಳನ್ನು ಬಳಸಿ ಬರೆದಿದ್ದಾನೆ.

**ಹೊಯ್ಸಳ ವಿಷ್ಣುವರ್ಧನನ ವರ್ಣನೆ :**

**ಮಲೆವ ವಿರೋಧಿ ಮಂಡಳಿಕ ಮಂಡಳಿಯಂ ಮರಳೊತ್ತಿ ಕೊಳ್ವ ಕೂ**
**ರಲಗಿನ ಕೋಳೆ ಕಾರ ವಿಳಯಾಹಿಯ ಕೋಳೆನೆ ಗೆಲ್ದು ನೀಳ್ದ ತೋ**
**ಳ್ವಲದೆ ನಿಮಿರ್ಚಿ ಧಾತ್ರಿಯನಪಾಕೃತಕಂಟಕಮಾಗೆ ರಾಜ್ಯದ**
**ಗ್ಗಲಿಕೆಯನಾಳ್ದು ಪಾಲಿಸಿದನ ಪ್ರತಿಮಂ ಕಲಿ ವಿಷ್ಣುವರ್ಧನಂ ॥**

**ಮಧುಸೂದನ ದಂಡನಾಥನ ಪುರ ವರ್ಣನೆ :**

**ತುಱುಗಿದ ನಂದನಂ ಪರಿಯ ಕಾಲ್ವೆ ಕಡಲ್ಗಿವೆ ತೋಡೆನಿಪ್ಪ ಪೆ**
**ರ್ಗೆಱೆಬಳಸಿರ್ದ ಪೆರ್ವೆಳಸು ಸಂದಣಿವೆತ್ತ ಜನಂ ವಿಳಾಸದಿಂ**
**ಮೆಱುವಮರಾಲಯಂ ಬಹುಗೃಹಂಗಳ ಸೊಂಪಿವಱೆಂದೆ ಚೆಲ್ವು ಕ**
**ಣ್ದೆಱೆದವೊಲೊಪ್ಪುಗುಂ ಪುರವರಂ ಮಧುಸೂದನ ದಂಡನಾಥನಾ ॥**

**ಕುಂದೂರು ರಾಯಣ್ಣ (ಕ್ರಿ.ಶ.೧೧೯೫):**

ಹಾಸನ ಜಿಲ್ಲೆಯ ಬೇಲೂರು ತಾಲೂಕಿನ ಅಗ್ಗಡಲು ಗ್ರಾಮದ ಶಾಸನವನ್ನು[೧೨೩] 'ಕುಂದೂರ ರಾಯಣ್ಣ'ನು ರಚಿಸಿದ್ದಾನೆ. ಯಾದವ ಕಾಲದ ವೀರಬಲ್ಲಾಳನ ಆಳ್ವಿಕೆಯ ಸಂದರ್ಭದಲ್ಲಿ ಗಡಿರೇಖೆಯ ಸಲುವಾಗಿ 'ಆಯೆರವಳ್ಳಿ' ಹಾಗೂ 'ಅಘಡಲ' ಎಂಬ ಎರಡು ಗ್ರಾಮಗಳ ಮದ್ಯೆ 'ಗಡಿಕಾಳಗ' ನಡೆದು 'ದಾಳಿಗವುಡ'ನು ಹೋರಾಡಿ ಮಡಿದನು ಆತನ ತಮ್ಮನಾದ 'ಸತಿಗವುಂಡ'ನು, ಬೋಕಗವುಂಡನು, ಪರೋಕ್ಷವಿನಯದಿಂದ 'ವೀರಗಲ್ಲನ್ನು' ಸ್ಥಾಪಿಸಿದರು. ಇದು ಈ ಶಾಸನದ ವಸ್ತು. ಶಾಸನದ ಕೊನೆಯಲ್ಲಿ "ಬರೆದ ಕುಂದೂರ ರಾಯಣ್ಣನು" ಎಂದಿದೆ.

**ಮಾರಮರಸ (ಕ್ರಿ.ಶ.೧೧೯೬)**

ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ರಾಯದುರ್ಗ ತಾಲೂಕಿನ ನಾಗೇನಹಳ್ಳಿಯಲ್ಲಿ ಹನುಮಂತ ದೇವಾಲಯದ ಆವರಣದಲ್ಲಿ ನಿಂತಿರುವ ಶಾಸನವನ್ನು ಈತ ಬರೆದಿದ್ದಾನೆ. "ಈ ಶಾಸನಮಂ ಮಾರಮರಸಂ ಪೇಳ್ದ ಕೊಳೂರ ಬಾಚಣ್ಣಂ ಬರೆದಂ" ಎಂಬುದು ಕ್ರಮವಾಗಿ ಶಾಸನಕವಿ ಹಾಗೂ ಲೇಖಕರ ಹೆಸರುಗಳನ್ನು ತಿಳಿಸುತ್ತದೆ.[೧೨೪]

ಶಾಸನ ಕಲಚೂರಿ ಅರಸ ಸಂಕಮದೇವನ ಕಾಲದ್ದು. ಇದು ಕ್ರಿ.ಶ.೧೧೯೬ಕ್ಕೆ ಸೇರಿದೆ. ಮಹಾಮಂಡಳೇಶ್ವರ, ತ್ರಿಭುವನಮಲ್ಲ ಭೋಗದೇವನ ಆಳ್ವಿಕೆಯ ಕಾಲದಲ್ಲಿ ಕಣಿಯಕಲ್ಲನಾಡಿನ ಚಂದೆಯಮಂಗಲದ ಪ್ರಭುವಾದ ಸಿಂಗಿಯ ಹೆಗ್ಗಡೆ ಎಂಬಾತನು ಕನ್ನೇಶ್ವರ, ಭೈರವ ಹಾಗೂ ಮಲ್ಲಿಕಾರ್ಜುನ ದೇವಾಲಯಗಳನ್ನು ನಿರ್ಮಿಸಿ, ದೇವರಿಗೆ ಭೂಮಿ ಮತ್ತು ಧನದಾನ್ಯಗಳನ್ನಿತ್ತುದು ಶಾಸನದ ವಸ್ತು, ಶಾಸನ ಬಹಳಷ್ಟು ಸವೆದು ಹೋಗಿದೆ ಚಂಪೂಶೈಲಿಯಲ್ಲಿರುವ ಇದರಲ್ಲಿ ಪ್ರಾರ್ಥನಾ ಮತ್ತು ಫಲಸ್ತುತಿ ಪದ್ಯಗಳು ಮಾತ್ರ ಸಂಸ್ಕೃತಶ್ಲೋಕಗಳು ಮಿಕ್ಕ ಭಾಗದಲ್ಲಿ ಕಂದಪದ್ಯ ಹಾಗೂ ಗದ್ಯವಿದೆ. ಕವಿಯ ಶೈಲಿ ಸರಳವಾದುದು ಎಂಬುದಕ್ಕೆ ಈ ಕಂದಪದ್ಯಗಳ ದೃಷ್ಟಾಂತವನ್ನು ನೋಡಬಹುದು:

**ದಾಸಿ ಸಿಂಗಯ್ಯ ಹೆಗ್ಗಡೆಯ ಅನ್ವಯ:**

> **ವಾಮರಸಂಗಂ ತತ್ಪ್ರಿಯ**
> **ಕಾಮಿನಿ ನಾಗಲೆಗಮುದಯಿಸಿದನಖಿಳಗುಣೋ**
> **ದ್ದಾಮಂ ಸಿಂಗಮ ಹೆಗ್ಗಡೆ**
> **ಭೂಮಿಸುತನೊಲವಿನಿಂದದಂ ಪಾಳಿಸುವಂ ॥**

**ಸಿಂಗಯ್ಯ ಹೆಗ್ಗಡೆಯ ಪತ್ನಿ ಮಾಚಲೆ:**

> **ಆತನ ಕುಲವಧು ಭುವನ**
> **ಖ್ಯಾತೆಯೆನಲ್ ನೆಗಳ್ದ ಹೆಗ್ಗಡಿತಿ ಮಾಚಲೆ ಸಂ**
> **ಪ್ರೀತಿಯೊಳೆ ಪತಿಗೆ ಯೋಜಿಪ**
> **ಳಾತತ ಸದ್ಧರ್ಮಮೆಸಪುದೆಂಬೀ ಬಗೆಯಂ ॥**

ಇದೇ ಶಾಸನಕವಿ ಇನ್ನೊಂದು ಶಾಸನವನ್ನು ಬರೆದಿದ್ದಾನೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ವಿಜಯನಗರ (ಹಂಪೆ) ದುರ್ಗಾ ದೇವಾಲಯದ ಬಲಭಾಗದಲ್ಲಿ ನಿಂತಿರುವ ಶಾಸನಾಂತ್ಯದಲ್ಲಿ "ಒಳ್ಗವಿತಿಳಕಂ ರೇವರಸರ ಮಗಂ ಮಾರಮರಸಂ ಹೇಳಿ ತಾನೆ ಬರೆದ ಶಾಸನ" ಎಂದು ಉಲ್ಲೇಖವಿರುವುದರಿಂದ ಈತನೇ ಈ ಶಾಸನಕವಿ[೧೨೫] ಎಂಬುದು ಸ್ಪಷ್ಟವಾಗುತ್ತದೆ. ಆದರೆ ಇವನ ವಿಷಯ ಹೆಚ್ಚೇನೂ ತಿಳಿದುಬರುವುದಿಲ್ಲ. ಪ್ರೌಢಕಾವ್ಯ ಬಂಧದಿಂದ ಬರೆದ ಈ ಶಾಸನವು ಈತ ಉತ್ತಮಕವಿ ಎಂಬುದನ್ನು ತಿಳಿಯಪಡಿಸುತ್ತದೆ. ಶಾಸನವನ್ನು ಕಲ್ಲಿನ ಎರಡೂ ಮುಖಗಳಲ್ಲೂ ಕಂಡರಿಸಿದೆ.

ಇಮ್ಮಡಿ ರಾಚಮಲ್ಲದೇವಾಪತ್ಯನಪ್ಪ ಶ್ರೀವೀರಕಲಿದೇವರಸರ ಕಾಲದಲ್ಲಿ ಈ ಶಾಸನ ಹುಟ್ಟಿದೆ. ಶಾಸನದ ಕಾಲ ಕ್ರಿ.ಶ.೧೧೯೯ ಕ್ಕೆ ಸರಿ ಹೊಂದುತ್ತದೆ. ಸಾಮಂತ ಮೈದುನ ಚೌಡ ಮತ್ತು ಅವನ ಪತ್ನಿ ಹಾಚಲೆ ಎಂಬುವರು ಹಂಪೆಯ ವಿರೂಪಾಕ್ಷ, ಪಂಪಾದೇವಿ, ಹಾಗೂ

ಭೈರವದೇವರಿಗೆ "ಜೀರ್ಣೋದ್ಧಾರ ಸಂಸ್ಥಾಪನಕ್ಕನಿಶಂ" ಮಾಡುವ ದೇವತಾರ್ಚನೆಗೆ ವೃತ್ತಿಗಳನ್ನು ಬಿಟ್ಟುದಲ್ಲದೆ, ವಸ್ತ್ರ ಭೂಷಣಾದ್ಯನೇಕ ಪೂಜಾ ಸಾಮಗ್ರಿ ನೀಡಿದರ ಬಗ್ಗೆ ವಿವರಗಳಿವೆ.

ಶಾಸನ ಗದ್ಯಪದ್ಯಾತ್ಮಕವಾಗಿದ್ದರೂ ಪದ್ಯದ ಸೊಗಸು ಗದ್ಯದಲ್ಲಿ ಮೂಡಿಬಂದಿಲ್ಲ. ಭಾಷೆ ಸಂಸ್ಕೃತ ಹಾಗೂ ಕನ್ನಡ, ಪಂಪಾಂಬಿಕೆ, ಪಂಪಾಕ್ಷೇತ್ರ, ದಾನಿಯ ಅನ್ವಯ ಮುಂತಾದ ವಿಷಯಗಳನ್ನು ಕವಿಯು ಸೊಗಸಾಗಿ ವರ್ಣಿಸಿದ್ದಾನೆ. ತನ್ನ ಶಾಸನಕಾವ್ಯ ರಚನೆಯಲ್ಲಿ ಈತ ಶ್ಲೋಕವಲ್ಲದೆ ಕಂದ, ಮತ್ತೇಭವಿಕ್ರೀಡಿತ ಮಹಾಸ್ರಗ್ಧರೆ, ಉತ್ಪಲಮಾಲೆ, ಚಂಪಕಮಾಲೆ, ಮುಂತಾದ ವೃತ್ತಗಳನ್ನು ಬಳಸಿಕೊಂಡಿದ್ದಾನೆ.

ಸಾಮಂತ ಚೌಡನ ಸಾಹಸ ಗುಣಗಳನ್ನು "ಬಣ್ಣಿಪೊಡೆ ವಾಸುಗಿಯಲ್ಲದೆ ಮಿಕ್ಕರಾರ್ಪರೆ" ಎಂದು ಪ್ರಶ್ನಿಸುತ್ತಲೇ "ಆದೊಡಮೆನ್ನಱಿವನಿತ್ತ ಬಣ್ಣಿಪೆ"ನೆಂದು ವಿನಯವಾಗಿ ತಿಳಿಸುತ್ತ ಕವಿ ಹೀಗೆ ವರ್ಣಿಸುತ್ತಾನೆ.:

**ಹರಿದೆಯ್ದಿಡಟ್ಟ ಮಟ್ಟತ್ತಡಸಿ ಹಿಡಿದೊತ್ತಿತ್ತು ಸುತ್ತಿತ್ತು ಕುತ್ತಿ**
**ತ್ತೊರಸಿತ್ತೆತ್ತಿತ್ತು ಬೀಸಿತ್ತೊಗೆದುದೊದೆದೀಡಾಡಿತೌಂಕಿತ್ತುರುಳ್ಚಿ**
**ತ್ತುರಮಂ ಮೆಟ್ಟಿತ್ತು ಮಾಟಿಾಂತರನಡಿಯಿಡೆ ಹೊಯ್ದಾಕ್ಕಲಿಕ್ಕಿತ್ತು ಕಾಯ್ದಿಂ**
**ಧುರದೊಳ್ಸಾಮಂತ ಲಕ್ಷ್ಮೀಧರನ ಮಯಿದುನಂ ಚೌಡನೆಂಬಾ ಮದೇಭಂ ॥**

ಕಾಮಶಾಸ್ತ್ರ ತಿಳಿಯುವ ನಾಲ್ಕು ಬಗೆಯ ಸ್ತ್ರೀ ಸ್ವಭಾವಗಳನ್ನು ಮೈದುನ ಚೌಡನ ಪತ್ನಿ ಹಾಚಲೆಯ ಗುಣಗಳನ್ನು ವರ್ಣಿಸುವಾಗ ಬಳಸಿಕೊಂಡಿರುವ ಕವಿಯು ಜಾಣ್ಮೆ ಶ್ಲಾಘ್ಯವಾದುದು, ಅದು ಹೀಗಿದೆ.:

**ಅನುಪಮಪಾತ್ರದಾನ ವರಹಸ್ತಿನಿ ಶಂಭುಪದಾರವಿಂದ ಚಿ**
**ತ್ತಿನ ದುರಿತೌಘ ಶಂಕಿನಿ ಲಸಚ್ಚವುಡಯ್ಯನ ಹೃತ್ಸರೋಜಪ**
**ದ್ಮಿನಿಯನೆ ನಾಲ್ಕು ಜಾತಿಯಬಳಾಗುಣಮಂ ಗುಣದಿಂದೆ ತಾಳ್ದಿದಳ್**
**ವಿನಯನಿಧಾನೆ ಹೆಗ್ಗಡಿತಿ ಹಾಚಲೆಯೆಂಬುದು ಧಾರಿಣೆಜನಂ ॥**

**ಅಡಿಟಿಪ್ಪಣಿಗಳು**

೧. E.C Vol II No. ೧೯೪; ಹಾಸನ (ಜಿ) ಶ್ರವಣಬೆಳಗೊಳ (ತಾ) ಚಿಕ್ಕಬೆಟ್ಟ. ೧೧೦೦ AD ಪು–೧೩೯

೨. EC Vol II No.೨೧೫; ಹಾಸನ (ಜಿ) ಶ್ರವಣಬೆಳಗೊಳ (ತಾ) ಚಿಕ್ಕಬೆಟ್ಟ ೧೧೦೦ AD ಪು–೧೪೬

೩. ಕ.ವಿ.ಶಾ.ಸಂ. VIII No.೧, ಬೀದರ್ (ಜಿ) ಬಸವಕಲ್ಯಾಣ (ತಾ) ಬಸವಕಲ್ಯಾಣ, ೧೧೦೦ AD ಪು–೧೭–೧೯

೪. ಕ.ವಿ.ಶಾ.ಸಂ. I No.೭ ಬಳ್ಳಾರಿ (ಜಿ) ಹರಪನಹಳ್ಳಿ (ತಾ) ಉಚ್ಚಂಗಿದುರ್ಗ ೧೧೦೦ AD, ಪು–೪೬೫–೬೬

೫. ಕ.ವಿ.ಶಾ.ಸಂ. I No. ೩೫ ಬಳ್ಳಾರಿ (ಜಿ) ಶಿರಗುಪ್ಪಿ (ತಾ) ಬಲ್ಲಕುಂದೆ ೧೧೦೦ AD ಪು.೧೧೪

೬. ಕ.ವಿ.ಶಾ.ಸಂ. I No. ೧೦. ಬಳ್ಳಾರಿ (ಜಿ) ಶೀರಗುಪ್ಪಿ (ತಾ) ಕುರುವಳ್ಳಿ. ೧೧೦೦ AD ಪು.೯೮.

೭. ಬಿ.ಎಲ್. ರೈಸ್ (ಸಂ) EC. Vol.VII No.೯೮ ಶಿವಮೊಗ್ಗ (ಜಿ), ಶಿಕಾರಿಪುರ (ತಾ), ಬಳ್ಳಿಗಾವೆ ೧೧೦೨, AD ಪು.೧೮೩

೮. ಬಿ.ಎಲ್.ರೈಸ್ (ಸಂ) EC Vol.VII No.೯೮–೯೯ ಶಿವಮೊಗ್ಗ (ಜಿ) ಶಿಕಾರಿಪುರ (ತಾ) ಬಳ್ಳಿಗಾವೆ ೧೧೦೨ AD ಪು.೧೮೩

೯. ಆರ್.ನರಸಿಂಹಾಚಾರ್: ಕರ್ನಾಟಕ ಕವಿ ಚರಿತೆ,–ಸಂ–೧. ಪು–೧೩೪.

೧೦. 159. E.I. Vol.V No.೧೩೧ ಧಾರವಾಡ (ಜಿ) ಹಿರೇಕೆರೂರ (ತಾ) ಅಬ್ಬಲೂರು ೧೧೦೪ AD ಪು.೨೩೧

೧೧. ಬಿ. ಶಿವಮೂರ್ತಿಶಾಸ್ತ್ರಿ; ಕನ್ನಡ ಸಾಹಿತ್ಯ ಪರಿಷಪ್ಪತ್ರಿಕೆ; ಸಂ.೪೫. ಸಂ;೧ ಜೂನ–೧೯೬೦. ಪು.೩–೪

೧೨. ಕ.ವಿ.ಶಾ.ಸಂ. V. ಭಾಗ–2 No.೪೧೦ ಕರೀಂನಗರ (ಜಿ)(ತಾ) ಸನಿಗರಂ, ೧೧೦೭, AD ಪು–೬೦–೬೨

೧೩. ಕ.ವಿ,ಶಾ.ಸಂ.1 No.೧೦೫. ಬಳ್ಳಾರಿ (ಜಿ) ಹರಪನಹಳ್ಳಿ (ತಾ) ಬಾಗಳಿ (ಗ್ರಾ) ೧೧೦೮ AD ಪು.೫೬೫-೫೬೬.

೧೪. B.K.I No.೮೦ ೧೯೩೨-೩೩. ಧಾರವಾಡ (ಜಿ) ಹಾವೇರಿ (ತಾ) ೧೧೧೯ AD ಪು-೩೩.

೧೫. ಕ.ವಿ.ಶಾ.ಸಂ.I, No.೧. ಬಳ್ಳಾರಿ (ಜಿ) ಹಗರಿಬೊಮ್ಮನಹಳ್ಳಿ (ತಾ) ಹನಶಿ, ೧೧೧೧ AD ಪು.೨೪೭-೪೮.

೧೬. ಕ.ವಿ.ಶಾ.ಸಂ.I No.೮೫, ಬಳ್ಳಾರಿ (ಜಿ), ಹಡಗಲಿ (ತಾ), ಹೂವಿನಹಡಗಲಿ (ಗ್ರಾ), ೧೧೧೧ AD ಪು-೪೧೮-೧೯.

೧೭. B.K.I Vol IV No.೭೪ ಧಾರವಾಡ (ಜಿ) ಗದಗ (ತಾ), ಲಕ್ಷ್ಮೇಶ್ವರ, ೧೧೧೨ AD ಪು-೭೪.

೧೮. A.R.S.I.E. 1939-40, No.೧೪೩ ಧಾರವಾಡ (ಜಿ), ಗದಗ (ತಾ), ಹೊಂಬಳ, ೧೧೧೬ AD ಪು-೧೪೯.

೧೯. ಕ.ವಿ.ಶಾ.ಸಂ.V ಭಾಗ-೨, No.೪೬೫. ಮಹಬೂಬನಗರ (ಜಿ) ಅಲಂಪುರ (ತಾ)(ಗ್ರಾ) ೧೧೧೨. AD ಪು-೧೩೪-೩೫.

೨೦. E.C. Vol-II. No.೧೩೬ ಗದಗ (ಜಿ) ರೋಣ (ತಾ), ಅಬ್ಬಿಗೇರಿ. ೧೧೧೩ AD ಪು-೧೫೬.

೨೧. ಕ.ವಿ.ಶಾ.ಸಂ. V ಭಾಗ-2 No.೫೮೧, ನಲ್ಗೊಂಡ (ಜಿ) ಭುವನಗಿರಿ (ತಾ) ಚಂದುಪಟ್ಲ ೧೧೧೫ AD ಪು-೨೭೪.

೨೨. E.C. Vol II No.೧೫೬ ಹಾಸನ (ಜಿ) ಶ್ರವಣಬೆಳಗೊಳ (ತಾ)(ಗ್ರಾ) ೧೧೧೫ AD ಪು-೯೨.

೨೩. E.V. Vol.II No.೧೩೬ ಹಾಸನ (ಜಿ) ಶ್ರವಣಬೆಳಗೊಳ (ತಾ)(ಗ್ರಾ) ೧೧೨೦ AD ಪು.೮೪.

೨೪. ಕ.ವಿ.ಶಾ.ಸಂ.V ಭಾಗ.೨. No.೬೧೧ ಗುಂಟೂರು (ಜಿ) ಬಾಪಟ್ಲ (ತಾ) ಚೆಬ್ರೋಲು ೧೧೨೦ AD ಪು-೩೧೮-೩೧೯.

೨೫. ಕ.ವಿ.ಶಾ.ಸಂ.I ಬಳ್ಳಾರಿ (ಜಿ) ಹರಪನಹಳ್ಳಿ (ತಾ) ಯರಬಾಳು ೧೧೨೨ AD, ಪು.೫೧೫–೫೧೬.

೨೬. E.C. Vol II. No.೧೩೫. ಹಾಸನ (ಜಿ) ಶ್ರವಣಬೆಳಗೊಳ (ತಾ) ಚಿಕ್ಕಬೆಟ್ಟ ೧೧೨೩ AD ಪು–೨೪೬

೨೭. E.C.Vol. XI, No.೨೩. ಚಿತ್ರದುರ್ಗ (ಜಿ) ದಾವಣಗೆರೆ (ತಾ) ದಾವಣಗೆರೆ ೧೧೨೩ AD ಪು–೧೧೮

೨೮. ಹಾ.ಮಾ. ನಾಯಕ (ಸಂ) ಕನ್ನಡ ಸಾಹಿತ್ಯ ಚರಿತ್ರೆ. ಸಂ–೩, ಪು–೨೪೮.

೨೯. B.K.I. Vol I, ಭಾಗ–2. No.೧೭೩, ಧಾರವಾಡ (ಜಿ) ಆಲೂರು ೧೧೨೪ AD ಪು–೧೧೩.

೩೦. ಕ.ವಿ.ಶಾ.ಸಂ. V. ಭಾಗ–೨, No.3೮೧ ಕಡಪ (ಜಿ) ಜಮ್ಮಲಮಡುಗು (ತಾ) ಪೆದ್ದಮುಡಿಯಂ, ೧೧೨೪ AD ಪು–೨೩–೨೫

೩೧. K.I. Vol V No.೨೦ ಧಾರವಾಡ (ಜಿ), ಹಾನಗಲ್ (ತಾ), ಬಾಳೂರು ೧೧೨೫ AD ಪು–೬೮.

೩೨. SII Vol. XI, No.೨ ಧಾರವಾಡ (ಜಿ)(ತಾ) ಮುಗದ (ಗಾ) ೧೧೨೫ AD ಪು–೧೭೭

೩೩. ಕ.ವಿ.ಶಾ.ಸಂ. I No.೩೬, ಬಳ್ಳಾರಿ (ಜಿ) ಹರಪನಹಳ್ಳಿ (ತಾ) ದುಗ್ಗವತಿ (ಗಾ) ೧೧೨೬ AD ಪು.೪೯೩–೯೫

೩೪. ಕ.ವಿ.ಶಾ.ಸಂ.V ಭಾಗ–೨ No.೬೦೪, ಮೆದಕ್ (ಜಿ) ಸಂಗಾರೆಡ್ಡಿ (ತಾ) ಪಟಾನ್‌ಚೆರು. ೧೧೨೬ AD ಪು–೩೦೪–೦೬.

೩೫. E.C. Vol.2 No.೭೭ ಹಾಸನ (ಜಿ) ಶ್ರವಣಬೆಳಗೊಳ (ತಾ) ಚಿಕ್ಕಬೆಟ್ಟ, ೧೧೨೯ AD ಪು.೪೨.

೩೬. E.C. Vol.XI. No.೧೮. ಕಡೂರು (ಜಿ) ಮೂಡಗೆರೆ (ತಾ) ಹಂತೂರು, ೧೧೩೦ AD ಪು.೧೬೦–೧೬೨.

೩೭. E.C. Vol.X No.136 ಹಾಸನ (ಜಿ) ಚನ್ನರಾಯಪಟ್ಟಣ (ತಾ) ಬಾಳಗಂಚಿ 1132 AD ಪು.586-87.

೩೮. B.K.I. Vol IV, No.೧೦೪ ಧಾರವಾಡ (ಜಿ) ಹಾವೇರಿ (ತಾ) ಹಾವೇರಿ ೧೧೩೪ AD ಪು-೩೩.

೩೯. E.C.Vol. XI. ೧೪೧ ಚಿಕ್ಕಮಗಳೂರು (ಜಿ)(ತಾ) ಕೋಡವಳ್ಳಿ ೧೧೩೪ ೦ಆ ಪು.೮೭-೮೮.

೪೦. ಕ.ವಿ.ಶಾ.ಸಂ.VIII, No.೧೫ ಬೀದರ (ಜಿ) ಭಾಲ್ಕಿ (ತಾ) ಗೋರಚಿಂಚೋಳಿ ೧೧೩೭ AD ಪು.೧೦೬-೧೦೭.

೪೧. E.C.Vol.Vll, No.೬೧ ಮಂಡ್ಯ (ಜಿ), ನಾಗಮಂಗಲ (ತಾ) ಲಾಲನಕೆರೆ ೧೧೩೮ AD ಪು.೬೧

೪೨. B.K.I. Vol IV, No.೫೬ ಧಾರವಾಡ (ಜಿ)(ತಾ) ಮದನಬಾವಿ (ಗ್ರಾ) ೧೧೩೮ AD ಪು.೧೫೯.

೪೩. ಆರ್.ನರಸಿಂಹಾಚಾರ್; ಕರ್ನಾಟಕ ಕವಿ ಚರಿತೆ: ಸಂ.೧, ೧೯೬೧, ಪು-೫೨೫.

೪೪. E.C.Vol. IX No.೨೬೮ ಹಾಸನ (ಜಿ) ಬೇಲೂರು (ತಾ) ಹಳೇಬೇಡು (ಗ್ರಾ) ೧೧೪೧ AD ಪು-258-262

೪೫. K.I. Vol. IV No.೨೬ ಧಾರವಾಡ (ಜಿ) ನರಗುಂದ (ತಾ) ನರಗುಂದ, ೧೧೪೭ AD ಪು-೧೩೨.

೪೬. ಹಾ.ಮಾ.ನಾ (ಸಂ). ಕನ್ನಡ ಸಾಹಿತ್ಯ ಚರಿತ್ರೆ.: ಸಂ.೩ ಮೈ.ವಿ.ವಿ. ೧೯೭೬. ಪು-೨೫೮.

೪೭. E.I. Vol. XVI No.೪೬ ಧಾರವಾಡ (ಜಿ), ಶಿರಹಟ್ಟಿ (ತಾ), ಲಕ್ಷ್ಮೇಶ್ವರ ೧೧೪೭ AD ಪು-೪೭.

೪೮. ಮೇವುಂಡಿ ಮಲ್ಲಾರಿ: ಕರ್ನಾಟಕದ ಕೆಲವು ಶಾಸನಕವಿಗಳು: ಪುಟ-೧೩೭.

೪೯. E.C. Vol. XI, No. ಹಾವೇರಿ (ಜಿ), ದಾವಣಗೆರೆ (ತಾ)(ಗಾ), ೧೧೪೭ AD ಪು-೪೧.

೫೦. K.I. Vol.I No.೩೩ ಬೆಳಗಾವಿ (ಜಿ), ಸವದತ್ತಿ (ತಾ), ಸಿರಸಂಗಿ, ೧೧೪೮ AD

೫೧. A.R.S.I.E. ಹಾವೇರಿ (ಜಿ), ರಾಣೆಬೆನ್ನೂರು (ತಾ), ಹುಲ್ಲತ್ತಿ, ೧೧೬೮ AD ಪು–೧೦೪.

೫೨. ಮೇವುಂಡಿ ಮಲ್ಲಾರಿ : ಕನ್ನಡ ನಾಡಿನ ಕೆಲವು ಶಾಸನಕವಿಗಳು, ಪು–೧೩೧.

೫೩. ಕ.ವಿ.ಶಾ.ಸಂ.I No.೮೧, ಬಳ್ಳಾರಿ (ಜಿ) ಹಡಗಲಿ (ತಾ) ಕೊಟ್ನಕಲ್ಲು ೧೧೪೮ AD ಪು–೪೦೪.

೫೪. ದೇವರಕೊಂಡಾರೆಡ್ಡಿ (ಸಂ), No.೩೯ ಬಾಗಲಕೋಟೆ (ಜಿ) ಬಾಗಲಕೋಟೆ (ತಾ) ಶಿರೂರು (ಗ್ರಾ) ಪುಟ–೩೯

೫೫. E.C. Vol. VIII No.೧೧೩. ಹಾಸನ (ಜಿ)(ತಾ) ಚಿಕ್ಕಕಡಲೂರು ೧೧೫೬ A.D. ಪು.೩೨೪–೩೨೫.

೫೬. E.C. Vol.VIII, No.೧೪೨ ಹಾಸನ (ಜಿ)(ತಾ) ಮುದುಗೆರೆ (ಗ್ರಾ) ೧೧೫೬ A.D. ಪು.೩೬೧.

೫೭. E.C. Vol.VIII, No.೧೪೨ ಹಾಸನ (ಜಿ)(ತಾ), ಮುದುಗೆರೆ (ಗ್ರಾ) ೧೧೫೬. A.D. ಪು–೩೬೧.

೫೮. ಕ.ವಿ.ಶಾ.ಸಂ X, No.೬೬, ಬಿಜಾಪುರ (ಜಿ)(ತಾ) ಬಾಬಾನಗರ. ೧೧೬೦. A.D. ಪು–೯೮–೧೦೦.

೫೯. E.C. Vol XXIV No.೧೦೪ ತುಮಕೂರು (ಜಿ) ಚಿಕ್ಕನಾಯಕನಹಳ್ಳಿ (ತಾ) ಹೆಗ್ಗೆರೆ ೧೧೬೧ A.D. ಪು–519–24.

೬೦. E.C. Vol.XXIV, No.೮೩ ತುಮಕೂರು (ಜಿ) ಚಿಕ್ಕನಾಯಕನಹಳ್ಳಿ (ತಾ) ಸೀಗೆಬಾಗಿ, ೧೧೬೧ A.D ಪು.೪೯೨–೯೪

೬೧. B.K.I. Vol. IV, No.೪. ಧಾರವಾಡ (ಜಿ), ಶಿರಹಟ್ಟಿ (ತಾ), ಲಕ್ಷ್ಮೇಶ್ವರ ೧೧೬೧ A.D. ಪು.೧೭೩

೬೨. E.C. Vol.XV No.೧೫೬ ಶಿವಮೊಗ್ಗ (ಜಿ), ಸಾಗರ (ತಾ), ಬೈರಾಪುರ ೧೧೬೪ A.D. ಪು–೩೬೦–೬೧.

೬೩. E.C. Vol.lX, No.೧೩೬ ಹಾಸನ(ಜಿ), ಬೇಲೂರು (ತಾ), ಬೇಲೂರು ೧೧೬೪ A.D. ಪು-೯೦-೯೪.

೬೪. E.C. Vol.Vll No.೬೩ ಮಂಡ್ಯ (ಜಿ), ನಾಗಮಂಗಲ (ತಾ), ಲಾಲನಕೆರೆ ೧೧೬೪ A.D. ಪು-೪೧

೬೫. E.C. Vol. VII, No.63 ಮಂಡ್ಯ (ಜಿ), ನಾಗಮಂಗಲ (ತಾ), ಲಾಲನಕೆರೆ, 1164 A.D. ಪು-42

೬೬. E.C. Vol X No.೮೮ ಹಾಸನ (ಜಿ), ಅರಸಿಕೆರೆ (ತಾ) ಕಣಿಕಟ್ಟೆ ೧೧೬೫ A.D. ಪು-೧೧೩

೬೭. E.C. Vol V No.೪೮ ಹಾಸನ (ಜಿ). ಅರಸಿಕೆರೆ (ತಾ) ಕಣಿಕಟ್ಟೆ ೧೧೬೫ A.D. ಪು-೪೮.

೬೮. ಹಾ.ಮಾ.ನಾ. (ಸಂ) ಕನ್ನಡ ಸಾಹಿತ್ಯ ಚರಿತ್ರೆ: ಸಂ:೪ ಮೈ.ವಿ.ವಿ.; ೧೯೭೭ A.D. ಪುಟ-೨೦೯.

೬೯. ಎಂ.ಎಂ.ಕಲಬುರ್ಗಿ (ಸಂ) 'ಶಾಸನ ವ್ಯಾಸಂಗ'-೧ ಧಾರವಾಡ, ೧೯೭೪ A.D. ಪುಟ-೧೭.

೭೦. ಕ.ವಿ.ಶಾ.ಸಂ. V ಭಾಗ-1, No.೨೦೦ ಅನಂತಪುರ (ಜಿ) ರಾಯದುರ್ಗ (ತಾ) ಗೋವಿಂದವಾಡ, ೧೧೬೯ A.D. ಪು-೨೨೧-೨೨

೭೧. ಕ.ವಿ.ಶಾ.ಸಂ. II, ಕೊಪ್ಪಳ (ಜಿ) ಯಲಬುರ್ಗಾ (ತಾ) ಕುಕನೂರು ೧೧೭೦ A.D. ಪುಟ.೨೦೯-೨೮.

೭೨. ಹಾ.ಮಾ.ನಾ. (ಸಂ) ಕನ್ನಡ ಸಾಹಿತ್ಯ ಚರಿತ್ರೆ, ಸಂ:೪ ಮೈ.ವಿ.ವಿ, ೧೯೭೭, ಪು-೨೧೦

೭೩. E.C.VIII No.೧೧೬ ಹಾಸನ (ಜಿ) ಹಾಸನ (ತಾ) ಜಕ್ಕೇನಹಳ್ಳಿ, ೧೧೭೦ A.D. ಪು.೩೩೧-೩೫

೭೪. ಹಾ.ಮಾ.ನಾ. (ಸಂ) ಕನ್ನಡ ಸಾಹಿತ್ಯಚರಿತ್ರೆ: ಸಂ-೪: ಮೈ.ವಿ.ವಿ. ೧೯೭೭ A.D. ಪು-೨೧೨.

೭೫. ಕ.ವಿ.ಶಾ.ಸಂ. VI, No.೧೧೫ ಸಾಂಗ್ಲಿ (ಜಿ) ಮೀರಜ್ (ತಾ) ಮಾಡಗಿಹಾಳ ೧೧೭೨ A.D. ಪು–೧೮೦–೮೬

೭೬. E.C.Vol.X. No.೨೩ ಹಾಸನ (ಜಿ) ಅರಸೀಕೆರೆ (ತಾ) ಅರಸೀಕೆರೆ, (ಗ್ರಾ) ೧೧೭೩ A.D. ಪು. ೨೬–೩೧

೭೭. E.C. Vol VIII, No೧೭೪ ಹಾಸನ (ಜಿ) ಹಾಸನ (ತಾ) ಮರ್ಕುಲಿ ೧೧೭೩ A.D. ಪು–೪೦೮

೭೮. ಆರ್.ನರಸಿಂಹಾಚಾರ್: ಕರ್ನಾಟಕ ಕವಿ ಚರಿತೆ; ಸಂ:೧. ಪು–೩೮೦

೭೯. E.C. Vol.X. No.೧೫೧ ಹಾಸನ (ಜಿ) ಅರಸೀಕೆರೆ (ತಾ) ಕೆಲ್ಲಂಗೆರೆ ೧೧೭೩ A.D. ಪು.೧೯೪

೮೦. E.C.Vol.X, No.೧೫೧ ಹಾಸನ (ಜಿ) ಅರಸೀಕೆರೆ (ತಾ) ಕೆಲ್ಲಂಗೆರೆ ೧೧೭೩ A.D. ಪು.೧೯೪

೮೧. K.I. Vol No.೩೮ ಧಾರವಾಡ (ಜಿ) ಗದಗ (ತಾ) ಚಿಕ್ಕಹಂದುಗೊಳ ೧೧೭೪ A.D. ಪು.೧೬೧

೮೨. ಕ.ವಿ.ಶಾ.ಸಂ. II, No೩. ಕೊಪ್ಪಳ (ಜಿ)(ತಾ) ಕವಲೂರು ೧೧೭೪ A.D. ಪು–೪–೧೧

೮೩. E.I. Vol. XIII ಬೆಳಗಾವಿ (ಜಿ)(ತಾ) ಬೆಳಗಾವಿ ಪು–೧೫–೩೬

೮೪. ಮೇವುಂಡಿ ಮಲ್ಲಾರಿ: ಕನ್ನಡ ನಾಡಿನ ಕೆಲವು ಶಾಸನ ಕವಿಗಳು, ಪು–೧೭೦

೮೫. E.C. Vol.V, No.೭೧ ಹಾಸನ (ಜಿ) ಅರಸೀಕೆರೆ (ತಾ) ಕಲ್ಲಂಗೆರೆ ೧೧೭೪ A.D. ಪು–೨೧೩

೮೬. ಕ.ವಿ.ಶಾ.ಸಂ. X No.೩ ಬಿಜಾಪುರ (ಜಿ) ಬಾಗೇವಾಡಿ (ತಾ) ಇಂಗಳೇಶ್ವರ ೧೧೭೬ A.D. ಪು–೩೮೮–೯೩.

೮೭. E.C.Vol.X. No.೧೦೬ ಹಾಸನ (ಜಿ) ಅರಸೀಕೆರೆ (ತಾ) ಶಂಕರನಹಳ್ಳಿ ೧೧೭೭ A.D. ಪು–೧೩೭–೩೯.

೮೮. E.C. Vol XI No.೮೪ ಚಿತ್ರದುರ್ಗ (ಜಿ) ದಾವಣಗೆರೆ (ತಾ) ಗಂಗನರಸಿ ೧೧೭೭ A.D. ಪು-೨೧೭

೮೯. E.C.Vol XI No.೮೬ ಚಿತ್ರದುರ್ಗ (ಜಿ) ದಾವಣಗೆರೆ (ತಾ) ಗಂಗನರಸಿ ೧೧೭೭ A.D. ಪು-೨೧೮.

೯೦. ಕ.ವಿ.ಶಾ.ಸಂ. I, No.೩೯ ಬಳ್ಳಾರಿ (ಜಿ) ಹಡಗಲಿ (ತಾ) ಹೊಳಲು, ೧೧೭೮ A.D. ಪು.೩೪೪-೪೮

೯೧. ಕ.ವಿ.ಶಾ.ಸಂ. II, No.೫೨ ಕೊಪ್ಪಳ (ಜಿ) ಯಲಬುರ್ಗಾ (ತಾ) ಕುಕನೂರು ೧೧೭೮ A.D. ಪು.೨೨೮-೩೫

೯೨. ಮೇವುಂಡಿ ಮಲ್ಲಾರಿ: ಕನ್ನಡ ನಾಡಿನ ಕೆಲವು ಶಾಸನಕವಿಗಳು: ಪು-೧೭೪-೭೫

೯೩. ಪೂರ್ವೋಕ್ತ. ಪುಟ-೧೭೬

೯೪. E.C. Vol V, No.೪೦ ಮೈಸೂರು (ಜಿ) ನರಸೀಪುರ (ತಾ) ತುಂಬಲ (ಗ್ರಾ) ೧೧೮೦ A.D. ಪು.೪೪೦-೪೪೧

೯೫. E.C. Vol.VII, No.೨೫ ಶಿವಮೊಗ್ಗ (ಜಿ) ಹೊನ್ನಾಳಿ (ತಾ) ಬೆಳಗುತ್ತಿ (ಗ್ರಾ) ೧೧೮೦ A.D. ಪು-೨೧೯-೨೨೦

೯೬. E.C. Vol.VII No.೫೦ ಶಿವಮೊಗ್ಗ (ಜಿ) ಹೊನ್ನಾಳಿ (ತಾ) ಬೆಳಗುತ್ತಿ (ಗಾ) ೧೧೮೦ A.D. ಪು-೨೨೦-೨೧

೯೭. SII Vol XX No.೧೭೪, ಬಿಜಾಪುರ (ಜಿ)(ತಾ)(ಗಾ). ಪು-೨೨೮

೯೮. E.C. Vol.II No.೩೩೬ ಹಾಸನ (ಜಿ)(ತಾ) ಶ್ರವಣಬೆಳಗೊಳ ೧೧೮೦ A.D. ಪು-೧೮೬

೯೯. SII Vol XVIII, No. ೨೯೯ ಧಾರವಾಡ (ಜಿ) ಹಾವೇರಿ (ತಾ) ಹರಳಹಳ್ಳಿ, ೧೧೮೧ A.D. ಪು-೩೮೪-೯೪

೧೦೦. ಕ.ವಿ.ಶಾ.ಸಂ. II No.೬೯ ಕೊಪ್ಪಳ (ಜಿ) ಯಲಬುರ್ಗಾ (ತಾ) ಕುಕ್ಕನೂರು, ೧೧೮೩ A.D. ಪು-೨೬೯-೭೨

೧೦೧. SII Vol XV No.೫೭ ಧಾರವಾಡ (ಜಿ) ಗದಗ (ತಾ) ಡಂಬಳ ೧೧೮೪ A.D. ಪು.೭೪-೭೮

೧೦೨. ಕ.ವಿ.ಶಾ.ಸಂ. V ಭಾಗ-೧ No.೨೯೭ ಕರ್ನೂರು (ಜಿ) ಆದೋನಿ (ತಾ) ನಂದವರಂ, ೧೧೮೬ A.D. ಪು-೩೩೪-೩೫

೧೦೩. E.C.Vol No I ಹಾಸನ (ಜಿ) ಚನ್ನರಾಯಪಟ್ಟಣ (ತಾ)(ಗ್ರಾ) ೧೧೮೬ A.D. ಪು-೪೦೭

೧೦೪. E.C.Vol X No.೫೬ ಹಾಸನ (ಜಿ) ಅರಸೀಕೆರೆ (ತಾ) ಬಾಣಾವರ ೧೧೮೭ A.D. ಪು-೭೬

೧೦೫. E.C.Vol X No. ೪೪ ಹಾಸನ (ಜಿ) ಅರಸೀಕೆರೆ (ತಾ)(ಗ್ರಾ) ೧೧೮೯ A.D. ಪು-೧೦

೧೦೬. E.C.Vol. X No.೪೪ ಹಾಸನ (ಜಿ) ಅರಸೀಕೆರೆ (ತಾ)(ಗ್ರಾ) ೧೧೮೯ A.D. ಪು-೫೭.

೧೦೭. E.C. Vol.X. No.೧೩ ಹಾಸನ (ಜಿ) ಅರಸೀಕೆರೆ (ತಾ) ಬಮ್ಮನಹಳ್ಳಿ ೧೧೯೪ A.D. ಪು.೧೭೯

೧೦೮. SII. Vol XV, No.೭೨ ಧಾರವಾಡ (ಜಿ) ನವಲಗುಂದ (ತಾ) ಅಣ್ಣಿಗೇರಿ ೧೧೮೭ A.D ಎಡಿ ಪು-೯೬

೧೦೯. E.C. Vol. IX, No.೨೪೪ ಹಾಸನ (ಜಿ) ಬೇಲೂರು (ತಾ) ಮಾರೇನಹಳ್ಳಿ ೧೧೮೮ A.D. ಪು.೨೩೨-೩೫.

೧೧೦. ಮೇವುಂಡಿ ಮಲ್ಲಾರಿ.:ಕನ್ನಡ ನಾಡಿನ ಶಾಸನಕವಿಗಳು :ಪು-೨೨೨

೧೧೧. E.C. Vol V No.೪೫ ಹಾಸನ (ಜಿ) ಚನ್ನರಾಯಪಟ್ಟಣ (ತಾ) ತರೀಕೆರೆ ೧೧೯೬ A.D. ಪು-೧೭೯

೧೧೨. ಡಿ.ಶ್ರೀನಿವಾಸಾಚಾರ್: ಯಶೋಧರ ಚರಿತೆ (ಸಂ) ಪು-XIV

೧೧೩. E.C. Vol. II No.೧೭೯ ಹಾಸನ (ಜಿ) ಚೆನ್ನರಾಯಪಟ್ಟಣ (ತಾ)(ಗಾ) ೧೧೯೧ A.D. ಪು-೧೭೯

೧೧೪. E.C. Vol.VI No.೪೫ ಹಾಸನ (ಜಿ) ಚನ್ನರಾಯಪಟ್ಟಣ (ತಾ) ತರೀಕೆರೆ ೧೧೮೯ A.D. ಪು-೨೨೨

೧೧೫. E.C. Vol XXlV No.೮೩ ತುಮಕೂರು (ಜಿ) ಚಿಕ್ಕನಾಯಕನಹಳ್ಳಿ (ತಾ) ಬೂದಿಹಾಳ ೧೧೯೦ A.D. ಪು-೪೪೧

೧೧೬. E.C.Vol. Xll No.೧೬ ತುಮಕೂರು (ಜಿ) ಚಿಕ್ಕನಾಯಕನಹಳ್ಳಿ (ತಾ) ಸೂಜಿಗಲ್ಲು ೧೧೯೦ A.D. ಪು-೧೨೧

೧೧೭. Sll. Vol XX No.೧೭೫ ಬಿಜಾಪುರ (ಜಿ) ಇಂಡಿ (ತಾ) ಹಿರೇಬೇವಿನೂರು ೧೧೯೦ A.D. ಪು.೧೮೧

೧೧೮. Sll Vol XVII No.೧೯೯ ಬಿಜಾಪುರ (ಜಿ) ಇಂಡಿ (ತಾ) ಚಿಕ್ಕಿಂಡಿ ೧೧೯೦ A.D ಪು.೨೭೯

೧೧೯. E.C. Vol.VII No.೧೦೫ ಶಿವಮೊಗ್ಗ (ಜಿ) ಶಿಕಾರಿಪುರ (ತಾ) ಬಳ್ಳಿಗಾವೆ ೧೧೯೨ A.D. ಪು-೧೯೭

೧೨೦. ಕ.ವಿ.ಶಾ.ಸಂ. V ಭಾಗ-೨ No.೩೬೬ ಕಡಪ (ಜಿ) ಪ್ರೊದ್ದುಟೂರು (ತಾ) ಚೌದೂರು ೧೧೯೨ A.D. ಪು-೫-೬

೧೨೧. E.C. Vol Xl No.೪೪ ಚಿಕ್ಕಮಗಳೂರು (ಜಿ)(ತಾ) ಉಪ್ಪವಳ್ಳಿ ೧೧೯೩ A.D. ಪು.೨೪-೨೫

೧೨೨. E.C. Vol X No.೧೩೯ ಹಾಸನ (ಜಿ) ಅರಸೀಕೆರೆ (ತಾ) ಬೊಮ್ಮೇನಹಳ್ಳಿ ೧೧೯೪ A.D. ಪು-೧೭೯

೧೨೩. E.C. Vol.IX No.೨೦೯ ಹಾಸನ (ಜಿ) ಬೇಲೂರು (ತಾ) ಅಗ್ಗಡಲು ೧೧೯೫ A.D. ಪು.೨೦೦

೧೨೪. ಕ.ವಿ.ಶಾ.ಸಂ. V ಭಾಗ-೧ No.೨೦೧ ಅನಂತಪುರ (ಜಿ) ರಾಯದುರ್ಗ (ತಾ) ನಾಗೇನಹಳ್ಳಿ. ೧೧೯೬ A.D. ಪು-೨೨೩-೨೨೫.

೧೨೫. SII Vol. IV No.೨೬೦ ಬಳ್ಳಾರಿ (ಜಿ) ಹೊಸಪೇಟೆ (ತಾ) ವಿಜಯನಗರ ೧೧೯೯ A.D. ಪು-೫೪-೫೭

# ಅಧ್ಯಾಯ–೬

## ೧೨ನೇ ಶತಮಾನದ ಶಾಸನಕವಿಗಳು

**ಕವಿ ಚಂದಣ (ಕ್ರಿ.ಶ.೧೨೦೦)**

ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ತಾಲೂಕಿನ ಉಪ್ಪವಳ್ಳಿ ಶಾಸನವನ್ನು[೧] ಈತ ಬರೆದಿದ್ದಾನೆ. ಇದನ್ನು ಶಾಸನ ಹೀಗೆ ಹೇಳಿದೆ, "ವೀರಗಲ ಪ್ರಸಸ್ತಿಯ ಬರದಾತ ವಾಸುದೇವ ಭಟ್ಟರ ಮಗ 'ಚಂದಣ'ನು" ಎಂದಿದೆ. ಶಾಸನವು ನಾಶವಾಗಿರುವುದರಿಂದ ಬಹಳಷ್ಟು ಮಾಹಿತಿ ದೊರೆಯುವುದಿಲ್ಲ ಒಟ್ಟು ೧೧ ಸಾಲುಗಳನ್ನು ಒಳಗೊಂಡಿದೆ. ಹೊಯ್ಸಳ ದೊರೆಗಳ ಪ್ರಸ್ತಾಪವಿದೆ. ಇದೊಂದು ವೀರಶಾಸನವಾಗಿದ್ದು 'ಬಮ್ಮಗೌಡನ' ಮಗ 'ಹುಲಿಯನು' ಎಂಬುವವನು ಇದನ್ನು ಸ್ಥಾಪಿಸಿದನು ಎಂದು ಕಂಡುಬರುವುದು. ಈ ಶಾಸನ ಕಾಲ ಕ್ರಿ.ಶ.೧೨೦೦.

ಇದೇ ಕವಿ ಬರೆದಿರಬಹುದಾದ ಕ್ರಿ.ಶ.೧೨೦೦, ಕಾಲದಲ್ಲಿಯೇ ಹೊರಡಿಸಿದಾಗ ಕಲ್ಯಾಣ ಚಾಲುಕ್ಯ ಅರಸ ತ್ರಿಭುವನ ಮಲ್ಲನ ಕಾಲಕ್ಕೆ ಈ ಶಾಸನ ಸೇರಿದೆ. ಗುಲ್ಬರ್ಗ ಜಿಲ್ಲೆಯ ಚಿಂಚೋಳಿ ತಾಲೂಕಿನ ದೇಗಲ್‌ಮಡಿ ಗ್ರಾಮದಲ್ಲಿ[೨] ಆರ್ಯಸಮಾಜದ ಕಟ್ಟಡದ ಆವರಣದಲ್ಲಿರುವ ಶಾಸನದ ಕೊನೆಯಲ್ಲಿ 'ಕವಿ ಚಂದನ ಕವಿತೆ' ಎಂಬ ಹೇಳಿಕೆಯಿದೆ ಶಾಸನ ತುಂಬಾ ನಶಿಸಿಹೋಗಿದೆ. ಉಳಿದ ಮಾಹಿತಿ ಹೀಗಿದೆ. ಕಲ್ಯಾಣ ಚಾಲುಕ್ಯ ಅರಸ ತ್ರಿಭುವನಮಲ್ಲ ಹಾಗೂ ಅರಸರ ವಂಶಾವಳಿ, ಅವನ ಕೈಕೆಳಗಿನ ಅಧಿಕಾರಿಯಾದ ಬಾಜದೇವನೆಂಬುವನ ಬಿರುದುಗಳು ಹಾಗೂ ಅನ್ವಯಗಳನ್ನು ಇದರಲ್ಲಿ ವರ್ಣಿಸಿದೆ.

**ಕೇಶವರಾಜ (ಕ್ರಿ.ಶ.೧೨೦೦)**

ಅವಿಭಜಿತ ಧಾರವಾಡ ಜಿಲ್ಲೆಯ, (ಇಂದಿನ ಹಾವೇರಿ ಜಿಲ್ಲೆ) ಹಿರೇಕೆರೂರು ತಾಲೂಕಿನ, ಅಬ್ಬಲೂರು[೩] ಶಾಸನವೆಂದೇ ಪ್ರಸಿದ್ಧಿ ಪಡೆದ ಈ ಶಾಸನವು ೧೨ನೇ ಶತಮಾನದಲ್ಲಿ ರಚನೆಗೊಂಡಿದೆ. ಈ ಶಾಸನಕವಿ ಕೇಸಿರಾಜನು ಚಮೂಪನಾಗಿದ್ದ, ಹಾಗೂ ಸೇನಾಪತಿಯಾಗಿದ್ದನು.

ಶಾಸನಕವಿಯ ಹೆಸರು ಪ್ರಸ್ತಾಪವಿರುವ ಪದ್ಯ :

**ಕೇಶವರಾಜ ಚಮೂಪಂ**
**ಶಾಸನಮಂ ಪೇಳ್ದ ನಂತದಂ ತಿರ್ದಿ ನಿರಾ**
**ಯಾಸದೆ ಬರೆದ ವನೀಶನ**
**ದಾಸಂ ಶಿವಚರಣ ಕಮಲಶರಣಂ ಸರಣಂ॥**

ಇಲ್ಲಿ ಕ್ರಮವಾಗಿ ಕೇಶವರಾಜ ಕವಿಯಾಗಿಯೂ 'ಸರಣ'ನು ಲೇಖಕನಾಗಿಯೂ ಕಾರ್ಯ ನಿರ್ವಹಿಸಿರುವುದು ಸ್ಪಷ್ಟವಾಗಿದೆ. ಈ ಶಾಸನವು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅತ್ಯಂತ ಮಹತ್ವದ ಶಾಸನವಾಗಿದ್ದು, ಜೈನಧರ್ಮದ ಅವನತಿಯನ್ನು, ವೀರಶೈವ ಧರ್ಮವು ಪ್ರಬಲವಾಗುತ್ತಿರುವುದನ್ನು ಕುರಿತು ಕಾವ್ಯಮಯವಾಗಿ ಹೇಳಿದೆ. ವೀರಶೈವ ಮತದ ಸುಧಾರಕನಾದ ಏಕಾಂತದ ರಾಮಯ್ಯನ ಜೀವನ ಚರಿತ್ರೆಯನ್ನು ಸಮಗ್ರವಾಗಿ ಚಿತ್ರಿಸಲಾಗಿದ್ದು ಹಲವಾರು ಪವಾಡಗಳಿಂದ ಏಕಾಂತದ ರಾಮಯ್ಯನು ಜೈನರ ವಿರುದ್ಧ ಗೆಲುವು ಸಾಧಿಸಿ, ಕಳಚೂರಿ ಅರಸ ಬಿಜ್ಜಳನಿಂದ ಜಯಪತ್ರ ಪಡೆದುದನ್ನು ಕವಿಯು ಚಿತ್ರಿಸಿದ್ದಾನೆ. ಈ ಶಾಸನವನ್ನು ಪುಟ್ಟ ಚಂಪೂ ಕಾವ್ಯವೆಂದು ಕರೆಯಬಹುದಾಗಿದೆ.

ಅವತಾರದ ಹಿನ್ನೆಲೆಯಿಂದ ಆರಂಭಿಸಿ ಆಳಂದೆಯಲ್ಲಿ ಜನಿಸುದುದು, ತೀರ್ಥಯಾತ್ರೆಗೆ ಹೊರಟ ಸಂದರ್ಭದಲ್ಲಿ ಪುಲಿಗೆರೆಗೆ ಬಂದು ನೆಲೆಸಿದುದು ಅಲ್ಲಿ ಸೋಮೇಶ್ವರನಿಂದ ಸ್ವಪ್ನ ಸಂದೇಶ ದೊರೆತುದು, ಅಬ್ಬಲೂರಿಗೆ ಬಂದು ವಾಸಿಸುವಾಗ ತನ್ನೊಡನೆ ಜಗಳಕ್ಕೆ ಬಂದ ಜೈನರನ್ನು ಎದುರಿಸಿ ಪವಾಡವನ್ನು ಮೆರೆದು ಅವರನ್ನು ಸೋಲಿಸಿ ಜಿನಮೂರ್ತಿಯನ್ನೊಡೆದು, ಆ ಎಡೆಯಲ್ಲಿ ವೀರಸೋಮೇಶ್ವರನನ್ನು ಪ್ರತಿಷ್ಠಾಪಿಸಿ, ಬಿಜ್ಜಳರಾಯ, ಕದಂಬಕಾಮದೇವ, ಚಾಳುಕ್ಯ ಸೋಮೇಶ್ವರ ಈ ಮೂವರಿಂದಲೂ ದತ್ತಿದಾನಗಳನ್ನು ಪಡೆವಲ್ಲಿಯ ವಿಷಯಗಳನ್ನು 'ಕೇಶವರಾಜಕವಿ' ಇಲ್ಲಿ ಅಭಿವ್ಯಕ್ತಿಸಿದ್ದಾನೆ:

ಈ ಶಾಸನದ ಕೆಲ ಪದ್ಯಗಳು :

**ಎನಲೇಕಾಂತದ ರಾಮಂ**
**ಮನಸಿಜರಿಪುಗಿತ್ತು ತಲೆಯನಾಂ ಪಡೆದಡೆ ನೀ**
**ವೆನಗೀವ ಪಣಮದೇನೆನೆ**
**ಮುನಿದೆಂದರ್ಜಿನನ ಕಿತ್ತು ಶಿವನಂ ನಿಲಿಪೆವ್ ॥**

**ಎನೆ ಕೊಡುವುದೋಲೆಯಂ ನೀ**
**ವೆನಗಿಂದಿತ್ತೋಲೆಗೊಂಡು ಶಿರಮಂ ತಾಂ ಭೋಂ**
**ಕೆನಲಿಚಿದು ಕುಡುವ ಪದದೊಳ್**
**ಶಿವನಂ ಸಾನಿಧ್ಯಮಾಡಿ ರಾಮಂ ನುಡಿಗುಂ ॥**

**ಉಡುಗದೆ ಶಂಭು ನೀನೆ ಶರಣೆನ್ನದಡಂ ಮನಮನ್ಯಭಾವದೊ**
**ಳ್ತೊಡರ್ದಡಮಾ ಕೃಪಾಣಮುಖದಿಂ ತಲೆ ಪೋಗದೆ ನಿಲ್ಕದಲ್ಲದಿ**
**ರ್ದಡೆ ಶಿವ ನಿನ್ನ ಮುನ್ನಡಿಗುರುಳ್ಗೆನುತಂ ಕಲಿ ರಾಮನಾರ್ದುಕೆ**
**ಯ್ದುಡದರಿದಿಕ್ಕಲಾರಯಿಸಿದಂ ಶಿರಮಂ ಶಿವನಂಘ್ರಿಯುಗ್ಮದೊಳ್ ॥**

**ಅರಗೈಗೊಂಡನೆ ಕಿತ್ತು ನೋಡಿದನೆ ಕೂರ್ಪಿಂಗಳ್ಕಿ ಮೆಯ್ಗಾಯ್ದನೇ**
**ಸೆರಗಂ ಪಾರ್ದನೆ ಬಾಳ್ಗೆ ಭಕ್ತರೆನುತಂ ಬಲ್ಲಾಳು ರಾಮಂ ಸ್ವಕಂ**
**ಧರಮಂ ಚೆಕ್ಕೆನೆ ಹುಲಕಟ್ಟಿ ನರಿವಂತ ಕ್ಲೇಶದಿಂದಾಗಳಂ**
**ತರಿದೀಶಾಂಘ್ರಿಯೊಳಿಕ್ಕಿ ಶಂಕರಗಣಕ್ಕಾನಂದವಂ ಮಾಡಿದಂ ॥**

**ಕವಿ ಸುಬ್ಬ (ಕ್ರಿ.ಶ.೧೨೦೦)**

ಅವಿಭಜಿತ ಧಾರವಾಡ ಜಿಲ್ಲೆಯ, (ಇಂದಿನ ಹಾವೇರಿ ಜಿಲ್ಲೆ) ರಾಣೆಬೆನ್ನೂರು ತಾಲೂಕಿನ, ಅಸುಂಡಿಯಲ್ಲಿರುವ ಶಾಸನವನ್ನು[೪] 'ಸುಬ್ಬ' ಕವಿಯು ರಚಿಸಿದನೆಂದು ತಿಳಿದುಬರುತ್ತದೆ. "ಲಿಖಿತಜನ ಸುಮಿತ್ರ" ನೆಂದು ಕರೆದುಕೊಂಡು ಕವಿ ಸುಬ್ಬ, ತಾನು 'ಮೃದುಲಲಿತ ವಿಚಿತ್ರಲಿಖಿತ ತಿಬ್ಬ'ನೆಂದೂ ಇವನು ಹೇಳಿಕೊಂಡಿದ್ದಾನೆ. ಪ್ರಸ್ತುತ ಶಾಸನವನ್ನು ಕುರಿತು ಹೀಗೆ ಕಂದ ಪದ್ಯದಲ್ಲಿ ಹೇಳಿದ್ದಾನೆ.:

**ಬರೆವರ ಮಿತ್ರಂ ಸುಬ್ಬಂ**
**ವಿರಚಿಸಿ ಪೆರ್ದ್ದೆಸೆವ ಗದ್ಯಪದ್ಯೋಕ್ತಿಗಳಿಂ ।**
**ಬರೆದಂ ಶಾಸನಮನಿದಂ**
**ಧರೆಯೊಳ್ ಬುಧರೊಲ್ದು ಪೊಗಳೆ ತಲಿತಾಕ್ಷರದಿಂ ॥**

ಅಸುಂಡಿ ಊರ ಗಾವುಂಡನಾದ ಅಶ್ವರಕುಲದ ಬರ್ಮ್ಮಗಾವುಂಡನೆಂಬುವನು ಆ ಊರಿನಲ್ಲಿಯೆ ಕಲಿದೇವಸ್ವಾಮಿಗೆ ಭೂಮಿದಾನವನ್ನಿತ್ತನೆಂಬುದು ಈ ಶಾಸನದ ತಾತ್ಪರ್ಯವಾಗಿದೆ. ಈ ದಾನವು ದೇವಾಲಯದ ಆಚಾರ್ಯರಾದ ಬ್ರಹ್ಮಸಿಂಗಿ ಪಂಡಿತರಿಗೆ ಒಪ್ಪಿಸಲ್ಪಟ್ಟಿತು. ಬರ್ಮಗಾವುಂಡ, ಬ್ರಹ್ಮಸಿಂಗಿ ಪಂಡಿತರು, ಅವರ ನೈಷ್ಟಿಕತೆ, ವಿದ್ವತ್ತು ಇವೆಲ್ಲವುಗಳನ್ನು ಕವಿಯು ಪದ್ಯರೂಪದಲ್ಲಿ ವರ್ಣಿಸಿದ್ದಾನೆ. ಕದಂಬ ಮಯೂರವರ್ಮನ ಅದೀನ ಅಧಿಕಾರಿ 'ಮಾಚಣನ' ಕುರಿತು, ವೃತ್ತದಲ್ಲಿ ಹೀಗೆ ಹೇಳಿದ್ದಾನೆ.:

**ಸ್ಥಿರನದ್ರೀಂದ್ರನಂಬುರಾಶಿಗಧಿಕಂ ಗಂಭೀರದಿಂ ದಾನದೊ**
**ಳ್ಪಿರಿಯಂ ಕಳ್ವಮಹೀಜದಿಂ ಸುಚರಿತಪ್ರೋದ್ಯದ್ಗುಣವ್ರಾತದೊ ।**
**ಳ್ಪರಮಾರ್ತ್ಥಂ ಮನುಗುನ್ನತಂ ವಿಜಯವಿಕ್ರಾನ್ತಕ್ಕೆ ಸಿಂಹಾಧಿಕಂ**
**ಧರೆಯೊಳ್ಪೆರ್ಗಡೆ ಮಾಚಣಂ ವಿಬುಧಸೇವ್ಯಂ ವಾಗ್ವಧೂಭೂಷಣಂ ॥**

**ಬರ್ಮಗಾವುಂಡನ ಗುಣಾವಳಿಯ ವರ್ಣನೆ ಹೀಗಿದೆ:**

**ವರತೇಜಪ್ರಭೆಯೊಳ್ ದಿನಾಧಿಪತಿಯಂ ಭಾಸ್ವತ್ಕಳಾಶೇಷದೊಳ್**
**ದೊರೆವೆತ್ತಿರ್ದ ಶರನ್ನಿಶಾಪತಿಯ ತಾನೌದಾರ್ಯದೊಳ್ ಕರ್ಣ್ಣನಂ**
**ಸ್ಥಿರಧೈರ್ಯಕ್ಕೆ ಕುಳಾಚಳಸ್ಥಿರತೆಯಂ ವಿಕ್ರಾನ್ತದೊಳ್ ಸಿಂಹದೊಳ್**
**ಸರಿಯಾದಂ ಜಡರೂರುಗರ್ದ್ದೊರೆಯೆ ಪೇಳ್ ಶ್ರೀಬರ್ಮ್ಮಗಾವುಂಡನೊಳ್ ॥**

**ಭೂವಿಶ್ರುತನಧಿಕವಾ**
**ಗ್ದೇವೀಮುಖಮುಕುರನಮಳಗೋತ್ರಪವಿತ್ರಂ ।**
**ಭಾವಕನೆಸೆವ ಪಶುಂಡಿಯ**
**ಗಾವುಣ್ಡಂ ಬಮ್ಮದೇವನೂರ್ಜಿತತೇಜಂ ॥**

ಶಾಸನದ ಬಹುಭಾಗ ಅಳಿಸಿ ಹೋಗಿದ್ದರಿಂದ ಬ್ರಹ್ಮಸಿಂಗಿ ಪಂಡಿತರು ಅವರ ಪಾಂಡಿತ್ಯ ಮುಂತಾದವುಗಳ ವರ್ಣನೆ ಪೂರ್ಣ ದೊರೆಯುವುದಿಲ್ಲ. ಈ ಶಾಸನವನ್ನು ರಚಿಸಿದುದು ಚಾಲುಕ್ಯ ಭೂಲೋಕಮಲ್ಲನ ಆಳ್ವಿಕೆಯಲ್ಲಿ ಕಾಲದ ಉಲ್ಲೇಖವಿದೆ. ಈ ಶಾಸನವನ್ನು ಸಾಹಿತ್ಯ ಚರಿತ್ರಕಾರರು ೧೨ನೇ ಶತಮಾನವೆಂದು ಗುರ್ತಿಸಿದ್ದಾರೆ.[೫]

**ಕೇಶವ ಪಂಡಿತ (ಕ್ರಿ.ಶ.೧೨೦೦)**

ಬೀದರ ಜಿಲ್ಲೆಯ, ಬಸವಕಲ್ಯಾಣ ತಾಲೂಕಿನ, ಬಸವಕಲ್ಯಾಣದ ಶಾಸನವನ್ನು[೬] 'ಕೇಶವ ಪಂಡಿತ'ನೆಂಬ ಶಾಸನಕವಿಯು ರಚಿಸಿದ್ದಾನೆ. ಇದು ತುಂಡು ಶಾಸನವಾಗಿದ್ದು ಸುಂಕವನ್ನು ಬಿಟ್ಟ ಬಗ್ಗೆ ತಿಳಿಸುತ್ತದೆ. ಉಳಿದ ವಿವರಗಳು ನಷ್ಟವಾಗಿವೆ. ಒಟ್ಟು ೯ ಸಾಲುಗಳನ್ನೊಳಗೊಂಡಿದ್ದು ಶಾಸನದ ಕೊನೆಗೆ "ಬರೆದ ಸೇನಬೋವ ಕೇಸವ ಪಂಡಿತರು" ಎಂದಿದೆ.

**ಬಮ್ಮರಸ (ಕ್ರಿ.ಶ.೧೨೦೦)**

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ 'ಪುರ' ಎಂಬ ಗ್ರಾಮದ ಶಾಸನವನ್ನು[೭] 'ಬರೆದಂ ಸೇನಬೋವ ಬಮ್ಮರಸ' ಎಂದು ಉಲ್ಲೇಖಗೊಂಡಿದೆ. ಈ ಶಾಸನದ ಕಾಲ ಕ್ರಿ.ಶ.೧೨೦೦. ಬಾಹತ್ತರ ನಿಯೋಗಾಧಿಪತಿ ರೇಚಿಮಯ್ಯ ದಂಡನಾಯಕನ ಅಧಿಕಾರಿ ಚಿಮಯ್ಯ ದಂಡನಾಯಕನು ಮುಖ್ಯವಾಗಿ ಶ್ರೀಕರಣಗಳು, ಅಗ್ರಹಾರ ಸಿಂಧನೂರು, ಮಾದನೂರು, ನಿಡುಗೋಳ ಮುಂತಾದ ಸ್ಥಳಗಳ ಸಮಸ್ತನಾನಾದೇಸಿ ಮುಮ್ಮರಿ ದಂಡಗಳು, ಮಹಾನಾಡಾಗಿ ದೇವಸಭೆ, ಬ್ರಹ್ಮಸಭೆ, ರಾಜಸಭೆಯ ಸನ್ನಿಧಾನದಲ್ಲಿ ಸಭೆ ಸೇರಿದ್ದರು.

ಇವರ ಜೊತೆಗೆ ಬಾಚಿದೇವರಸ,... ಮುಖ್ಯವಾಗಿ ವೀರಹಂಪರಸ, ಕಂಪಲಿ ಹಂಪದೇವ ಜೋಯಿಯರಸ, ಕಣ್ಣರಸ, ಗೋಯಿಯರಸ, ಸೆಳೆಯಜ್ಜರಸ, ಹಂಪರಸ, ಭೋಗರಸ, ನಿಡವದ ಹೆಂಮ್ಮರಸ, ಬಾಗದೇವಿಯ ಹರಿಹರ, ಕಾಚರಸನ ಹರಿಹರ, ಹಿಂಡಿಯ ಬೀವರಸ, ಬಮ್ಮಕನೂರು ಬಾಚರಸ, ನರೆಯಂಗಲ್ಲು ವಿರುಪರಸ, ಹೂಡೂರು ದೊಣಮರಸ, ಅಣ್ಣಲದೇವ, ಮನಾಮಾಡಿಯ ಬಾಚರಸ, ಮುಂತಾದವರಲ್ಲದೆ ಕೆಳವಾಡಿನಾಡ ಮನ್ನೆಯ ಶೆಟ್ಟರು, ಬಮ್ಮಣ ಎಂಟು ಹಿಟ್ಟು ಸಹಿತ ನಲವತ್ತೆಂಟು ಮನ್ನೆಯರು ಈ ಮಹಾಸಭೆಯಲ್ಲಿ ಸೇರಿದ್ದರು. ಇವರೆಲ್ಲಾ

ಒಮ್ಮತದಿಂದ ಶ್ರೀಗವರೇಶ್ವರದೇವರ ಅಂಗಭೋಗ, ರಂಗಭೊಗ, ಪಾತ್ರಪಾವುಳ, ಚೈತ್ರಪವಿತ್ರ, ಪಂಚಪರ್ಬ್ಬ, ಮಹಾನೈವೇಧ್ಯ, ಭೋಜನ ಮತ್ತು ಅತಿಥಿ, ಬ್ರಾಹ್ಮಣ, ತಪೋಧನರ ನಿತ್ಯಾಹಾರದಾನಕ್ಕೆ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ, ಸೊತೆಗೆ, ಸುಣ್ಣಕ್ಕೆ, ದೇವರ ಬ್ರಹ್ಮಪುರಿಯ ಬ್ರಾಹ್ಮಣ ವೇತನಕ್ಕೆ ಹಿರಿಯಕೋಲಲ್ಲಿ ಒಂದು ಮತ್ತರು ದಾನ ನೀಡುತ್ತಾರೆ. ಈ ದಾನವು ಸದಾಕಾಲ ನಡೆಯುವಂತಾಗಲು 'ಉಮ್ಮಲಗುರುಕೆ' ಎಂಬ ಗ್ರಾಮವನ್ನು ತ್ರಿಭೋಗಾಬ್ಯಂತರವಾಗಿ, ಅಷ್ಟಭೋಗ, ತೇಜ ಸಾಮ್ಯಸಹಿತ, ಸರ್ವ್ವನಮಸ್ಯವಾಗಿ ಶ್ರೀಗವರೇಶ್ವರದೇವರಿಗೆ ದೇವರ ಸನ್ನಿಧಾನದಲ್ಲಿ, ದೇವರಾಸಿ ಪಂಡಿತರ ಕೈಯಲ್ಲಿ ಧಾರಾಪೂರ್ವಕವಾಗಿ ಧಾರೆಯನೆರೆದು ಕೊಟ್ಟರು. ಬಿಟ್ಟಸೆಟ್ಟಿ ಐವತ್ತೊಕ್ಕಲು ದೇವರ ದತ್ತಿಯಾಗಿ ಕಲ್ಲುದೇವಪುರದ ಕೇರಿಯಲ್ಲಿ ಇಪ್ಪತ್ತೆರಡು ಕೈ+ಆರು ಕೈ ಅಗಲ ಅಳತೆಯ ಇಪ್ಪತ್ತೈದು ಮನೆಗಳನ್ನು ಕೊಟ್ಟರು.

ಈ ಶಾಸನವನ್ನು ಬರೆದ ಸೇನಬೋವ ಬಂಮರಸ, ನರಸಿಂಹದೇವರ ಅರಮನೆಯ ಸೇನಬೋವ ಬಸವರಸನಿಗೆ ಹಿರಿಯಕೋಲಲ್ಲಿ ಒಂದು ಮತ್ತರನ್ನು ನೀಡುತ್ತಾರೆ. ದೇವರ ಅರಮನೆಯ ಬಡಗಿ ಕಾಳೋಜನಿಗೆ ಒಂದು ಮತ್ತರು, ಇನ್ನೊಬ್ಬ ಬಡಗಿ ಕಲ್ಲೋಜನಿಗೆ ಅರೆಮತ್ತರು, ದೇವರ ಅರಮನೆಯ ಸ್ಥಾನದವರಿಗೆ ಬಾಚಿದೇವನ ಎರೆಯಲ್ಲಿ ೫ ಮತ್ತರು ಭೂಮಿ ನೀಡುತ್ತಾರೆ, ಕೆಳವಡಿನಾಡ ಹಿರಿಯ ಬೀರವಣಿಗ ಕವಡಿಯ ಕೇತಿಸೆಟ್ಟಿ ಮುಂದಾಳತ್ವದಲ್ಲಿ ಬೀರವಣಿಗರು ಬೀರವಣದಲ್ಲಿ ಒಂದು ಗದ್ಯಾಣ ಕೊಟ್ಟಿರುತ್ತಾರೆ. ಶಾಸನವು ಸರಳ ಗದ್ಯದಲ್ಲಿದೆ. ಸುಭಗ ಶೈಲಿಯನ್ನೊಳಗೊಂಡಿದೆ.

**ಪಾರ್ಶ್ವ (ಕ್ರಿ.ಶ.೧೨೦೪)**

ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಕಲ್ಲುಹೊಳೆ ಬಸದಿಯೊಂದರಲ್ಲಿ ಶಿಲಾ ಶಾಸನವನ್ನು[೮] ಈ ಕವಿಯು ರಚಿಸಿದ್ದಾನೆ. ಈ ಶಾಸನದಲ್ಲಿ ಒಟ್ಟು ೭೦ ಸಾಲುಗಳಿವೆ ಕನ್ನಡ ಪದ್ಯಗಳ ಸಂಖ್ಯೆ ೪೦ ಇದೆ. ಕ್ರಿ.ಶ.೧೨೦೪ರಲ್ಲಿ ಈ ಶಾಸನ ರಚನೆಗೊಂಡಿದೆ.

ಕಾರ್ತವೀರಯ್ಯದೇವನು ಶ್ರೀಶಾಂತಿನಾಥದೇವರ ಅಂಗರಂಗಭೋಗಕ್ಕೆ ಅಲ್ಲಿರುವ ಮುನಿಜನಗಳ ಆಹಾರ ಭೈಷಜ್ಯ ಶಾಸ್ತ್ರದಾನಕ್ಕೆ ಭೂಮಿಯನ್ನು ಬಿಟ್ಟಂತೆಯೂ, ಸೆಟ್ಟಿಯರೂ ಮುಮ್ಮರಿದಂಡುಗಳು ಕೆಲವೊಂದು ಆಯಗಳನ್ನು ಬಿಟ್ಟಂತೆ ಈ ಶಾಸನ ಹೇಳಿದೆ.

ಶಾಸನದಲ್ಲಿ ಅರಸರು, ಒಡೆಯರು, ಆಚಾರ್ಯರು ಮೊದಲಾದವರ ಗದ್ಯಪ್ರಶಸ್ತಿ ಚಿಕ್ಕ ಚೊಕ್ಕವಾಗಿವೆ. ದತ್ತಿ ದಾನ ವಿವರಣೆಗಳ ವಿವರಣೆಯೂ ಅಂದವಾಗಿದೆ. ಮುಕ್ಕಾಲುಭಾಗ ಶಾಸನ ಪದ್ಯರೂಪದಲ್ಲಿಯೇ ಇದೆ. ಸೊಗಸಾದ ಚಿಕ್ಕ ನೀಳ್ಗಬ್ಬವನ್ನು ರಚಿಸಿದ ಕವಿ ಪಾರ್ಶ್ವ ತನ್ನ ಹೆಸರನ್ನು ಹೇಳುವಾಗ ಈ ಶಾಸನಕೃತಿ ಕುರಿತು ಹೀಗೆ ಹೇಳಿದ್ದಾನೆ.:

**ಲಲಿತಪದಾರ್ಥಾಳಂಕೃತಿ**
**ಗಳಿನೊಸರ್ವರಸಂಗಳಿಂದೆ ಬುಧರೊಳ್ಪುಳಕಾ**
**ವಳಿಸಸ್ಯಮೊಗೆಯೆ ಕವಿಕುಳ**
**ತಿಳಕಂ ಶಾಸನಮನೊಲ್ದು ಪೇಳ್ದಂ ಪಾರ್ಶ್ವಂ ॥**

ಇದರಲ್ಲಿ ಕವಿ ಸಂತ್ಕೃತಿಯ ಮುಖ್ಯ ಗುಣ ಯಾವುದು? ಅದರ ಪರಿಣಾಮ ಎಂಥದು? ಎಂಬುದನ್ನು ರಸವಿಮರ್ಶೆ ಮಾಡಿದ್ದಾನೆ. 'ಕವಿಕುಳತಿಳಕ' ಎಂಬ ಬಿರುದನ್ನು ಹೊಂದಿರುವ ಈ ಶಾಸನಕವಿ ಪಾರ್ಶ್ವನು ಕನ್ನಡದಲ್ಲಿ 'ಪಾರ್ಶ್ವನಾಥ ಪುರಾಣವನ್ನು' ರಚಿಸಿದ (ಕ್ರಿ.ಶ.೧೨೨೨) ಈ ರಟ್ಟ ಕಾರ್ತವೀರಯ್ಯನ ಆಸ್ಥಾನದಲ್ಲಿಯೇ ಇದ್ದಂತೆ ತಿಳಿಯುವ 'ಕವಿಕುಲತಿಲಕ' ಎಂಬ ಬಿರುದು ಪಡೆದ ಪಾರ್ಶ್ವಪಂಡಿತನಾಗಿರಬೇಕು ಎಂಬುದಾಗಿ ಕರ್ನಾಟಕ ಕವಿಚರಿತೆಕಾರರು ಅಭಿಪ್ರಾಯಪಡುತ್ತಾರೆ.

ಕವಿಚರಿತೆಕಾರರು ಹೇಳಿದ ಪುರಾಣಕರ್ತೃ ಪಾರ್ಶ್ವನು ತನ್ನನ್ನು 'ಸುಕವಿಜನಮನೋಹರ್ಷವರ್ಷ' ಎಂದು ಕೊಂಡಿದ್ದಾರೆ. 'ಒಸರ್ವರಸಂಗಳಿಂದೆ ಬುಧರೊಳ್ ಪುಳಕಾವಳಿ ಸಸ್ಯ ಮೊಗೆಯೆ' ತಾನು ಈ ಶಾಸನವನ್ನು ಪೇಳ್ದನೆಂದು ಶಾಸನಕವಿಪಾರ್ಶ್ವ ಹೇಳಿಕೊಂಡಿದ್ದಾನೆ. ಈ ಎರಡರಲ್ಲಿಯೂ ಸಾಮ್ಯಭಾವವಿದೆ ಇದರಿಂದ ಪುರಾಣ ಮತ್ತು ಶಾಸನ ಕರ್ತೃಗಳಲ್ಲಿ ಅಭಿನ್ನತೆಯಿದೆ ಎಂದು ಸೂಚಿಸುವುದು.

ಪಾರ್ಶ್ವನ ಶಾಸನಕಾವ್ಯದಿಂದ ಆಯ್ದ ಪದ್ಯಗಳು ಹೀಗಿವೆ.:

**ಶ್ರೀಕವಿವಿಬುಧಸ್ತ್ರೀರ**
**ತ್ನಾಕಳಿತಂ ಜಳಧಿಯಂದಡಿಂ ಯದುಕುಲಲ**
**ಕ್ಷ್ಮೀಕಾಂತಂ ಶ್ರೀತಕಮಳಾ**
**ನೀಕಂ ಹಗರಟಗೆ ನಾಡು ಜಗದೊಳೆಸೆಗುಂ ॥**

**ಸಬಳಂಗೊಂಡು ಸಮುಗ್ರಸಿಂಹಮಹಿಪಂ ಮೇಲ್ವಾಯಿಸಲ್ವಾಜಿಯಂ**
**ಸಬಳಂ ವೈರಿಬಳಂ ಜವಂಗೆ ಕಬಳಂ ಬೇತಾಳಕ್ಕೆ ಕೊ**
**ಟ್ಟ ಬಲಿಶ್ರೇಣಿ ಬಳಾರಿಗಿತ್ತ ಬಡಿನಂ ಹಾರ್ದಿರ್ದ ಹರ್ದಂಗೆ ಬೇ**
**ರ್ದ ಬೃಕಕ್ಕೆತ್ತಿದ ಬುತ್ತಿಯೆಂದೊಡಹಿತರ್ಮೆಯ್ದೋಱೆ ಮಾಱಾಂಪರೆ ॥**

ಕ್ಷತ್ರಿಯಮಸ್ತಕಾಭರಣರಾಜನೃಪಂ ವಿಭು ಸಿಂಹಸೂನು ರ
ತ್ನತ್ರಯ ಮೂರ್ತಿ ನಿರ್ಮಳಿನಧರ್ಮಮೆನುತ್ತದನೊಲ್ದು ಪೇಳ್ವವೋ
ಲ್ಧಾತ್ರಿಗೆ ಮಿಕ್ಕ ಕಲ್ವೊಳೆಯೊಳೆತ್ತಿಸಿದಂ ಜಿನಶಾಂತಿಗೇಹಮಂ
ನೇತ್ರವಿಚಿತ್ರಮಂ ಮಹಿಕಿರೀಟಮನಪ್ರತಿಮತ್ರಿಕೂಟಮಂ ॥

**ಬಾಳಚಂದ್ರ (ಕ್ರಿ.ಶ.೧೨೦೪) :**

ಕ್ರಿ.ಶ.೧೨೦೪ರ ಎರಡು ಶಿಲಾಶಾಸನಗಳು[೯] ಬೆಳಗಾವಿಯ ಕೋಟೆಯೊಳಗಣ ಜಿನಾಲಯ ವೊಂದರಲ್ಲಿದ್ದವು ಈಗ ಬ್ರಿಟೀಷ್ ಮ್ಯೂಸಿಯಂನಲ್ಲಿ ಇಡಲಾಗಿದೆ. ಅವೆರಡೂ ಶಾಸನಗಳ ಕಾಲಾವಧಿ ಒಂದೇಯಾಗಿದೆ. ಈ ಎರಡೂ ಶಾಸನಗಳನ್ನು ರಚಿಸಿದ ಕವಿ ಬಾಳಚಂದ್ರನೇ ಎಂಬುದು ಉಲ್ಲೇಖ ಪ್ರಮಾಣದಿಂದದ ತಿಳಿಯುತ್ತದೆ.

ಈ ಎರಡೂ ಶಾಸನಗಳಲ್ಲೂ ಕವಿಯ ಹೆಸರನ್ನೊಳಗೊಂಡ ಕಂದ ವೃತ್ತಗಳು ಇಂತಿವೆ.

**ದೋಷವ್ಯತೀತಮರ್ಥವಿ
ಶೇಷಮಿದೆನೆ ಪೇೞ್ದನೊಲ್ದು ಶಾಸನಮಂ ಪೀ
ಯೂಷಸಸಮಸೂಕ್ತಿ ಚಾತು
ರ್ಭಾಷಾಕವಿಚಕ್ರವರ್ತಿ ಕವಿಕಂದರ್ಪಂ.**

**ಪ್ರಹತಾರಿವ್ರಜ ಕಾರ್ತವೀರ್ಯಸಚಿವಂ ಶ್ರೀಬೀಚಿರಾಜಂ ಯಶೋ
ಮಹಿತಂ ಪೇಟಿಮೆನಲ್ಕೆ ಶಾಸನಮನೊಳ್ಪಿಂ ಬಾಳಚಂದ್ರ ಗುಣಾ
ಗ್ರಹಿ ವಿದ್ವಜ್ಜನ ಸಮ್ಮತ ಸ್ಫುಟಪದಾರ್ಥಳಂಕ್ರಿಯಾಸಂಕುಳಾ
ವಹಮಪ್ಪಂತಿರೆ ಪೇೞ್ದನಿಂತು ಕವಿಕಂದರ್ಪಂ ಬುಧಾದೀಶ್ವರಂ ॥**

ಶ್ರೀಮನ್ಮಾಧವಚಂದ್ರ ತ್ರೈವಿದ್ಯಚಕ್ರವರ್ತಿ ವಾಕ್ಸುಧಾರಸನಾಭ್ಯುದಿತ ನಿತ್ಯಸಾಹಿತ್ಯ ವನಕಮಲ ಮರಾಳಂ ಬಾಳಚಂದ್ರದೇವಂ ಪೇೞ್ದ ಶಾಸನಂ.

ಈತ ಜೈನಕವಿ ಸಕಲಚಂದ್ರನ ಮಗನಾದ ಮಾಧವ ಚಂದ್ರನ ಶಿಷ್ಯ 'ಚತುರ್ಭಾಷಾ ಕವಿ ಚಕ್ರವರ್ತಿ' ಎಂಬ ಬಿರುದು ಪಡೆದವನು, ಅಲಂಕಾರ ಹಾಗೂ ಸ್ಫುಟಾರ್ಥಗಳಿಂದ ಕೂಡಿದ ಕಾವ್ಯರಚಿಸಬಲ್ಲ ಶಕ್ತಿ ಉಳ್ಳವನು. ಅಲಂಕಾರಗಳು ಕಾವ್ಯವನ್ನು ಉಕ್ಕಿನ ಕಡಲೆಯಾಗಿಸಬಾರದು. ನುಡಿ ಅಮೃತಕ್ಕೆ ಸಮಾನವಾದುದು ಎಂಬ ಅಭಿಪ್ರಾಯವನ್ನು ಸಹಜ ಮನೋಹರವಾದ ಕಾವ್ಯ ರಚಿಸುವ ಈ ಕವಿಗೆ 'ಕವಿಕಂದರ್ಪ' ಬಿರುದು ಸರಿಯಾದುದೇ ಆಗಿದೆ.

ಕವಿ ಬಾಳಚಂದ್ರ ಹೇಳಿಕೊಂಡ ಮಾತು ಆತ್ಮಸ್ತುತಿಯಲ್ಲ ಎಂಬುದಕ್ಕೆ ಕವಿಯ ಶಾಸನಪದ್ಯಗಳು ಮಾತ್ರ ನಿದರ್ಶನವಲ್ಲದೆ ಇತರೆ ಪ್ರಸಿದ್ಧ ಕವಿಗಳಾದ ಈತನ ಸಮಕಾಲೀನರಾದ 'ಪಾರ್ಶ್ವಪಂಡಿತ' ಮತ್ತು ಜನ್ನ ಇಬ್ಬರೂ ಈತನ ಕವಿತ್ವ ಮೆಚ್ಚಿ ಹೊಗಳಿದ್ದಾರೆ.[೧೦]

ಪಾರ್ಶ್ವನು ಬಾಳಚಂದ್ರನನ್ನು ಪಾರ್ಶ್ವನಾಥಪುರಾಣದಲ್ಲಿ ಹೀಗೆ ಹೊಗಳಿದ್ದಾನೆ:

**ವಕ್ರೋಕ್ತಿಭವಯಶೋಜ್ಯೋ**
**ತ್ಸ್ನಾಕ್ರಾಂತಪರಾವತೀಪತಿಮಿರಂ ಧರಣೀ**
**ಚಕ್ರದೊಳತಿಚಿತ್ರಂ ಕವಿ**
**ಚಕ್ರಪ್ರಿಯನೆನಿಸಿ ಬಾಳಚಂದ್ರ ನೆಗಳ್ದಂ ॥**

ಎಂದು ಕೊಂಡಾಡಿದ್ದಾರೆ. ಈತ ಶಾಸನಗಳಲ್ಲಿ ಸ್ರಗ್ಧರೆ, ಮಹಾಸ್ರಗ್ಧರೆ, ಚಂಪಕಮಾಲೆ, ಉತ್ಪಲಮಾಲೆ, ಮತ್ತೇಭವಿಕ್ರೀಡಿತ ವೃತ್ತಗಳನ್ನು ಕಂದಪದ್ಯಗಳನ್ನೂ ಬಳಸಿದ್ದಾನೆ. ಶಾಸನ ಗದ್ಯಪದ್ಯಗಳಿಂದ ಕೂಡಿದ್ದು ದತ್ತಿಯ ವಿವರಗಳು ಗದ್ಯದಲ್ಲಿದ್ದು ದೀರ್ಘವಾದ ವಿವರಣೆಯಿಂದ ಕೂಡಿದೆ.

ಕಾರ್ತವೀರಯ್ಯನ ಆತ್ಮೀಯನೂ ಶ್ರೀಕರಣಾಗ್ರಗಣ್ಯನೂ ಅಖಿಳ ಮಂತ್ರಿಜನ ವರೇಣ್ಯನೂ ಆದ ಬೀಟರಾಜನು ಮಾಡಿಸಿದ ರಟ್ಟಜಿನಾಲಯದ ಶಾಂತೀಶ್ವರ ದೇವರ ನಿತ್ಯಪೂಜೆ ಅಭಿಷೇಕಾದಿಗಳಿಗೆ ಜಿನಾಲಯದ ಆಚಾರ್ಯರಾದ ಮೂಲಸಂಘ ಕೊಂಡಕುಂದಾನ್ವಯ ದೇಸಿಯಗಣ ಪುಸ್ತಕಗಚ್ಚ ಹನಸೋಗೆ ಪ್ರತಿಬದ್ಧರಾದ ಶುಭಚಂದ್ರ ಭಟ್ಟಾರಕ ದೇವರಿಗೆ ನಾಲ್ಸಾಸಿರ್ವರುಂ ಕಾರ್ತವೀರ್ಯನೂ ಮಹಾಜನಂಗಳೊಡನೆ ವೇಣುಗ್ರಾಮದಲ್ಲಿ ಕೊಟ್ಟ ಸ್ಥಳವ್ರಿತ್ತಿಯ ವಿಷಯವನ್ನು ಶಾಸನ ನಿರೂಪಿಸಿದೆ. ಅಲ್ಲದೆ ಇನ್ನೂ ಕೆಲವರು ಆ ಶಾಂತಿನಾಥದೇವರ ಬಸದಿಗೆ ಕೊಟ್ಟ ಆಯದ ವಿವರವನ್ನೂ ನಿರೂಪಿಸಿದೆ.

ಎರಡನೇ ಶಾಸನದಲ್ಲಿ ಅದೇ ದೇವರ ಸೇವೆಗಾಗಿ ಅದೇ ಗುರುಗಳಿಗೆ 'ಕುಂಡಿಮೂರುಸಾಸಿರ'ದೊಳಗಣ ಕೊರವಳ್ಳಿಗಂಪಣದ ಉಂಬರವಾಣಿಯೆಂಬ ಗ್ರಾಮವನ್ನು ದತ್ತಿಬಿಟ್ಟ ವಿಷಯವಿದೆ.

ಈ ಕವಿಯು ಜನ್ನನ ಪತ್ನಿಯಾದ ಲಕುಮಾದೇವಿಯ ಗುರುವೆಂದು ಆ ಕವಿಯ 'ಅನಂತನಾಥಪುರಾಣ'ದಿಂದ ತಿಳಿಯುತ್ತದೆ. (೧, ೩೨, ೩೩) ಇವನು ಪ್ರಸಿದ್ಧನಾದ ಕವಿಯೆಂದು ಜನ್ನನು ಹೇಳುತ್ತಾನೆ. ಪಾರ್ಶ್ವಪಂಡಿತನು ತನ್ನ 'ಪಾರ್ಶ್ವನಾಥಪುರಾಣ'ದಲ್ಲಿ ಸ್ತುತಿಸಿರುವ ಬಾಳಚಂದ್ರನೂ ಈತನೆ ಆಗಿರಬಹುದು. ಈತನ ಗ್ರಂಥಗಳಾವುವು ನಮಗೆ ದೊರೆತಿಲ್ಲ.

'ಪ್ರಾಭೃತಕತ್ರಯ' 'ಪರಮಾತ್ಮಪ್ರಕಾಶಿಕಾ' 'ಸಮಯಸಾರ' ಮೊದಲಾದ ಗ್ರಂಥಗಳಿಗೆ ಕನ್ನಡ ವ್ಯಾಖ್ಯಾನವನ್ನು ಬರೆದ ಬಾಳಚಂದ್ರ (೧೧೭೬)ನೆಂಬ ಒಬ್ಬ ಕವಿಯ ಉಲ್ಲೇಖವಿದ್ದು, ಈತನನ್ನು ಆಧ್ಯಾತ್ಮೀ 'ಬಾಳಚಂದ್ರ'ನೆಂದು ಗುರುತಿಸಿದ್ದಾರೆ. ಈತ ಜೈನನಾಗಿದ್ದು ಮೂಲಸಂಘದ

ದೇಶೀಯಗಣದ ಪುಸ್ತಕಗಚ್ಛದ ಕೊಂಡಕುಂದಾನ್ವಯಕ್ಕೆ ಸೇರಿದವನು, ಈತನ ಕಾಲ ೧೧೭೬ ಆಗಿರದೆ ೧೨೦೦ ಆಗಿರಬೇಕೆಂದು ಕೆಲವರು ಊಹಿಸಿದ್ದಾರೆ.

ಮಂಡ್ಯ ಜಿಲ್ಲೆಯ ತಿಪ್ಪೂರಿನಲ್ಲಿರುವ ಎರಡು ಶಾಸನಗಳಲ್ಲಿ ಬಾಳಚಂದ್ರನ ಹೆಸರು ಉಲ್ಲೇಖವಾಗಿದೆ. "ತಿಪ್ಪೂರ ಕವಿಕಂದರ್ಪರ ಸಿಸ್ಯ ಬಾಳಚಂದ್ರದೇವರ ಮಕ್ಕಳು" ಎಂದಿದ್ದು ಈ ಶಾಸನ ವೀರಬಲ್ಲಾಳನ ಕಾಲಕ್ಕೆ ಸೇರಿದುದಾಗಿದೆ. "ಉಭಯ ಭಾಷಾಕವಿ ಚಕ್ರವರ್ತಿ ಕಂದರ್ಪದೇವರ ಮದವಳಿಗೆ ಸೊನ್ನಾದೇವಿಯರ ಮಗ ಕಾಣೂರ್ಗಣ ತಿಳಕನುಮಪ್ಪ ಬಾಳಚಂದ್ರದೇವರು" ಎಂದಿದ್ದು ಈತ ಮೇಲೆ ಹೇಳಿರುವ ಶಾಸನದ ಕರ್ತೃವಾಗಿರಬೇಕೆಂದು ಕೆಲವರು ಸೂಚಿಸಿದ್ದಾರೆ.[೧೧]

ಹೀಗೆ ಉಕ್ತವಾಗಿರುವ ಬಾಳಚಂದ್ರರು ವಿಭಿನ್ನ ವ್ಯಕ್ತಿಗಳೇ ಅಥವಾ ಒಬ್ಬನೇ ಎಂಬುದನ್ನು ನಿರ್ಧರಿಸಲು ಸಾಕಷ್ಟು ಆಧಾರಗಳು ದೊರೆತಿಲ್ಲ.

**ಕಲ್ಲಯ್ಯ (ಕ್ರಿ.ಶ.೧೨೦೫)**

ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ತಾಲೂಕಿನ ಗಂಜಿಕಟ್ಟೆಗ್ರಾಮದಲ್ಲಿ ಪಾಂಡುರಂಗ ಬೆಟ್ಟದ ಮೇಲಿರುವ ಜನ್ನೆಶ್ವರ ದೇವಾಲಯದ ಮುಂದಿರುವ ಶಾಸನದ ಕರ್ತೃ ಈತ[೧೨] ಶಾಸನವು ಹೊಯ್ಸಳ ನಾರಸಿಂಹನ ಆಳ್ವಿಕೆಯ ಕಾಲಕ್ಕೆ ಸೇರಿದ್ದು ಇದರ ಕಾಲಾವಧಿ ಕ್ರಿ.ಶ.೧೨೦೫, ಶಾಸನದ ಕೊನೆಯಲ್ಲಿ: "ಈ ಶಾಸನಮ ಹೇಳ್ದು ಬರೆದ ಲಿಕ್ಮರಸರ ಮಗ ಹುಲ್ಲೂರು ಸೇನಬೋವ ಕಲ್ಲಯ್ಯಂಗೆ ನಡಬಯಲೊಳಗೆ ಗದೆ ಕಂ ೨೦೦ ಬೆದ್ದಲರಕೆರೆಯೊಳಗೆ ಮತ್ತರೂ ಬೆಲ್ಲವತ್ತದ ಹಸಲು ಮಣಲು ಮತ್ತರೊಂದು" ಎಂದಿದೆ.

ಈತನ ತಂದೆ ಲಿಕ್ಮರಸನೆಂಬುವನು ಹುಲ್ಲೂರಿನ ಸೇನಬೋವನಾಗಿದ್ದನೆಂಬುದೂ ತಿಳಿದುಬರುತ್ತದೆ. ಕವಿಯ ಬಗ್ಗೆ ಉಳಿದ ಯಾವ ವಿವರಗಳೂ ಶಾಸನದಲ್ಲಿ ದೊರೆಯುವುದಿಲ್ಲ. ಧರ್ಮೆಶ್ವರದೇವರ ಅಂಗಭೋಗ, ರಂಗಭೋಗ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ ನಾಗಭೂಷಣಪಂಡಿತರ ಕಾಲುತೊಳೆದು ಹೂಲಿಯ ಕೆರೆಯನ್ನು ಅಂಡನೂರಿನ ನಾಳ್ಪ್ರಭುಗಳೂ ಬಮ್ಮಗಾವುಂಡ ಮತ್ತಿತರರೂ ಹೊಳಲಕೆರೆ, ಹೊನುಕುಂದ, ದೊಡ್ಡಗಟ್ಟದ ನಾಳ್ಪ್ರಭುಗಳೂ ಹುಲ್ಲೂರ ಏಚವೆನಾಯಕಿತಿ ಮತ್ತಿತರರೂ ಸೇರಿ ದತ್ತಿಬಿಟ್ಟ ವಿಷಯವನ್ನು ಶಾಸನದಲ್ಲಿ ನಿರೂಪಿಸಿದೆ.

ಶಾಸನದಲ್ಲಿ ಪ್ರಾಸಂಗಿಕವಾಗಿ ಬಂದಿರುವ ಹೊನುಕುಂದದ ಹಾಗೂ ಧರ್ಮೇಶ್ವರದೇವರ ವರ್ಣನೆ ಹೀಗಿದೆ.:

**ತಿಳಕತಮಾಳತಾಳವಕುಳಂ ಸಹಕಾರವಶೋಕಚಂಪಕಂ**
**ಕುಳಿರ್ವ ಸರೋಜಷಂಡಮಲರ್ದೊಪ್ಪುವ ಮಲ್ಲಿಗೆ ಮಾಧವೀಲತಾ**
**ವಳಿ ತನಿಗೊಬ್ಬಿದಿಕ್ಷುವನ ಮೊಯ್ಯನೆ ತೀಡುವ ಮಂದವಾಯು ಕ**
**ಣ್ಗೊಳಿಸುವುದೆತ್ತ ನೋಡೆ ಹೊನುಕುಂದದ ವೃತ್ತಿಯತೀವರಮ್ಯದಿಂ ॥**

**ಸುರರಾಜೇಂದ್ರಕಿರೀಟತಾಟತ–ಪದದ್ವಂದ್ವಾರವಿಂದಂ ನಿಶಾ**
**ಕರಬಿಂಬ ಪ್ರಕರ ಪ್ರಸೂನರಚನ ಪ್ರೋತ್ತುಂಗಗಂಗಾಂಬು ಶೇ**
**ಖರನಬ್ಜಾಸನ ಚಕ್ರಿನಮ್ನಚರಣಂ ಸಾಮಂತ ಮಾಳಂಗೆ ಮಾ**
**ಳ್ಕಿರದಿಷ್ಟಾರ್ಥಮನದ್ರಿಜಾತೆರಮಣಂ ಧರ್ಮೇಶ್ವರಂ ಸಂತತಂ ॥**

**ವಾಮನ (ಕ್ರಿ.ಶ.೧೨೦೬)**

ಈತನು ಬಾಗಲಕೋಟೆ ಜಿಲ್ಲೆಯ, ಬಾಗಲಕೋಟೆ ತಾಲೂಕಿನ, 'ಮಂಕಣಿಯ' ಶಿವದೇಗುಲದ ಮುಂದಿರುವ ಶಾಸನದ[೧೩] ಕರ್ತೃವೆಂಬುದು ಈ ಕೆಳಗಿನ ಕಂದಪದ್ಯದಿಂದ ತಿಳಿದುಬರುತ್ತದೆ.

**ಶಾಸನವಾಗಿರೆ ಪೇಳ್ವುದು**
**ಶಾಸನವಂ ಬರೆವುದಂತೆ ಶಾಸನವಾಗಲ್**
**ಶಾಸನಪದ್ಧತಿ ಲಿಖಿತಂ**
**ಶಾಸನಕಾದಂಬರಿಯೆ ವಾಮನರಚಿತಂ ॥**

ಕವಿ ತನ್ನ ಶಾಸನವನ್ನು 'ಕಾದಂಬರಿ'ಯೆಂದು ಹೇಳಿಕೊಂಡಿರುವುದಲ್ಲದೆ ಅಲ್ಲಲ್ಲಿ ಪುರವರ್ಣನೆ, ದೇವತಾವರ್ಣನೆ, ಸಮುದ್ರ ದ್ವೀಪಕ್ಷೇತ್ರ ವಿಷಯ ವರ್ಣನೆ, ರಾಜಾವಳಿವರ್ಣನ, ಎಂದು ಮೊದಲಾಗಿ ಸೂಚಿಸಿ ಅವುಗಳನ್ನು ಕ್ರಮವಾಗಿ ವರ್ಣಿಸುವುದು ಈ ಶಾಸನದ ವೈಶಿಷ್ಟ್ಯವಾಗಿದೆ. ಶಾಸನದ ರಚನೆಯು ಬಹುಮಟ್ಟಿಗೆ ಚಂಪೂಕಾವ್ಯದ ರಚನೆಯ ರೀತಿಯಲ್ಲಿ ಅನುಸರಿಸಿರುವುದು ಇದರಿಂದ ಕಂಡುಬರುತ್ತದೆ. ಬಹುಶಃ ಇಲ್ಲಿ 'ಕಾದಂಬರಿ' ಎಂಬ ಪದವನ್ನು 'ಕಾವ್ಯ' ಎಂಬರ್ಥದಲ್ಲಿ ಬಳಸಿರುವಂತೆ ತೋರುತ್ತದೆ. ಶಾಸನವು ಗದ್ಯ ಪದ್ಯಾತ್ಮಕವಾಗಿದ್ದು, ಸಂಪೂರ್ಣವಾಗಿ ಕನ್ನಡದಲ್ಲಿದೆ. ಮತ್ತೇಭವಿಕ್ರೀಡಿತ, ಉತ್ಪಲಮಾಲೆ, ಚಂಪಕಮಾಲೆ, ವೃತ್ತಗಳನ್ನೂ, ಕಂದಪದ್ಯವನ್ನೂ ಕವಿ ಬಳಸಿದ್ದಾನೆ. ಶಾಸನದ ಬಹುಭಾಗ ಈಗ ತ್ರುಟಿತವಾಗಿರುವುದರಿಂದ ಕವಿಯ ಕವಿತಾಸಾಮರ್ಥ್ಯದ ಬಗ್ಗೆ ಹೆಚ್ಚು ಹೇಳಲು ಬರುವುದಿಲ್ಲ.

ಯಾದವ ಸಿಂಘಣನ ಕಾಲಕ್ಕೆ ಸೇರಿದ ಈ ಶಾಸನಕಾಲ ಕ್ರಿ.ಶ.೧೨೦೬, ಸಹದೇವ ದಂಡನಾಥನ ಸೋದರ ಕೇಶವದೇವನು 'ಮಂಕಣಿಯಲ್ಲಿ' ತ್ರಿಕೂಟವೊಂದನ್ನು ನಿರ್ಮಿಸಿದುದನ್ನು ಸಹದೇವನು ಅಲ್ಲಿ ಲಕ್ಷ್ಮೀನೃಸಿಂಹ, ಸಿರಿಧರ ವಾಸುದೇವರನ್ನೂ ಪ್ರತಿಷ್ಠಿಸಿದುದಲ್ಲದೆ ದತ್ತಿನೀಡಿದ ವಿಷಯವನ್ನೂ ಶಾಸನ ನಿರೂಪಿಸುತ್ತದೆ. ಈ ಸಹೋದರರು ಸಹವಾಸಾನ್ವಯ ಹಾಗೂ ವಾಧಸ್ಯಗೋತ್ರದವರು. ಇವರು ತದ್ದವಾಡಿನಾಡನ್ನಾಳುತ್ತಿದ್ದರು. ಕವಿಯಶೈಲಿಗೆ ಎರಡು ಉದಾಹರಣೆಗಳು, ಸಿಂಘಣನ ಶೌರ್ಯದ ವರ್ಣನೆ:

**ಅದಟಂದಾಂತ ವಿರೋಧಿಮಂಡಳಿಕರಂ ಸಾಮಂತರಂ ರಾಯರಂ**
**ಕದನೋದ್ಯೋಗದೊಳೆಯ್ದೆ ಸಂಹರಿಸಿಯೆ ನಿಃಕಂಟಕಂ ಮಾಡಿದಂ**
**ವಿದಿತಂ ಸಬ್ಬಧರಿತ್ರಿಯಂ ನಿಜಭುಜಾವಷ್ಟಂಭದಿಂ ತಾಳ್ದಿದಂ**
**ಯದುವಂಶೋರ್ಜಿತಲಕ್ಷ್ಮೀಯಂ ಭುವನದೊಳ್ ವಿಶ್ರಾಂತದಿಂ ಸಿಂಹಣಂ ॥**

**ಸೋವಲ ದೇವಿಯ ವರ್ಣನೆ :**

**ವಿನಯಮುದಾರ ಮುದ್ವಯಶಮುನ್ನತಿಯೊಳ್ಪು ನೆಗೆರ್ತವೆತ್ತ ಪೆಂ**
**ಪಿನ ಕಣಿ ಮಾನವಾಕೃತಿಯ ಭಾರತಿ ರೂಪವಿಳಾಸಲಕ್ಷ್ಮೀ ಪಾ**
**ವನಭಿಮಾನ ಜಾಹ್ನವಿಯೆನಲ್ನೆಗಳ್ದಳ್ಳುತಕೀರ್ತಿ ಶಿಷ್ಟಭ**
**ಟ್ಟನ ಸತಿ ಪುಣ್ಯಪುತ್ರವತಿ ಸೋವಲದೇವಿಯಿಳಾತಳಾಗ್ರದೊಳ್ ॥**

**ಬಾಚರಸ (ಕ್ರಿ.ಶ.೧೨೧೫)**

ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ, ಗುತ್ತಿ ತಾಲೂಕಿನ, ನೀಲೂರು[೧೪] ಗ್ರಾಮದಲ್ಲಿ ದೊರೆತ ಯಾದವ ನಾರಾಯಣ ಪ್ರತಾಪ ಚಕ್ರವರ್ತಿ ಸಿಂಹಳದೇವನ ಕಾಲದ ಶಕವರ್ಷ ೧೧೩೭ಕ್ಕೆ ಸೇರಿದ ಶಾಸನದ ಕರ್ತೃ ಈತ. ಇದರಲ್ಲಿ ಜಗತಾಪು ಚೋಳಮಹಾರಾಯನು ಹಾಂಬುಳಿಗೆಯಲ್ಲಿ ರಾಜ್ಯಭಾರಮಾಡುತ್ತಿರುವಾಗ ಶ್ರೀಭೋಗೇಶ್ವರ ದೇವರಿಗೆ ಶಿವಪುರ ಗ್ರಾಮವನ್ನು ದತ್ತಿಯಾಗಿ ಬಿಟ್ಟ ವಿಷಯವಿದೆ. ಶಾಸನದಲ್ಲಿ "ಈ ಶಿವಪುರಕೆ ಸಾಸನ ಪದ್ಯವಂ ಹೇಳ್ದು ಪ್ರಶಸ್ತಿಯಂ ಬರೆದ ಸೇನಬೋವ ಬಾಚರಸ" ಎಂದಿದೆ. ಗದ್ಯಪದ್ಯಾತ್ಮಕವಾಗಿರುವ ಈ ಶಾಸನ ತ್ರುಟಿತವಾಗಿರುವುದರಿಂದ ಹೆಚ್ಚಿನ ವಿವರಗಳು ದೊರೆಯುವುದಿಲ್ಲ. "ಕವಿ ಚರಿತೆಯಲ್ಲಿ[೧೫] ಅಶ್ವವೈಧ್ಯಗ್ರಂಥ ಕರ್ತೃ ಬಾಚರಸನೊಬ್ಬನು ಕಾಣಬರುವುದು. ಶಾಸನದ ಬಾಚರಸ ಇವನಾದ ಪಕ್ಷಕ್ಕೆ ಕಾಲವು ಕ್ರಿ.ಶ.೧೩ನೇ ಶತಮಾನದಲ್ಲಿದೆ. ಕವಿಚರಿತ್ರೆಕಾರರು ಊಹಿಸುವಂತೆ ೧೫ನೇ ಶತಮಾನವಲ್ಲ" ಎಂದು ಉಲ್ಲೇಖಿಸಬಹುದಾಗಿದೆ. ಆದರೆ ಈ ಸಮೀಕರಣ ಇನ್ನೂ ಹೆಚ್ಚು ಆಧಾರಗಳನ್ನು ಬಯಸುತ್ತದೆ. ಮತ್ತು ಒಂದು ಸಂಗತಿ ಎಂದರೆ ಸೊರಬ ತಾಲೂಕಿನ ಕುಪ್ಪಗಡ್ಡೆಯ

ಶಾಸನವನ್ನು ಬರೆದಾತ ‘ಬಾಚ’ ಎಂದಿದೆ. ಇಲ್ಲಿ ಉಕ್ತನಾಗಿರುವ ಬಾಚರಸ ಮತ್ತು ಆತ ಭಿನ್ನರೇ ಅಭಿನ್ನರೇ ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಕೇವಲ ಇಬ್ಬರನ್ನೂ ಭಿನ್ನರೆಂದೇ ತಿಳಿದು ಪರಿಶೀಲಿಸಿದ್ದಾರೆ. ಪ್ರಸ್ತುತ ಹಾಗೇ ನೋಡಲಾಗಿದೆ.

**ಬಾಚ (ಕ್ರಿ.ಶ.೧೨೧೬)**

ಶಿವಮೊಗ್ಗ ಜಿಲ್ಲೆಯ, ಸೊರಬ ತಾಲೂಕಿನ, ಕುಪ್ಪಗಡ್ಡೆಯ ಗಣಪತಿದೇವಾಲಯ ಬಳಿಯಿರುವ ವೀರಗಲ್ಲು ಶಾಸನ[೧೬] ಕರ್ತೃವೆಂಬುದು ಆ ಶಾಸನದಲ್ಲಿ ಉಕ್ತವಾಗಿರುವ “ಈ ಪದ್ಯದ ಬಾಚ ಬರೆದಿರ್ಪುದಕೆ ಸೊದಿನಣಿಲೆ ಬಳುಚೆಯೂರ ಬೆಳದ್ಯನ ಲಿಖಿತ” ಎಂಬ ವಾಕ್ಯದಿಂದ ತಿಳಿದುಬರುತ್ತದೆ. ಈ ಶಾಸನವು ಕದಂಬ ಚಕ್ರವರ್ತಿ ಕಾವದೇವರಸನ ಕಾಲಕ್ಕೆ ಸೇರಿದ್ದು ಇದು ಕ್ರಿ.ಶ.೧೨೧೬ ಕ್ಕೆ ಸೇರಿದೆ.

ಕದಂಬ ಚಕ್ರವರ್ತಿ ಕಾವದೇವರಸ ಹಾಗೂ ಕೇಸವದೇವ, ಬೊಮ್ಮೆಯ ಮತ್ತಿತರ ನಾಯಕರು ಬಾಳೆಯ ಮಕ್ಕೆ ಮತ್ತು ಸೋದೆಯನ್ನು ವಶಪಡಿಸಿಕೊಳ್ಳಲು ಪರಿಗೆಯ ಬಯಲಲ್ಲಿ ಬೀಡುಬಿಡಲು ಬಿಟ್ಟೆಯ ಹೆಬ್ಬಾರುವನ ಸೇವಕ ಕಲಿ ಮಸಣನು ಅವರೊಡನೆ ಯುದ್ಧಮಾಡಿ ವೀರಸ್ವರ್ಗ ಪಡೆದುದನ್ನು ಉಲ್ಲೇಖಿಸಿದೆ. ಶಾಸನದಲ್ಲಿರುವ ಎರಡು ಕಂದಪದ್ಯಗಳು ಮಸಣನ ಕಲಿತನವನ್ನು ವರ್ಣಿಸಿದೆ.

ಒಂದು ಪದ್ಯವನ್ನು ಹೀಗೆ ನೋಡಬಹುದು.:

**ಬಿಟ್ಟೆಯ ಹೆಬ್ಬಾರುವನಾಳ್**
**ನೆಟ್ಟನೆಕಲಿಮಸಣನಾಂತು ಭೋರನೆ ಬಿಲ್ಲಂ**
**ಕಟ್ಟಲಗೆಯ್ದಂ ಭಯದಿಂ**
**ಬಿಟ್ಟೋಡಲ್ಕರಿದನಂತು ಪಲರಂ ರಣದೊಳ್ ॥**

**ವಾಮಯ್ಯ (ಕ್ರಿ.ಶ.೧೨೧೮)**

ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆಯ ಅಕ್ಕಲಕೋಟೆ ತಾಲೂಕಿನ ಮಂಗರೂಲ್ ಗ್ರಾಮದ ಶಾಸನವನ್ನು[೧೭] ಈತ ರಚಿಸಿದ್ದಾನೆ. ಒಟ್ಟು ೪೪ ಸಾಲುಗಳ ಈ ಶಾಸನದಲ್ಲಿ ಬಹುಭಾಗ ತ್ರುಟಿತವಾಗಿದೆ. ಶಾಸನದ ೨೭ನೇ ಸಾಲಿನಲ್ಲಿ “ಸಾಸನದ ಬರದ ವಾಮಯ್ಯಂಗೆ ಕೋಲ ಮತ್ತರು” ಎಂದಿದೆ. ಈ ಶಾಸನವು ಸೇವುಣ ವಂಶದ ದೊರೆಗಳಿಗೆ ಸಂಬಂಧಿಸಿದ್ದಾಗಿದೆ. ದೊರೆಯ ಹಾಗೂ ಆತನ ಕೈಕೆಳಗಿನ ಅಧಿಕಾರಿಯ ಹೆಸರು ನಾಶವಾಗಿದೆ.

ರಾಮಯ್ಯ ಕರಜಿಗೆಯ ಪ್ರಭು ಮೊದಲಾದವರು ಸೇರಿ ದಾನಕಾರ್ಯದಲ್ಲಿ ಪಾಲ್ಗೊಂಡದ್ದನ್ನು ಈ ಶಾಸನ ಹೇಳುತ್ತದೆ. ಕನ್ನಮೇಶ್ವರ ದೇವರ ಬ್ರಹ್ಮಪುರಿಯ ಉಲ್ಲೇಖವೂ ಬಂದಿದೆ. ಖೇಯಿಸಾಹಣಿಯ ಉಲ್ಲೇಖವೂ ಬಂದಿದೆ.

**ಸೋಮೇಶ್ವರಭಟ್ಟ (ಕ್ರಿ.ಶ.೧೨೧೮)**

ಹಾಸನ ಜಿಲ್ಲೆಯ, ಚನ್ನರಾಯಪಟ್ಟಣ ತಾಲೂಕಿನ, ನವಿಲೆ[೧೮] ಎಂಬ ಗ್ರಾಮ ಶಾಸನವನ್ನು ಈತನು ರಚಿಸಿದ್ದಾನೆ. ಶಾಸನವು ಹೊಯ್ಸಳರ ಎರಡನೇ ಬಲ್ಲಾಳನ ಆಳ್ವಿಕೆಯ ಕಾಲದ್ದಾಗಿದೆ. ಶಾಸನದ ಆರಂಭದಿಂದ ೧೪ನೇ ಸಾಲಿನವರೆಗೆ ಅಳಿಸಿಹೋಗಿದೆ. ಕುಸು 'ನಾಗರನವಿಲೆ'ಯನ್ನು ನಿರುಗುಂದ ನಾಡಿನಲ್ಲಿದ್ದ ಇದನ್ನು 'ಅಗ್ರಹಾರ'ವನ್ನಾಗಿ ಪರಿವರ್ತಿಸಿ ನೀಡುವುದಕ್ಕಾಗಿ ಹೊಯ್ಸಳ ದೊರೆ ನಲ್ಲೂರಕೊಪ್ಪದಲ್ಲಿ ಬೀಡುಬಿಟ್ಟಾಗ 'ನಾಗರ ನವಿಲೆ'ಯು ೧೬೦ ಜನ ಬ್ರಾಹ್ಮಣರಿಗೆ 'ನಾಗರಭಟ್ಟ' ಮತ್ತು 'ಗೋಪಯ' ಇವರಿಗೆ ೫೦೦ ಗದ್ಯಾಣವನ್ನು ನೀಡಬೇಕೆಂದು ನಿರ್ಧರಿಸಲಾಗಿದೆ. ಈ ಹಳ್ಳಿಯನ್ನು 'ಕಟ್ಟುಗುತ್ತಗೆ' ಮತ್ತು 'ಪಿಂಡದಾನ' ಮಾಡಲಾಗಿದೆ.

ಎರಡನೆಯ ನರಸಿಂಹ ಹಾಗೂ ಆತನ 'ಬೇರುಂಡದಳ' ಕಾಂಚಿಪುರದ ನೆಲೆವೀಡಿನಲಲ್ಲಿದ್ದಾಗ ಮರಳುವಾಗ ಈ ಹಳ್ಳಿಯಲ್ಲಿ 'ಅಲ್ಲಾಳನಾಥದೇವರಿಗೆ' ನಿತ್ಯ ಪೂಜೆಗೆ ೫೫ ಗದ್ಯಾಣ ನೀಡಲಾಯಿತು. ಹಳ್ಳಿಗೆ ಬಾಡಿಗೆಯಾಗಿ ೫೦೦ ಗದ್ಯಾಣ ನೀಡಲಾಯಿತು.

**ಸವಣ ಬಲ್ಲರದೇವ (ಕ್ರಿ.ಶ.೧೨೨೦):**

ಹಾಸನ ಜಿಲ್ಲೆಯ, ಅರಸಿಕೆರೆ ತಾಲೂಕಿನ, ಅರಸಿಕೆರೆ ಗ್ರಾಮದ ಸಹಸ್ರಕೂಟ ಜಿನಾಲಯದ ಗರ್ಭಗೃಹದ ಕಂಬವೊಂದರ ಮೇಲಿರುವ ಶಾಸನದ[೧೯] ಕರ್ತೃ ಈತ. ಕೇವಲ ೫ ಸಾಲುಗಳಿರುವ ಈ ಶಾಸನದಲ್ಲಿ ರೇಚಿದಂಡೇಶನು ಸಾಗರನಂದಿಮುನಿಗೆ ಜಿನಾಲಯವನ್ನು ನಿರ್ಮಿಸಿದ ವಿಷಯ ಉಕ್ತವಾಗಿದೆ. ಶಾಸನದ ಕೊನೆಯಲ್ಲಿರುವ 'ಸವಣ ಬಲ್ಲದೇವ ರೂವಾರಿ ನೇಮೋಜ' ಎಂಬ ವಾಕ್ಯದಿಂದ ಸವಣ ಬಲ್ಲದೇವ ಶಾಸನವನ್ನು ರಚಿಸಿದನೆಂದೂ ರೂವಾರಿ ನೇಮೋಜನು ಶಾಸನವನ್ನು ಕಂಡರಿಸಿದನೆಂದು ಕೆಲವರು ತಿಳಿದಿರುವಂತೆ ಕಾಣುತ್ತದೆ. ಆದರೆ 'ಸವಣ' ಎಂಬುದು ವಿಶೇಷಣವಾಗಿದ್ದು 'ಬಲ್ಲರದೇವ' ಆತನ ಹೆಸರಾಗಿದೆ.

ಶಾಸನದ ಉದ್ದೇಶವನ್ನೊಳಗೊಂಡ ವೃತ್ತ ಇಂತಿದೆ.

**ಭರದಿಂ ಜೋಳದ ಕೂಳುವೆಣ್ಣೆಯುಮನುಂಡಂತತ್ಯಾಸ್ಥೆಯಿಂ ಪನ್ನೆ**
**ರಡು ವರ್ಷಂ ಕೂಡಿ ಸಹಸ್ರಕೂಟಗೃಹಮಂ ಶ್ರೀರೇಚಿದಣ್ಡೇಶನಿಂ**
**ಪರಿಪೂರ್ಣವ್ರತನಾಗಿ ಮಾಡಿಸಿದನೀ ಸೈದ್ಧಾನ್ತಿಕಾರ್ಗ್ರ್ಯಂಗೆ ಸಾ**
**ಗರಣಂದಿವ್ರತಿಪಾಳಕಂಗೆ ದೊರೆಯಾರಾರಬ್ಧನಿರ್ವ್ವಾದಲೆ? ॥**

**ಸೋಮಯ್ಯ (ಕ್ರಿ.ಶ.೧೨೨೧)**

ಬಳ್ಳಾರಿ ಜಿಲ್ಲೆಯ, ಕೂಡ್ಲಗಿ ತಾಲೂಕಿನ, ಕೊಟ್ಟೂರು[೨೦] ಶಾಸನವನ್ನು ಈತನು ರಚಿಸಿದ್ದಾನೆ. ಹೊಯ್ಸಳ ವೀರನರಸಿಂಹನ ಆಡಳಿತದಲ್ಲಿ ಅವನ ದಂಡನಾಯಕನಾದ ಕೇಶವದಂಡಾಧಿಪನು ಶಂಕರನಾರಾಯಣಭಟ್ಟ, ಭೇರುಂಡನ ಬಂಮಯಭಟ್ಟ, ಅಚ್ಯುತಭಟ್ಟ, ನಾಗ ಎಂಬುವವರಿಗೆ ಮಾವಿನಮಾಗೆಹಳ್ಳಿಯನ್ನು ದಾನವಾಗಿ ನೀಡುತ್ತಾರೆ. ಈ ಧರ್ಮವನ್ನು ಕಾಪಾಡಲು ಮುಂಮರಿದಂಡ, ಪಟ್ಟಣಸ್ವಾಮಿಗಳು, ಹರಿಗಕಾಳಬೋವ, ಜಗದ್ದಳ ಬಂಮಿದೇವನ ಮಕ್ಕಳು ಸೋಯಿದೇವ, ಘಟ್ಟಿದೇವರನ್ನು ನೇಮಿಸುತ್ತಾನೆ. ಶಾಸನವನ್ನು ಬರೆದ ಸೋಮಯ್ಯನ ಕುರಿತು "ಈ ಸಾಸನವಂ ಯಯ್ಯಾವಳಯ ಸೇನಬೋವ ಸೋಮಯ್ಯ" ಎಂದಿದೆ. ಈ ಸಾಸನವಂ ಖಂಡಳಿಸಿದಾತ ಕಲುಕುಟಿಗ ಅಣ್ಣೋಜಿ ಮಂಗಳ ಮಹಾಶ್ರೀ ಎಂದಿದೆ.

**ನಾಗದೇವ (ಕ್ರಿ.ಶ.೧೨೨೪)**

ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲೂಕಿನ ಕೆರೆಸಂತೆಯಲ್ಲಿರುವ ಶಂಭುಲಿಂಗ ದೇವಾಲಯದ ಬಳಿಯಿರುವ ಶಾಸನದ[೨೧] ಕರ್ತೃ ಈತ. ಶಾಸನವು ವೀರನಾರಸಿಂಹನ ಕಾಲಕ್ಕೆ ಸೇರಿದ್ದು ಇದರ ಕಾಲ ಕ್ರಿ.ಶ.೧೨೨೪. ಚೌಂಡಿಸೆಟ್ಟಿಯು ಪ್ರತಿಷ್ಠೆಮಾಡಿದ ಶಂಭುದೇವರ ದೇವಾಲಯವನ್ನು ವಿಷ್ಣುಸಮುದ್ರದ ಶೇಷಮಹಾಜನಗಳ ಅನುಮತಿಯಿಂದ ಶೈವಾಗಮ ವಿಶಾರದರಾದ ಶಿವಬ್ರಾಹ್ಮಣ ಬಮ್ಮೆಯದ ಆಳಿಭಟ್ಟರಿಗೆ ಕೊಟ್ಟ ವಿಷಯವನ್ನು ಮತ್ತು ದೇವರ ಅಂಗರಂಗಭೋಗಕ್ಕೆ, ಭೂಮಿ, ತೋಟ, ಗದ್ದೆ, ಇತ್ಯಾದಿಗಳನ್ನು ದತ್ತಿ ಬಿಟ್ಟ ವಿಷಯವನ್ನು ನಿರೂಪಿಸಿದೆ. ಶಾಸನದ ೨೩ ಸಾಲುಗಳು ಸಂಪೂರ್ಣವಾಗಿಯೂ; ಉಳಿದ ಭಾಗ ಅಲ್ಲಲ್ಲಿಯೂ ನಷ್ಟವಾಗಿದೆ. ಶಾಸನದ ಕೊನೆಯಲ್ಲಿ ಕವಿಗೆ ಸಂಬಂಧಿಸಿದ ವಿವರಗಳನ್ನೊಳಗೊಂಡ ವೃತ್ತ ಇಂತಿದೆ

**ಹರಿಹರ ಮಾಯಿದೇವಿಗಳ ಪುತ್ರನನಿಂದಿತ ವಾಜಿವಂಶ ಶೇ**
**ಖರನಕಳಂಕಕೀರ್ತಿ ಕಲಿಕಾಲಬೃಹಸ್ಪತಿ ಸೋಮನಾಥ ಶಂ**
**ಕರರನುಜಂ ಬುಧರ್ಪೊಗಳೆ ನಿರ್ಮಿಸಿದಂ ಕವಿನಾಗದೇವನೀ**
**ಸ್ಥಿರತರಮಪ್ಪ ಶಾಸನಮನುತ್ತಮಕಾಶ್ಯಪಗೋತ್ರವರ್ಧನಂ ॥**

ಕವಿಯು ಕಾಶ್ಯಪಗೋತ್ರದವನು: ವಾಜಿವಂಶದವನು ಹರಿಹರ ಮತ್ತು ಮಾಯಿದೇವಿಯರ ಪುತ್ರ ಅಕಳಂಕ ಕೀರ್ತಿ ಉಳ್ಳವನೂ, ಕಲಿಕಾಲ ಬೃಹಸ್ಪತಿಯೂ, ಆದ ಸೋಮನಾಥನು ಹಾಗೂ ಶಂಕರರು ಈತನ ಸಹೋದರರು.

ಶಾಸನದಲ್ಲಿ ವರಾಹಸ್ತುತಿ ಪದ್ಯವೊಂದು ಹೀಗಿದೆ.:

> **ಧರೆ ರುಚಿರಕೇತಕೀಮಧು**
> **ಕರಿವೋಲ್ ದಂತಾಗ್ರದೊಳ್ವಿರಾಜಿಸೆ ಮಹಿಮಾ**
> **ಕರನಾದಾದಿವರಾಹಂ**
> **ವರಾಹಮಂ ನಮಗೆ ಕೂರ್ತು ಮಾಳ್ಕನವರತಂ ॥**

ದಂತಾಗ್ರದಲ್ಲಿ ಆದಿವರಾಹ ಎತ್ತಿ ತಂದ ಧರೆ ಮನೋಹರವಾದ ತಾಳೆಯ ಹೂವಿನ ಮೇಲಿನ ದುಂಬಿಯಂತಿತ್ತು ಎಂಬ ಕಲ್ಪನೆಯೂ 'ವರಾಹ' ಶಬ್ದದ ಶ್ಲೇಷೆಯೂ ಕವಿಯ ಪ್ರೌಢಿಮೆಯನ್ನು ತೋರಿಸುತ್ತವೆಯೆನ್ನಬಹುದು.

**ಬಾಚಣ್ಣ (ಕ್ರಿ.ಶ.೧೨೨೭)**

ಹಾಸನ ಜಿಲ್ಲೆಯ, ಅರಸಿಕೆರೆ ತಾಲೂಕಿನ, ಕಣಿಕಟ್ಟೆ ಗ್ರಾಮದಲ್ಲಿ ಬೈರೇದೇವರ ಪಾಳು ದೇವಸ್ಥಾನದ ಮೂಲೆಯಲ್ಲಿ ಬಿದ್ದಿರುವ ಕಲ್ಲಿನ ಮೇಲಿನ ಶಾಸನದ[೨೨] ಮಧ್ಯದಲ್ಲಿ "ಬಾಚಂಣನವರು ಹೇಳಿದ ಪದ್ಯ" ಎಂದಿದೆ. ಅನಂತರ ಚಂಪಕಮಾಲೆ ವೃತ್ತದಲ್ಲಿರುವ ಪದ್ಯವೊಂದಿದೆ. ಆದರೆ ಪೂರ್ಣಪದ್ಯ ದೊರೆಯುವುದಿಲ್ಲ. ಶಾಸನದ ಕೊನೆಯಲ್ಲಿ 'ಬಾಚಂಣ' ಸಾಸನ ಎಂದಿದೆ. ಆದ್ದರಿಂದ ಶಾಸನದ ಕರ್ತೃ ಮತ್ತು ಕಲ್ಲಿನ ಮೇಲೆ ಬರೆದ ವ್ಯಕ್ತಿಯು ಒಬ್ಬನೇ ಆಗಿರಬೇಕು.

ಶಾಸನ ಹೊಯ್ಸಳ ಇಮ್ಮಡಿ ಬಲ್ಲಾಳನ ಕಾಲದ್ದೆಂದು ಹೇಳಬಹುದು. ಇದರ ಕಾಲ ಕ್ರಿ.ಶ.೧೨೨೭. ವಿಜಯನರಸಿಂಹಪುರವಾದ ಕಳಿಕಟ್ಟೆಯ ನೂರೆಪ್ಪತ್ತು ಮಹಾಜನರ ಪಾಧಾರಾಧಕರಾದ ಜಗತಿ ಕೊತ್ತಳಿಗಳು ನೀಲೇಶ್ವರದೇವರ ನಂದಾದೀವಿಗೆಗೆ ಕಾಣಿಕೆಯನ್ನರ್ಪಿಸಿದ ವಿಷಯ ಶಾಸನದಲ್ಲಿ ಹೇಳಿದೆ. ದಾನಿಗಳ ವಿವರಗಳಿಗೆ ಶಾಸನ ಅಲ್ಲಲ್ಲಿ ಸವೆದಿದೆ.

ಶಾಸನ ಪಾಠ ಗದ್ಯ ಪದ್ಯಮಯವಾಗಿದೆ. ಕೇವಲ ಒಂದು ಕಂದಪದ್ಯ ಮತ್ತು ಚಂಪಕಮಾಲೆ ವೃತ್ತದ ಒಂದು ಪದ್ಯಗಳಿದ್ದು, ಮಿಕ್ಕಭಾಗ ಸರಳ ಗದ್ಯದಲ್ಲಿದೆ. ತ್ರುಟಿತ ಚಂಪಕಮಾಲೆ:

**ಜಗದೊಳಗೊಪ್ಪುತಿರ್ಪ ಕಳಿಕಟ್ಟೆಯೊಳಂ ಪೆಸರ್ವೆತ್ತ ಮಾನಸ**
**ರ್ನೆಗಳ್ದುರು ರತ್ನಮಾಳಿಯೊಳಗೊಪ್ಪುವ ಮಾಣಿಕದನ್ತೆ ಕೂಡೆ ಸಾ**
**....ತ ತೇಜದಿಂ ಜಗತೆಗೊತ್ತಳೆಯೊಳ್ ಪರಿವೇಷ್ಟಿಸಿರ್ದು ಭೂ**
**ಮಿಗೆ ಪಸ..... ನತಿಯಿ ಬಾಚ...ತನ ಪುತ್ರ.....ಯೊಳ್ ॥**

**ಮಾದಿರಾಜ (ಕ್ರಿ.ಶ.೧೨೨೮)**

ಬೆಳಗಾವಿ ಜಿಲ್ಲೆಯ, ಸವದತ್ತಿ ತಾಲೂಕಿನ, ಸವದತ್ತಿ ಗ್ರಾಮದ ಶಾಸನ[೨೩]ವನ್ನು ಈತ ರಚಿಸಿದ್ದಾನೆ. ಗದ್ಯ ಪದ್ಯಾತ್ಮಕವಾದ ಈ ಶಾಸನದ ಬರವಣಿಗೆ ಪ್ರೌಢವಾದುದಾಗಿದೆ. ರಾಜಾದಿಗಳ ಪ್ರಶಸ್ತಿ, ದತ್ತಿಯ ವಿವರಣೆ, ಇವನ್ನುಳಿದು ಉಳಿದ ಭಾಗವೆಲ್ಲವೂ ಪದ್ಯದಲ್ಲಿಯೇ ಇದೆ. ೯೩ ಸಾಲುಗಳ ವ್ಯಾಪ್ತಿಯುಳ್ಳ ಈ ಶಾಸನಕಾವ್ಯದಲ್ಲಿ ೬೫ ಪದ್ಯಗಳಿದ್ದು ಮತ್ತೇಭವಿಕ್ರೀಡಿತ, ಉತ್ಪಲಮಾಲೆ, ಚಂಪಕಮಾಲೆ, ವೃತ್ತಗಳೂ ಕಂದಪದ್ಯಗಳೂ ಇವೆ. ಬಳಸಿರುವ ಕಂದ ವೃತ್ತಗಳು ಉತ್ತಮವಾಗಿದ್ದು ಗದ್ಯಭಾಗವೂ ಪ್ರೌಢವಾಗಿದೆ. ಶಾಸನ ರಚನೆಯಲ್ಲಿ ಗಮನಿಸಿದರೆ ಈತ ಒಳ್ಳೆಯ ಕವಿಯಾಗಿದ್ದಂತೆ ಕಂಡುಬರುತ್ತದೆ.

ರಟ್ಟಕುಲಭೂಷಣ, ಸುವರ್ಣಗರುಡಧ್ವಜ, ಮಂಡಳಿಕಗಂಡ, ತಳಪ್ರಹಾರಿ, ಇತ್ಯಾದಿ ಪ್ರಶಸ್ತಿಗಳನ್ನು ಹೊಂದಿದ್ದ ಮಹಾಮಂಡಳೇಶ್ವರ, ಲಕ್ಷ್ಮೀದೇವರಸನ ಕಾಲಕ್ಕೆ ಸೇರಿದ ಈ ಶಾಸನ ಕಾಲ ಕ್ರಿ.ಶ.೧೨೨೮.

ಕವಿಯು ಸಾಮಾಸಿಗಕುಲದ ಅತ್ರಿಗೋತ್ರದ ಶೈವಬ್ರಾಹ್ಮಣ. ಕೋಲಾರದ ವಿಜಾಪುರ ಜಿಲ್ಲೆಯ ವಿಭುವಾದ ಕೇಶಿರಾಜ ಹಾಗೂ ಮಾಳಲದೇವಿಯರ ಪುತ್ರ ಮಲ್ಲಿಕಾರ್ಜುನ ಈತನ ಸಹೋದರ.

ಕವಿ ತನ್ನ ಹೆಸರನ್ನು ತಿಳಿಸಿರುವ ಕಂದಪದ್ಯ:

**ಎಸೆವೀ ಶಾಸನಮಂ ವಿರ**
**ಚಿಸಿ ಬರೆದಂ ಪೂರ್ವಜನ್ಮದೊಳ್ ಸುಕೃತಮನಾ**
**ರ್ಜಿಸಿ ಕೇಶಿರಾಜವಿಭುವಿನ**
**ಶಿಶುವೆನಿಸಿದ ಮಾದಿರಾಜನಾ ವಿಭುಮತದಿಂ ॥**

ಶಾಸನಕವಿ ಹಾಗೂ ಆತನ ಸಹೋದರ ಮಲ್ಲಿಕಾರ್ಜುನರ 'ಸುಗಂಧವರ್ತಿ' ಕಂಪಣವನ್ನಾಳುತ್ತಿದ್ದ ಮುನಿಚಂದ್ರದೇವನ ಮಂತ್ರಿಗಳಾಗಿದ್ದರು.

ಮಾದಿರಾಜನ ತಂದೆ ಕೇಶಿರಾಜನು ತನ್ನ ತಂದೆ ಮಲ್ಲಿಕಾರ್ಜುನನ ಹೆಸರಿನಲ್ಲಿ ಮಲ್ಲಿನಾಥದೇವರ ಪ್ರತಿಷ್ಠೆ ಮಾಡಿದ ವಿಷಯವನ್ನು ಆ ದೇವರ ಅಂಗಭೋಗ ರಂಗಭೋಗಕ್ಕೆ ಸುಗಂಧವರ್ತಿಯ ಹನ್ನಿರ್ವರು, ಗಾವುಂಡರು, ದತ್ತಿ ಬಿಟ್ಟದ್ದನ್ನು ಹಾಗೂ ದೇವರ ಪೂಜಾದಿಗಳಿಗೆ ಬೇಕಾಗುವ ಸಾಮಗ್ರಿಗಳನ್ನು ನೀಡಿದ ವಿಷಯವನ್ನು ಉಲ್ಲೇಖಿಸಿದೆ. ದತ್ತಿಯನ್ನು ಬೆಳ್ಳಟಗೆಯ ಶ್ರೀಮೂಲಸ್ಥಾನದಾಚಾರ್ಯ ಲಿಂಗಯ್ಯಗಳಿಗೆ ಒಪ್ಪಿಸಲಾಯಿತು.

ಕವಿ ತನ್ನ ತಂದೆಯ ಪರಿಚಯ ಮಾಡಿಕೊಡುವ ನೆಪದಿಂದ ತನ್ನ ವಂಶದ ಪೂರ್ವೇತಿಹಾಸವನ್ನು ವಂಶದ ಮೂಲಪುರುಷನಾದ 'ರುದ್ರಭಟ್ಟ'ನಿಂದ ಆರಂಭಿಸಿದ್ದಾನೆ. ಈ ರುದ್ರಭಟ್ಟನು ತನ್ನ ಕವಿತಾ ಸಾಮರ್ಥ್ಯದಿಂದ ಗ್ರಾಮಗಳನ್ನು ಬಹುಮಾನವಾಗಿ ಪಡೆದ ವಿಷಯವನ್ನು ನಿರೂಪಿಸುವುದಲ್ಲದೆ, 'ಭ' ಎಂಬ ಅಕ್ಷರವನ್ನು ಒತ್ತೆಯಿಟ್ಟು 'ರುದ್ರಟ'ನಾಗಿದ್ದ ವಿಷಯವನ್ನು ಹೇಳಿದ್ದಾನೆ.

**ಅದಱಿಕೊಳ್ ನಿಜನಾಮಾಕ್ಷರ**
**ವಿಡೆ ಸಾಸಿರ ಪೊನ್ನ ಕೊಟ್ಟದಂ ಬಿಡಿಪನಿತು ದಿ**
**ನಂ ಪಡೆದಂ ರುದ್ರಟನೆಂ**
**ಬೀ ಪಡೆಮಾತಂ ರುದ್ರಭಟ್ಟನುರ್ವೀಜನದಿಂ ॥**

"ಇವನೇ ಸಂಸ್ಕೃತದಲ್ಲಿ 'ಕಾವ್ಯಾಲಂಕಾರ'ವನ್ನು ಬರೆದಿರುವ ರುದ್ರಟನಾಗಿರಬಹುದು. ಈ ರುದ್ರಟನ ಚಕ್ರಬಂಧ ಪದ್ಯದಿಂದ ಉದ್ಧಾರವಾಗುವ ಸ್ವವಿಷಯಕವಾದ ಶ್ಲೋಕದಲ್ಲಿ 'ಸಾಮಾಜಾ' ಎಂಬ ವಿಶೇಷಣವಿದೆ. ಇದು ಇಲ್ಲಿ ಬಂದಿರುವ 'ಸಾಮಾಸಿಗ' ಎಂಬುದಕ್ಕೆ ಪರ್ಯಾಯ ಶಬ್ದವಾಗಿರಬಹುದೆಂದು ತೋರುತ್ತದೆ. ಎಂದು ಕವಿಚರಿತೆಕಾರರು ಅಭಿಪ್ರಾಯಪಟ್ಟಿದ್ದಾರೆ.

ಕವಿಯು ತನ್ನ ತಾಯಿ ಮಾಳಲದೇವಿಯನ್ನು ವರ್ಣಿಸುವ ನೆವದಿಂದ ಹದಿಬದೆಯರಿಗಿರಬೇಕಾದ ಗುಣಗಳನ್ನು ದೀರ್ಘವಾಗಿ ವಿವರಿಸಿದ್ದಾನೆ. ನಿದರ್ಶನಕ್ಕೆ ಒಂದು ವೃತ್ತವನ್ನು ನೋಡಬಹುದು.:

**ಮನೆಯೊಳಗುಳ್ಳುದಂ ಮಡಗಿ ತತ್ಪತಿಗಂ ಮನೆಮಕ್ಕಳಿಂಗಮೆ**
**ಳ್ಗನಿತುಮನಿಕ್ಕಲಾಱದೆ ಕೆಲಂ ಕಡೆಯುಂ ಸುಡೆನಲ್ಕೆ ಜೀವಿಪಂ**
**ಗನೆಯರನೇ ಕುಲಾಂಗನೆಯರೆಂದೆನಲಕ್ಕುಮೆ ಕೇಶಿರಾಜನಂ**
**ಗನೆ ಪತಿಭಕ್ತೆ ಚಾರುಗುಣಯುಕ್ತೆ ಕುಲಾಂಗನೆ ಭೂತಳಾಗ್ರದೊಳ್ ॥**

**ಸವದತ್ತಿಯ ವರ್ಣನೆ :**

> **ಹೊಱವೊಳಲೊಳ್ವಿರಾಜಿಸುವ ಚೂತವನಂ ಗಿರಿಸಂಕುಳಂ ಫಳಂ**
> **ದುಱುಗಿದ ನಾಳಿಕೇರವನವೊಪ್ಪುವಶೋಕವನಂ ಶಿವಾಲಯಂ**
> **ಮಿಱುಪ ಜಿನೇಂದ್ರಗೇಹಮೆನಿಪಿಂತಿವಱಿಂದಮಶೇಷಸೌಖ್ಯದೊ**
> **ಳ್ನೆಱೆದು ಸುಗಂದವರ್ತಿ ಸಲೆ ಕೂಂಡಿಮಹೀತದೊಳ್ ವಿರಾಜಿಕುಂ ॥**

ಶಾಸನಗಳ ಕೊನೆಯಲ್ಲಿ ಸಾಮಾನ್ಯವಾಗಿ ಬರುವ ಫಲಶ್ರುತಿಯ ಸಂಸ್ಕೃತ ಶ್ಲೋಕಗಳೊಂದಿಗೆ ಕೊಟ್ಟಿರುವ ಕನ್ನಡಾನುವಾದ ಕಂದಪದ್ಯಗಳನ್ನು ಕುತೂಹಲಕ್ಕಾಗಿ ಇಲ್ಲಿ ಉದ್ಧರಿಸಬಹುದು.:

> **ತನ್ನಿತ್ತುದ ಮೇಣನ್ಯಕು**
> **ಲೋನ್ನತರಿತ್ತುದುಮನವನಿಯಂ ಧರ್ಮಾರ್ಥಂ**
> **ಮನ್ನಿಸದಳಿದಾ ಮನುಜಂ**
> **ಮುನ್ನಂ ಕ್ರಿಮಿಯಾಗಿ ಬಳಿಕೆ ನರಕಕ್ಕಿಳಿಗುಂ ॥**
>
> **ತಾನೋಲಗಿಸಿದ ನೃಪಕುಲ**
> **ದಾ ನೃಪರಕ್ಕನ್ಯಭೂಪರಕ್ಕೇ ಧರ್ಮ**
> **ಕ್ಕೇನುಮನಳಿಪಂ ತಾರದ**
> **ಡಾ ನೃಪರಿಗವಿಂದೆ ಮುಗಿದ ಕಯ್ಯಿಂದಿಪ್ಪಂ ॥**

**ಶ್ರೀವಿಜಯರ್ ದಶಕೀರ್ತಿದೇವರ್ (ಕ್ರಿ.ಶ.೧೨೩೩)**

ಈತನು ಶಿವಮೊಗ್ಗ ಜಿಲ್ಲೆಯ, ಚನ್ನಗಿರಿ ತಾಲೂಕಿನ, ನಲ್ಕುದುರೆಯ ಬ್ರಹ್ಮೇಶ್ವರ ದೇವಾಲಯದ ಮುಂದಿರುವ ಶಾಸನದ[೨೪] ಕರ್ತೃವೆಂಬುದು ಶಾಸನದ ಕೊನೆಯ ಭಾಗದಲ್ಲಿ ಉಕ್ತವಾಗಿರುವ "ಶ್ರೀವಿಜಯದಶಕೀರ್ತಿದೇವರ್ವಿರಚಿಸಿದರ್ ಸೇವ್ಯ ಶಾಸನ ಕೃತಿಯಂ" ಎಂಬ ವಾಕ್ಯ ಭಾಗದಿಂದ ತಿಳಿದುಬರುತ್ತದೆ. ಕವಿಗೆ ಸಂಬಂಧಿಸಿದ ಯಾವ ವಿವರಗಳೂ ಶಾಸನದಲ್ಲಿ ಇಲ್ಲ. ಊರೊಡೆಯ ಚಂದ್ರದೇವರು ಬರೆದ ಈ ಶಾಸನವನ್ನು 'ಸಂಕರೋಜ' ಕಂಡರಿಸಿದ್ದಾನೆ. ಪ್ರತಿ ಪಂಕ್ತಿಯ ಕೊನೆಯಲ್ಲಿ, ಕನ್ನಡ ಅಂಕಿಗಳಿಂದ ಪಂಕ್ತಿಯನ್ನು ಸೂಚಿಸಿರುವುದು ವಿಶೇಷವಾಗಿದೆ.

ಗದ್ಯಪದ್ಯಗಳಿಂದ ಕೂಡಿರುವ ಈ ಶಾಸನವು ಹೊಯ್ಸಳರ ನಾರಸಿಂಹನ ಆಳ್ವಿಕೆಯ ಕಾಲಕ್ಕೆ ಸೇರಿದ್ದು ಇದರ ಕಾಲಾವಧಿ ಕ್ರಿ.ಶ.೧೨೩೩. ಶ್ರೀಮನ್ಮಹಾಪಸಾಯತ ಪರಮ ವಿಶ್ವಾಸಿ ಮೂಲಿಗ ಹೆಗ್ಗಡೆ ಬಮ್ಮಯ್ಯ, ಬಸವಯ್ಯ, ಪದುಮಯ್ಯಗಳೂ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೌನಾನುಷ್ಠಾನ ಜಪ ಸಮಾಧಿ ಶೀಲಗುಣಸಂಪನ್ನರು ಔಪಾಸನಾಗ್ನಿಹೋತ್ರ ದ್ವಿಜಗುರು

ದೇವತಾಪೂಜಾ ತತ್ಪರರು ಆದ ಶ್ರೀಮನ್ಮಹಾನಾಳ್ಪ್ರಭುಗಳೂ, ಪರೋಪಕಾರ ಪರಿಣತರೂ ಪರೀಕ್ಷಾ ದಕ್ಷರೂ ಪ್ರಭುಮಂತ್ರೋತ್ಸಾಹ ಶಕ್ತಿತ್ರಯ ಸಂಪನ್ನರೂ ಆದ ನಲ್ಕುದುರೆಯ ಊರೊಡೆಯರು ಮತ್ತಿತರೂ ಸೇರಿ, ಅಲ್ಲಿಯ ಬ್ರಹ್ಮೇಶ್ವರ ದೇವರ ಅಂಗಭೋಗ ರಂಗಭೋಗ ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ ಬೊಂತೆಯ ವಾಮರಾಶಿಗುರುಗಳ ಕಾಲುತೊಳೆದು ಭೂಮಿಯನ್ನು ದತ್ತಿ ಬಿಟ್ಟದ್ದನ್ನು ಶಾಸನದಲ್ಲಿ ನಿರೂಪಿಸಿದೆ. ದತ್ತಿಬಿಟ್ಟ ಭೂಮಿಯ ವಿವರವಾದ ನಿರೂಪಣೆಯಿದೆ. ಶಾಸನದಲ್ಲಿ ಪ್ರಾಸಂಗಿಕವಾಗಿ ನಲ್ಕುದುರೆಯ, ನಾರಸಿಂಹನ ಹಾಗೂ ಮುದ್ದಲೆಯರ ವರ್ಣನೆ ಬಂದಿದೆ.

**ನಾರಸಿಂಹನ ವರ್ಣನೆ ಹೀಗಿದೆ:**

> **ನರಪತಿ ನಾರಸಿಂಹನೊಳಿದಿರ್ಚಿದೊಡೆಚ್ಚಱದೆಂಬ ಭೀತಿಯಿಂ**
> **ಹರಣದ ಹಾನಿಗಂಜಿ ಜವನಂ ಮಱಿವೊಕ್ಕು ಬರ್ದುಂಕವೊಪ ರಾ**
> **ಯರ ನಡುಬೆನ್ನೊಳುಂಡಿಗೆಯನೊತ್ತುವೆನೆಂದಮೃತಾಂಶು ತಾಳ್ದನೊಂ**
> **ದೆರಳೆಯನೆಂದೊಡೇವೊಗಟ್ಟುದುನ್ನತಿಯಂ ಶಶಿವಂಶರತ್ನನಾ ॥**

**ಮಹಾಸತಿ ಮುದ್ದಲೆಯ ವರ್ಣನೆ :**

> **ನಯವತಿಯೆಂದು ಶೀಲವತಿಯೆಂದು ಕಲಾವತಿಯೆಂದು ಸದ್ಗುಣಾ**
> **ನ್ವಯವತಿಯೆಂದು ಧರ್ಮವತಿಯೆಂದು ದಯಾವತಿಯೆಂದು ಪುಣ್ಯಸಂ**
> **ಚಯವತಿಯೆಂದು ಕೀರ್ತಿಸುವುದೂರೊಡೆಬೊಕನ ಪೆರ್ಮ್ಮೆವೆತ್ತ ಕಾಂ**
> **ತೆಯನೊಲವಿಂದೆ ಮುದ್ದಲೆ ಮಹಾಸತಿಯಂ ನೆಗಮ್ದೀ ಜಗಜ್ಜನಂ ॥**

**ಸೋಮನಾಥ ಪಂಡಿತ (ಕ್ರಿ.ಶ.೧೨೩೪)**

ಹಾಸನ ಜಿಲ್ಲೆಯ, ಅರಸೀಕೆರೆ ತಾಲೂಕಿನ, ಹಾರನಹಳ್ಳಿಯ[೨೫] ಶಾಸನವನ್ನು ಈತನು ರಚಿಸಿದ್ದಾನೆ. ಶಾಸನವು ಹೊಯ್ಸಳರ ವೀರನಾರಸಿಂಹನ ಕಾಲಕ್ಕೆ ಸೇರಿದ್ದು ಕ್ರಿ.ಶ.೧೨೩೪ಕ್ಕೆ ಸೇರುತ್ತದೆ.

ಸಿಂದವಿಗೆ ಸ್ವಾಮಿಗಳ ಮಕ್ಕಳಾದ ಸಂಕಣ್ಣ ಗೋಪಣ್ಣಗಳು ಅರಸನ ಅಪ್ಪಣೆ ಪಡೆದು ತಮ್ಮ ತಂದೆಯ ಹೆಸರಿನಲ್ಲಿ ಸೋಮನಾಥಪುರವೆನಿಸಿದ ಹಾರುವನಹಳ್ಳಿ (ಹಾರನಹಳ್ಳಿ)ಯಲ್ಲಿ ದೇವಾಲಯವನ್ನು ನಿರ್ಮಿಸಿ ನಿಜೇಶ್ವರಭಟ್ಟರಿಂದ ಲಕ್ಷ್ಮೀನರಸಿಂಹದೇವರ ಪ್ರತಿಷ್ಠೆಯನ್ನು ಮಾಡಿಸಿ ಆ ದೇವರಿಗೆ ಆಭರಣಗಳನ್ನು ಮಾಡಿಸಿಕೊಟ್ಟದ್ದಲ್ಲದೆ; ಅಮೃತಪಡಿಗಾಗಿ ಭೂಮಿಯನ್ನು ದತ್ತಿ ಬಿಟ್ಟ ವಿಷಯವನ್ನು ಶಾಸನ ಉಲ್ಲೇಖಿಸಿದೆ. ಅದಲ್ಲದೆ ಸಿಂದವಿಗೆಯ ಸ್ವಾಮಿಗಳ ದಾಸರಾದ ಶ್ರೀಕರಣ ವಿಶ್ವನಾಥದೇವ ಹಾಗೂ ಮತ್ತಿತರರೂ ಆ ದೇವರಿಗೆ ನೀಡಿದ ದತ್ತಿಯನ್ನೂ ಪ್ರಸ್ತಾಪಿಸಿದೆ, ಮುಂದೆ

ಚಕ್ರವರ್ತಿ ಸೋಮೇಶ್ವರನು ದೇವರ ಶ್ರೀಕಾರ್ಯಕ್ಕಾಗಿ ೧೨ ಗದ್ಯಾಣಗಳನ್ನೂ ನೀಡಿದನೆಂಬುದನ್ನು ಇಲ್ಲಿ ಸೂಚಿಸಿದೆ.

ಸಂಸ್ಕೃತ ಹಾಗೂ ಕನ್ನಡ ಭಾಷೆಯಲ್ಲಿರುವ ಈ ಶಾಸನ ಗದ್ಯ ಪದ್ಯಾತ್ಮಕವಾಗಿದ್ದು ಅಪೂರ್ಣವಾಗಿದೆ. ಶಾಸನವು ಸ್ರಗ್ಧರೆ, ಮಹಾಸ್ರಗ್ಧರೆ, ಮತ್ತೇಭವಿಕ್ರೀಡಿತ, ಚಂಪಕಮಾಲೆ, ಮಾಲಿನೀ ವೃತ್ತಗಳನ್ನೂ ಕಂದಪದ್ಯಗಳನ್ನೂ ಒಳಗೊಂಡಿದೆ. ಶೈಲಿ ಪ್ರೌಢವಾಗಿದೆ ಶಾಸನದ ಕೊನೆಯಲ್ಲಿ "ಶ್ರೀಮದಾನಂದಭೋಧಪ್ರಭುಗಳ ದಾಸ ಕವಿಕುಳತಿಳಕ ಸುಕವಿ ಕಂಠಾಭರಣ ಸೋಮನಾಥ ಪಂಡಿತರು ಪದ್ಯಂಗಳ ಹೇಳಿದರು" ಎಂದಿದೆ. ಕವಿ ಸಿಂದವಿಗೆಯ ಆನಂದಭೋದ ಮುನಿಯ ಶಿಷ್ಯನು ಶಾಸನದಲ್ಲಿ ಪ್ರಯೋಗವಾಗಿರುವ ವೃತ್ತ ವೈವಿಧ್ಯದಿಂದಲೂ 'ಸುಕವಿ ಕಂಠಾಭರಣ' ಎಂಬ ಬಿರುದಿರುವುದರಿಂದಲೂ ಈತ ಪ್ರಸಿದ್ಧ ಕವಿಯಾಗಿದ್ದಿರಬಹುದು. ಉಭಯಹಸ್ತ ಲೇಖನ ಕುಶಲನೂ ನವದಾನ ಚಕ್ರವರ್ತಿಯೂ ಆದ ಶ್ರೀಕರಣದ ವಿಶ್ವನಾಥದೇವನು ಶಾಸನವನ್ನು ಕಲ್ಲಿನ ಮೇಲೆ ಬರೆದವನು. ಹಾಗೂ ರಾಯಸೂತ್ರಧಾರಿ ಗೋಪೋಜನ ತಮ್ಮ ಸರೋಜ ಅದನ್ನು ಕಂಡರಿಸಿದವನು. ಈ ವಿವರಣೆಗಳಿಂದ ಶಾಸನ ರೋಪುಗೊಳ್ಳುತ್ತಿದ್ದ ವಿಷಯ ವೇದ್ಯವಾಗುತ್ತದೆ. ಶಾಸನ ಹೇಳುತ್ತಿದ್ದವರೊಬ್ಬರು ಅದನ್ನು ಕಲ್ಲಿನ ಮೇಲೆ ಬರೆಯುತ್ತಿದ್ದವರೊಬ್ಬರು, ನಂತರ ಅದನ್ನು ಕಂಡರಿಸುತ್ತಿದ್ದವನೇ ಇನ್ನೊಬ್ಬ ಎಂಬ ವಿಷಯ ಸ್ಪಷ್ಟವಾಗುತ್ತದೆ. ಶಾಸನದಲ್ಲಿ ಹೊಯ್ಸಳ ನಾರಸಿಂಹನ, ಸೋಮೇಶ್ವರ ಹಾಗೂ ಸೋಮನಾಥಪುರದ ವರ್ಣನೆಯಿರುವ ಕಂದ ವೃತ್ತಗಳಿವೆ.

**ಸೋಮನಾಥಪುರದ ವರ್ಣನೆಯ ಒಂದು ಪದ್ಯ:**

> **ಅಲಘುತರದಾನಧಾರಾ**
> **ಜಳದಿಂ ಕೀರ್ತಿಲತೆ ಕೊರ್ವಿ ಪರ್ವುವಿನಂ ಸೋ**
> **ವಲದೇವಿ ಮಾಡಿದಳ್ ಭೂ**
> **ತಳದೊಳ್ ಶ್ರೀಸೋಮನಾಥಪುರಮುರ್ವರೆಯೊಳ್ ॥**

**ಹೊಯ್ಸಳ ದೊರೆಗಳ ಶೌರ್ಯದ ಪ್ರಶಂಸೆ :**

> **ಪೊಗಟೆ ಜಗಜ್ಜನಂ ತಣಿದು ತನ್ನನೆ ಹೊಯ್ಸಳ ಸೋವಿದೇವನಾ**
> **ವಗಮಖಿಳೋರ್ವಿಯಂ ತಳೆದನಿಂ ಕಮಠಾಗ್ರಣಿ ರಾಗದಿಂದೆ ಪೊಂ**
> **ಗುಗೆ ತಲೆಯೆತ್ತಿ ಸೈತು ನಿಮಿರ್ದೋಡುಗೆ ಪನ್ನಗರಾಜನುರ್ಕಿ ಸೊ**
> **ರ್ಕುಗೆ ದಿಗಿಭವ್ರಜಂ ಕುಲನಗಾವಳಿ ಮೇಲ್ವಳೆಗಂಬರಂಬರಂ॥**

**ಹುಡುಗೆಯ ಸೋಮಯ್ಯ (ಕ್ರಿ.ಶ. ೧೨೩೫)**

ಈತನು ಧಾರವಾಡ ಜಿಲ್ಲೆಯ ಹಾನಗಲ್ಲು ತಾಲೂಕಿನ ತಿಳಿವಳ್ಳಿಯ ಶಾಂತೇಶ್ವರ ದೇವಾಲಯದ ಮುಂದಿರುವ ಶಾಸನದ ಕರ್ತೃ[೨೬] ಎಂಬುದು ಈ ಕೆಳಗಿನ ಕಂದಪದ್ಯದಿಂದ ತಿಳಿದುಬರುತ್ತದೆ.

**ಮೃಡನೊಂದು ಭಕ್ತಿಯಿಂದಂ**
**ಹುಡುಗೆಯ ಸೋಮಯ್ಯನೊಪ್ಪುವೀ ಕನ್ನಡದಿಂ**
**ಗಡಣಿಸಿ ಪೇಳ್ದಂ ಕೃತಿಯಂ**
**ಪೊಡೆವಿಯೊಳೆಸದಿರ್ಕೆ ಚಂದ್ರತಾರಂಬರೆಗಂ ॥**

೧೨೭ ಪಂಕ್ತಿಗಳಿಂದ ಕೂಡಿದ ಈ ದೀರ್ಘ ಶಾಸನವು ಚಂಪೂಶೈಲಿಯಲ್ಲಿದ್ದು, ಸಂಸ್ಕೃತ ಹಾಗೂ ಕನ್ನಡ ಭಾಷೆಯಲ್ಲಿದೆ. ಶೈಲಿ ಪ್ರೌಢವಾಗಿದೆ. ಸ್ರಗ್ಧರೆ, ಶಾದ್ರೂಲವಿಕ್ರೀಡಿತ, ಚಂಪಕಮಾಲೆ, ವೃತ್ತಗಳೂ ಕಂದ ಪದ್ಯಗಳೂ ಇವೆ. ಶಾಸನದಲ್ಲಿ ಕೆಲವು ಸಂಸ್ಕೃತ ವೃತ್ತಗಳಿವೆ. ಗದ್ಯಭಾಗ ಸಂಪೂರ್ಣ ಕನ್ನಡದಲ್ಲಿದೆ. ಕವಿಗೆ ಸಂಬಂಧಿಸಿದ ಯಾವ ವಿವರವೂ ಶಾಸನದಲ್ಲಿ ಉಕ್ತವಾಗಿಲ್ಲ. ಶಾಸನ ರಚನೆಯನ್ನು ಗಮನಿಸಿದರೆ ಈತ ಒಳ್ಳೆಯ ಕವಿಯೆಂಬುದು ತಿಳಿದುಬರುತ್ತದೆ.

ಶಾಸನವು ಸೇವುಣರ ಸಿಂಘಣನ ಆಳ್ವಿಕೆಗೆ ಸಂಬಂಧಿಸಿದುದು. ಕ್ರಿ.ಶ. ೧೨೩೫ಕ್ಕೆ ಸೇರಿದುದಾಗಿದೆ. ಸೇವುಣ ಅರಸನ ವಿಜಯಗಳ ಹಾಗೂ ವಂಶದ ವಿವರಣೆ ಇದೆ. ಮತ್ತು ಆತನ ಸಾಮಂತನಾದ ಠಕ್ಕುರನ ವಂಶದ ವಿವರಣೆಯೂ ಬಂದಿದೆ. ಈ ಠಕ್ಕುರದೇವ ರಣರಂಗದಲ್ಲಿ ವೀರಸ್ವರ್ಗವನ್ನು ಪಡೆದ ನಂತರ ಆತನ ಮಗನಾದ ಕಲಿದೇವನು ಯುದ್ಧವನ್ನು ಮುಂದುವರೆಸಿ ವೈರಿಗಳನ್ನು ಹಿಮ್ಮೆಟ್ಟಿಸಿದುದನ್ನು ತಿಳಿಸಿದೆ. ಮುಂದೆ ಹರನನ್ನು ಕೂಡಿದ ತಂದೆಯ ಹೆಸರಿನಲ್ಲಿ ದೇವಾಲಯವನ್ನು ನಿರ್ಮಿಸಿ ಸಾವಂತೇಶ್ವರ ದೇವರನ್ನು ಪ್ರತಿಷ್ಠಾಪಿಸಿ 'ನಾಗರಖಂಡ ೭೦'ಕ್ಕೆ ಸೇರಿದ ತಿಳಿವಳ್ಳಿಯ ಸೂಡಂಗಿ ಗ್ರಾಮವನ್ನು ದತ್ತಿ ಬಿಟ್ಟ ವಿಷಯವನ್ನು ಉಲ್ಲೇಖಿಸಿದೆ. ಈ ಗ್ರಾಮವನ್ನು ನಾಗರಖಂಡದ ಮನ್ನೆಯ ಬೊಮ್ಮದೇವನ ಸಮಕ್ಷಮದಲ್ಲಿ ಒಪ್ಪಿಸಲಾಯಿತು. ಕಲಿದೇವನ ಗುಣ ಹಾಗೂ ಪರಾಕ್ರಮವನ್ನು ವರ್ಣಿಸುವ ಈ ಪದ್ಯದಲ್ಲಿ ಅಂತ್ಯಾಕ್ಷರ ಪ್ರಾಸವನ್ನು ಗಮನಿಸಬಹುದು.

**ಯುವತಿಜನ ಕುಸುಮಬಾಣಂ**
**ಭುವನ ಪ್ರಖ್ಯಾತ ಗೀತವಿದ್ಯೆಗೆ ಜಾಣಂ**
**ಶಿವಚರಣಕಮಳಭೃಂಗಂ**
**ಧ್ರುವಧೈರ್ಯಂ ಕಲಿಯನಮಳಸಾಹಸತುಂಗಂ ॥**

ನಾಗರಖಂಡವು 'ಭೂಕಾಂತೆಯ ಹಾರದವೋಲ್' ಶೋಭಿಸುತ್ತಿತ್ತು ಎಂಬಲ್ಲಿ ಉಪಮಾಲಂಕಾರವನ್ನು ಗಮನಿಸಬಹುದು. ಅಲ್ಲದೆ ತಿಳಿವಳಿಯ ನಾಗರಖಂಡ ಎಂಬ ಭೋಗಿಯ ಫಣಾಮಣಿಯಂತೆ ಶೋಭಿಸುತ್ತಿತ್ತು. ಅಲ್ಲಿಯ ಅಶೇಷ ವಿಪ್ರರ ಗುಣಗಣವನ್ನು ವರ್ಣಿಸುವುದು ವಾಸುಗಿಗೂ ಅಳವಲ್ಲ. ಮುಂತಾದ ಕೆಲವು ಉತ್ಪ್ರೇಕ್ಷೆಯ ಉದ್ಗಾರಗಳನ್ನು ಅಲ್ಲಲ್ಲಿ ಗುರುತಿಸಬಹುದು.

**ಠಕ್ಕುರನ ಪರಾಕ್ರಮವನ್ನು ಬಣ್ಣಿಸಿದ ಪದ್ಯ:**

**ವೀರಾರಾತಿ ಮಧೇಭಕುಂಭದಳನಂ ಪೋಚ್ಚಂಡಪಂಚಾನನಂ**
**ಘೋರೆಂದಾರ್ದು ನಿಮಿರ್ದು ವೈರಿಭಟರಂ ಸೀಳ್ದಂ ನಭಕ್ಕೆತ್ತಿದಂ**
**ಭೇರಿಶಂಖಮೃದಂಗನಾದರಭಸಂ ತೀವಲ್ಕೆ ದಿಕ್ಚಕ್ರಮಂ**
**ತಾರಾವರ್ತನಗದ್ದಸಂಘ ಪೊಗಳಲ್ ಸಾವಂತನುಗ್ರಾಜಿಯೊಳ್ ॥**

**ದೇವ (ಕ್ರಿ.ಶ.೧೨೪೪)**

ಈತನು ಬಿಜಾಪುರ ಜಿಲ್ಲೆಯ, ಸಿಂದಗಿ ತಾಲೂಕಿನ, ಕಲ್ಕೇರಿ ಶಾಸನದ[೨೭] ಕರ್ತೃ ಎಂಬುದು ಈ ಕೆಳಗಿನ ಕಂದಪದ್ಯದಿಂದ ವ್ಯಕ್ತವಾಗುತ್ತದೆ.

**ಧರೆಯೞೆಯೆ ಬೀಚಿದೇವನ**
**ವರಸುತ ಪಾಯಿಗನ ಧರ್ಮಸಾಮ್ರಾಜ್ಯದ ಮೆ**
**ಯ್ಸಿರಿ ಕರುವಿನ ಕವಿ ಕನ್ನಡ**
**ಸರಸತಿ ವಿರಚಿಸಿದಂ ದೇವನೀ ಶಾಸನಮಂ ॥**

ಶಾಸನವು ೧೦೨ ಸಾಲುಗಳನ್ನು ಒಳಗೊಂಡಿದ್ದು, ೫೩ ಕನ್ನಡ ಪದ್ಯಗಳಿವೆ. ಕವಿಯು ಈ ಮೇಲೆ ತಿಳಿಸಿದಂತೆ ತಾನು ಕಲಕೇರಿಯ ಪ್ರಭು (ಧರೆಯೆರೆಯ) ಬೀಚಿದೇವನ ಮಗನಾದ ಪಾಯಿಗನ ಧರ್ಮ ಸಾಮ್ರಾಜ್ಯದ ಮೆಯ್ಸಿರಿಯೆನಿಸಿದ ಕುರುಹಿನ ಕವಿ, 'ಕನ್ನಡ ಸರಸ್ವತಿ' ಎಂದು ತನ್ನನ್ನು ಕರೆದುಕೊಂಡಿದ್ದಾನೆ. ಈ ಶಾಸನದ ಕಾಲ ೧೨೪೪ ಎಂದು ಮೇವುಂಡಿಯವರ[೨೮] ಅಭಿಪ್ರಾಯವಾಗಿದೆ. ಕವಿಚರಿತೆಕಾರರು[೨೯] 'ಧರ್ಮಸಾಮ್ರಾಜ್ಯದ ಮೆಯ್ಸಿರಿ' ಎಂಬುದು ಪೋಷಣೆಯನ್ನು ಹೇಳುವ ಮಾತೇ? ಸಂತತಿಯನ್ನು ಹೇಳುವ ಮಾತೆ? ಸ್ಪಷವಿಲ್ಲವೆಂದಿದ್ದಾರೆ. ಆದರೆ ಶಾಸನದಲ್ಲಿಯೇ ಸ್ಪಷ್ಟವಾಗಿರುವಂತೆ ಮೇವುಂಡಿಯವರ ಅಭಿಪ್ರಾಯದಂತೆ ಸಂತತಿಯನ್ನು ಹೇಳುತ್ತಿರಬಹುದೆಂದು ಗುರುತಿಸಬಹುದು.

ಯಾದವ ಸಿಂಘಣನ ಕಾಲಕ್ಕೆ ಸೇರಿದ ಈ ಶಾಸನವು ಗದ್ಯಪದ್ಯಾತ್ಮಕವಾಗಿವೆ. ಅಲ್ಲಲ್ಲಿ ತ್ರುಟಿತಗೊಂಡಿರುವ ಈ ಶಾಸನದ ಉಳಿದ ಭಾಗದಿಂದಲೇ ಕವಿಯ ಕಾವ್ಯಶಕ್ತಿ ವ್ಯಕ್ತವಾಗುತ್ತದೆ.

ಗದ್ಯ–ಪದ್ಯಗಳೆರಡೂ ಪ್ರೌಢವಾಗಿದೆ. ಶಾಸನದಲ್ಲಿ ಚಂಪಕಮಾಲೆ, ಉತ್ಪಲಮಾಲೆ, ಮತ್ತೆಭವಿಕ್ರೀಡಿತ, ಶಾರ್ದೂಲವಿಕ್ರೀಡಿತಗಳನ್ನು ಬಳಸಿದೆ. ಈ ಸುಂದರವಾದ ಶಾಸನವನ್ನು ಕಂಡರಿಸಿದವನು ಕಲ್ಯಾಣದ ರೂವಾರಿ ಬಲ್ಲೋಜ.

ಪಾಯಿಸೆಟ್ಟಿ ತನ್ನ ತಂದೆ ಬೀಚನಿಗೆ ಆಯು ಮತ್ತು ಸಿರಿಯನ್ನು ಒದಗಿಸಬೇಕೆಂಬ ಮತಿಯಿಂದ ಕಮಳಸೇನ ಜಿನಮುನಿಗಳ ಅನುಜ್ಞೆ, ಮೇರೆಗೆ ಕಟ್ಟಿಸಿದ ಬಸದಿಯ ಅನಂತತೀರ್ಥದೇವರ ಅಂಗರಂಗಭೋಗಕ್ಕೆ ಮತ್ತು ಅದರ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆಂದು ಕಲುಕೆರೆಯ ಮಹಾಪ್ರಭುಗಳೂ ಸೇರಿದಂತೆ ೩೦೦ ಜನ ಮಹಾಜನಂಗಳು ಭೂಮಿಯನ್ನು ದತ್ತಿ ನೀಡಿದ ವಿಷಯವನ್ನು ಶಾಸನ ಪ್ರಸ್ತಾಪಿಸಿದೆ. ಶಾಸನದಲ್ಲಿ ಬಸದಿಯ ಪಾಯಿಗನ ಹಾಗೂ ಕಲುಕೆರೆಯ ವರ್ಣನೆ ಬಂದಿದೆ.

ಪಾಯಿಸೆಟ್ಟಿಯ ಪ್ರಶಂಸೆಯಿರುವ ಈ ಕೆಳಗಿನ ವೃತ್ತ ಪದ್ಯ ಹೀಗಿವೆ.

**ಕ್ಷೋಣೀಮಧ್ಯದೊಳಂಕುರಂ ನೆಗರ್ದು ಪರ್ಬಿ ಲೋಕವಿದ್ವಜ್ಜನ**
**ಶ್ರೇಣಿಹಸ್ತತಳಂಗಳಲ್ಲಿ ಫಳಮಾಯ್ತಾಶಾಧಿನಾಥಾಂಗನಾ**
**ವೇಣಿಭಾರದ ಮೇಲೆ ಪೂತುದಮಮಾ ಕಾಯಿಲ್ಲಿ ಹೂವಲ್ಲಿದೇ**
**ಜಾಣ್ಣೋ ಬೀಚನ ಸೂನು ಪಾಯನ ಯಶೋವಲ್ಲೀಲತಾಡಂಬರಂ ॥**

**ಬೀಚನ ಪ್ರಭಾವವನ್ನು ವಿವರಿಸುವ ಗದ್ಯಭಾಗ:**

**ಆ ಪ್ರಧಾನಕುಳತಿಳಕನಪ್ರತಿಮಮಲ್ಲಂ ಮಲ್ಲನ ಸಹೋದರಂ ಯಾದವ ನಾರಾಯಣಂಗೆ ಒಂದನೆಯ ಕುಮಾರಕಂಠೀರವಂ ಎರಡನೆಯ ಸೌಪರ್ಣನುಂ ಮೂರನೆಯ ಲಲಾಟ ಲೋಚನಂ ನಾಲ್ಕನೆಯ ಕರಣೋದಯನುಂ ಅಯ್ದನೆಯ ವಿಜಯಭುಜಾದಂಡನುಂ ಆಱನೆಯ ಚೇತಾಂಗಭೂತನುಂ ಏೞನೆಯ ಮಲಧಾನುರೂಪನುಂ ಎಂಟನೆಯ ವಿಭವಾಂಗ ಮಂಗಳನುಂ ಒಂಭತ್ತನೆಯ ಯೋಗಪ್ರಭಾವನುಂ ಹತ್ತನೆಯ ಭಾವರಸಾಳಂಕಾರನುಂ ಹನ್ನೊಂದನೆಯ ಪ್ರಥಮಾವತಾರಮೆನಿಸಿದ ರಾಯದಂಡನಾಥ ಗಂಧವಾರಣ, ಬೀಚಂ ಪತಿಹಿತಕರ ಪ್ರಭಾವನಾದ ವಿವರವೆಂತೆಂದಡೆ ಎಂದಿದೆ.**

**ಕಲುಕೆರೆಯ ವರ್ಣನೆ ಹೀಗಿದೆ:**

> **ನೆಟ್ಟನೆ ಜಂಬೂದ್ವೀಪ**
> **ಕ್ಕಿಟ್ಟಳ ಹಗರಟಗೆ ನಾಡು ನೊಸಲಾ ನೊಸಲಿಂ**
> **ಗಿಟ್ಟೆಸೆವ ತಿಳಕದಂತಿರೆ**
> **ಪಟ್ಟಣವಿದು ರಾಯಮಱಿಗೆ ಕಲುಕೆಱೆಯೆಸೆಗುಂ ॥**

**ಸೇನಬೋವ ಬೊಪ್ಪಣ್ಣ (ಕ್ರಿಶ.೧೨೪೭):**

ಧಾರವಾಡ ಜಿಲ್ಲೆಯ, ಹಿರೇಕೆರೂರು ತಾಲೂಕಿನ, ಮಡಲೂರಿನಲ್ಲಿರುವ ವೀರಭದ್ರ ದೇವಾಲಯದ ಮುಂದಿರುವ ಶಾಸನದ[೩೦] ಕರ್ತೃ. ಈತ ಶಾಸನವು ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲದೇವನ ಆಳ್ವಿಕೆಯ ಕಾಲಕ್ಕೆ ಸೇರಿದ್ದು. ಇದರ ಕಾಲ ಕ್ರಿಶ.೧೨೪೭ ಆಗಿದೆ. ಶಾಸನ ಕನ್ನಡದಲ್ಲಿದ್ದು ಸಂಪೂರ್ಣವಾಗಿ ಗದ್ಯದಲ್ಲಿಯೇ ಇದೆ. ಪ್ರಸ್ತುತ ಶಾಸನವು ಎರಡು ದತ್ತಿಯ ವಿಷಯವನ್ನು ನಿರೂಪಿಸಿದೆ. ಮೊದಲನೆಯ ದತ್ತಿಯ ವಿಷಯವು ಅಸ್ಪಷ್ಟವಾಗಿದೆ. ಅಲ್ಲಿ ಕೆಲವು ಪಂಕ್ತಿಗಳು ಬಿಟ್ಟು ಹೋಗಿರುವಂತೆ ತೋರುತ್ತದೆ. ಕೇವಲ ದತ್ತಿ ನೀಡಿದ ಭೂಮಿಯ ಸೀಮಾ ವಿವರವಿದ್ದು. ಯಾರು ಯಾರಿಗೆ ಕೊಟ್ಟರು ಎಂಬ ವಿಚಾರ ತಿಳಿಯುವುದಿಲ್ಲ. ದಾನ ನೀಡಿದವನ ಪ್ರಶಸ್ತಿ ಮಾತ್ರ ಇದ್ದು, ಆತನ ಹೆಸರಿಲ್ಲ. ಮುಂದೆ ಬೊಮ್ಮಿದೇವರಸರು ಶ್ರೀಮನ್ನಾಳ್ಪ್ರಭು ಮಡಲೂರ ಪೊಲ್ಲಗಾವುಂಡಂಗೆ 'ಕಿಳ್ಗೋಗು' ಮರ್ಯಾದೆಯನ್ನು; ನಡೆಸಿದುದನ್ನೂ ಮತ್ತು ಭೂಮಿಯನ್ನು ದತ್ತಿ ನೀಡಿದುದನ್ನೂ ಉಲ್ಲೇಖಿಸಿದೆ.

"ಬರೆದಂ ಮಂದಣ್ಣಗಳ ಮಗ ಸೇನಬೋವ ಬೊಪ್ಪಣ್ಣನು" ಎಂಬ ವಾಕ್ಯ ಭಾಗದಿಂದ ಮಾದಣ್ಣನ ಮಗ ಸೇನಬೋವ ಬೊಪ್ಪಣ್ಣನು ಶಾಸನವನ್ನು ಬರೆದವನೆಂಬ ವಿಷಯ ತಿಳಿದುಬರುತ್ತದೆ. ಈ ಶಾಸನವನ್ನು ಕಂಡರಿಸಿದವನು ದಾಮೋಜನ ಮಗ ಸೂತ್ರಧಾರಿ ಚಿಣ್ಣೋಜ.

**ಶಾಸನದಲ್ಲಿ ಬಳಸಿದ ಗದ್ಯದ ಭಾಗವನ್ನು ಹೀಗೆ ನೋಡಬಹುದು.**

**"ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರಂ ರೇಖರೇವಂತ ಮಱಿವೊಕ್ಕರ ವಜ್ರಪಂಜರಂ ಗೋತ್ರಪವಿತ್ರ ಸುಜನಪ್ರಸನ್ನ ಕಲಿಗಳಾದಿತ್ಯ ಚಲದಂಕಕಾಱ ಪರಬಳಭೀಮ ಸಾಹಸೋತ್ತುಂಗ ಅಣ್ಣನಂಕಕಾಱ ಸತ್ಯರಾಧೇಯ ಪುಸಿದು ನುಡಿವರ ಗಂಡ ವಿದ್ಯಾರ್ತರಿಗೀವರ ದೇವ ಪತಿಮೆಚ್ಚೆಗಂಡ ಧರ್ಮದ ಮೇರು ನಾಮಾವಳಿವಿರಾಜತಮಪ್ಪ...."**

**ಕಬ್ಬದ ದಾಮೋದರ ಚೇರೆಯ ಅಲ್ಲಾಳಬುಧ (ಕ್ರಿ.ಶ.೧೨೪೯)**

ಚಿಕ್ಕಮಗಳೂರು ಜಿಲ್ಲೆಯ, ಚಿಕ್ಕಮಗಳೂರು ತಾಲೂಕಿನ, ಅಂಬಳೆ ಗ್ರಾಮದ ಲೋಕೇಶ್ವರ ದೇವಾಲಯದ ಮುಂದಿರುವ ಶಾಸನದ[೩೧] ಕರ್ತೃಗಳು ಇವರು. ಕವಿಗಳ ಹೆಸರು ಉಕ್ತವಾಗಿರುವ ಕಂದಪದ್ಯವು ಅಪೂರ್ಣವಾಗಿದ್ದು ಅದು ಇಂತಿದೆ.

**ಕವಿ ಕಬ್ಬದ ದಾಮೋದರ**
**... ಚಕ್ರೇಶ ಚೇರೆಯಲ್ಲಾಳಬುಧಂ**
**ಸವಿನಯದೆ ಪೇಳ್ದರೆನೆ ಪಳಿ**
**ವವನೆಂಬವನಾವ... ಯ ಕವಿಗಳ ಕೃತಿಯಂ ॥**

ಬಹುಶಃ ಕಬ್ಬದ ದಾಮೋದರ ಹಾಗೂ ಚೇರೆಯಲ್ಲಾಳ ಬುಧರೆಂಬುವರು ಕವಿಗಳಾಗಿದ್ದು ಇಬ್ಬರೂ ಒಳ್ಳೆಯ ಕವಿಗಳಾಗಿದ್ದಿರಬಹುದೆಂದು ಊಹಿಸಬಹುದಾಗಿದೆ. ಇವರಿಗೆ ಸಂಬಂಧಿಸಿದ ಇತರ ಯಾವ ವಿವರಗಳೂ ಶಾಸನದಲ್ಲಿಲ್ಲ.

ಹೊಯ್ಸಳ ವೀರಸೋಮೇಶ್ವರನ ಕಾಲಕ್ಕೆ ಸೇರಿದ ಈ ಶಾಸನದ ಕಾಲ ಕ್ರಿ.ಶ.೧೨೪೯. ಸೋಮೇಶ್ವರನ ಪಾದಪದ್ಮೋಪಜೀವಿಯಾದ ಬೆಟ್ಟರಸ ದಣ್ಣಾಯಕರು ತಮ್ಮ ಸಮಸ್ತಾಭ್ಯುದಯಕ್ಕಾಗಿ ಪ್ರತಾಪಪುರವಾದ ಅಮ್ಮೆಳೆಯ ದ್ವಾದಶಪುರ ಶೇಷಮಹಾಜನಗಳು, ಪಟ್ಟಸ್ವಾಮಿ ಸಿರೆಯ ಪದ್ಮಣ್ಣನೊಳಗಾದ ಸಮಸ್ತ ನಖರಗಳ ಸಮಕ್ಷದಲ್ಲಿ ಊರವರನ್ನು ಒಡಂಬಡಿಸಿ ಅಮ್ಮೆಳೆಯ ಸಮಸ್ತ ಪ್ರಜೆಗಾವುಂಡಗಳ ಸಿದ್ಧಾಯದೊಳಗೆ ಆ ವೂರ ದೇವದಾನಕ್ಕೆ ಹತ್ತು ಗದ್ಯಾಣವನ್ನು ಬಳಿಸಹಿತ ಕುಳವ ಕಡಿದು ಪಂಚಮಠಸ್ಥಾನದ ಮೂಲಸ್ಥಾನ ಲೋಕೇಶ್ವರ, ಬಿಟ್ಟೇಶ್ವರ, ನಖರೇಶ್ವರ, ಹರಿಹರದೇವ ಕೇಶವದೇವ ಮುಂತಾದ ದೇವರುಗಳಿಗೂ ಎರಡು ಬಸದಿಗಳಿಗೂ ದತ್ತಿ ನೀಡಿದುದನ್ನು ಶಾಸನದಲ್ಲಿ ಉಲ್ಲೇಖಿಸಿದೆ. ಕವಿಯ ಶೈಲಿಗೆ ಎರಡು ಉದಾಹರಣೆಗಳು:

ಬೆಟ್ಟರಸ ದಣ್ಣಾಯಕರ ತಂದೆ ಕೇಶಿರಾಜ ವಿಭುವಿನ ವರ್ಣನೆ:

**ಮುನಿದನೆ ಮೂಱುರಾಯರಿದಿರಾಂತೊಡೆ ಗೆಲ್ದಪನೀವೆನೆಂದು ಪೂ**
**ಣ್ದನೆ ಜಗತೀತಳಂ ನೆಱೆಯೆ ಬೇಡಿದೊಡಿತ್ತಪನೊಲ್ದು ಕಾವೆನೆಂ**
**ದನೆ ಜವನಟ್ಟಿಕೊಂದಪೆನೆನುತ್ತಿರೆ ಕಾದಪನೆಂದೊಡಿನ್ನದಾರ್‌-**
**ತನಗೆಣೆ ವೈರಿವಾರಣ ವಿದಾರಣ ಕೇಸರಿ ಕೇಶಿರಾಜನೊಳ್ ॥**

ಸೋಮೇಶ್ವರ ಚಕ್ರವರ್ತಿಯ ವರ್ಣನೆ:

> **ವೀರದೊಳಿಂದ್ರಸೂನುಗೆಣೆ ಸಂಗಡಮೊವೆಡೆಯೊಳ್ ದಿನೇಶಜಂ**
> **ಗೋರಗೆ ವಾರಿನಾಥನೊಳುದಾರಗಭೀರತೆಗುನ್ನತಿಕ್ಕೆಯೊಳ್**
> **ಮೇರುಗೆ ಪಾಟಿಯೆಂದೊಡವನೀಶರದಾರ್ ದೊರೆ ಚೋಳರಾಜ ನಿ**
> **ಸ್ತಾರಕ ಸೋಮಭೂಮಿಪನೊಳಪ್ರತಿಮಪ್ರಬಳಪ್ರತಾಪನೊಳ್ ॥**

**ಲಖ್ಖಯ್ಯ (ಕ್ರಿ.ಶ.೧೨೫೨)**

ಹಾಸನ ಜಿಲ್ಲೆಯ, ಚನ್ನರಾಯಪಟ್ಟಣದ, ಬೆಳಗುಲಿ ಗ್ರಾಮದ ಶಾಸನವನ್ನು[೭] ಈತನು ರಚಿಸಿದ್ದಾನೆ. ಶಾಸನ ಕೊನೆಯ ಭಾಗದಲ್ಲಿ "ಶ್ರೀಕರಣದ ಚಟ್ಟಯ್ಯನ ಮಗ ಲಖ್ಖಯ್ಯ ಬರದ ಶಾಸನ" ಎಂದಿದೆ. ಈ ಶಾಸನದ ಕಾಲಾವಧಿ ಕ್ರಿ.ಶ.೧೨೫೨ ಹೊಯ್ಸಳ ದೊರೆ 'ಬಲ್ಲಾಳ'ನ ಆಳ್ವಿಕೆಯ ಕಾಲದಲ್ಲಿ 'ಕೇಶವೇಶ್ವರ' ದೇವರಿಗೆ ಅಗ್ರಹಾರ ಕೇಶವಪುರ (ಬೆಳಗುಲಿ)ಯನ್ನು ಹಾಗೂ ಹೊಯ್ಸಳ ಸೋಮೇಶ್ವರ ಮಹಾಪ್ರಧಾನ ಕೇಸಿರಾಜ ದಣ್ಣಾಯಕ, ಬಿಲ್ಲಯ್ಯ ದಣ್ಣಾಯಕ ಹಾಗೂ ಬೆಟ್ಟಯ್ಯ ದಣ್ಣಾಯಕ ಈ ಕೆಲವರು ಭೂದಾನ ನೀಡಿದ ವಿವರಗಳಿವೆ. ಹಾಗೂ ಕೇಸಿಯಣ್ಣ ಹಾಗೂ ಇತರೆ ಮಹಾಜನಗಳು ೪೦ ಗದ್ಯಾಣಗಳನ್ನು ಕೇಶವೇಶ್ವರದೇವರಿಗೆ ವಾರ್ಷಿಕವಾಗಿ ಕಟ್ಟುಗುತ್ತಿಗೆ ಮತ್ತು ಪಿಂಡದಾನವಾಗಿ ನೀಡಿದ್ದಾರೆ.

ಈ ಶಾಸನ ಗದ್ಯಭಾಗವನ್ನು ಮಾದರಿಯಾಗಿ ಈ ಕೆಳಗಿನಂತೆ ನೋಡಬಹುದು.

> **ಜಯವಿರ್ಪ್ಪಂತಿರ್ದ್ದಪಂ ಹೊಯ್ತಳನ್ರಿಪನ ಭುಜೋತ್ಖಾತಖಳ್ಗಕ್ಕೆ ಭೂಯೋದಯ ವಿರ್ಪ್ಪಂತಿರ್ದ್ದಪಂ ಬಾಂಧವಬುಧಜನಶಿಷ್ಟೇಷ್ಟವರ್ಗಕ್ಕೆ ಪುಣ್ಯಾಶ್ರಯವಿರ್ಪ್ಪಂತಿರ್ದ್ದಪಂ ಶ್ರೀಶ್ರುತಿವಿಹಿತ ಪುರಾಣೋಕ್ತ ಮಾರ್ಗಕ್ಕುಮಾದೇವಿಯ ರಾಜ್ಯಶ್ರೀವದೂಟೀಮಣಿ ಮಯಮುಕುರಂ ಕೇಶವಂ ಕೀರ್ತಿಕಾನ್ತಂ ॥ ಪರನಾರೀದೂರನಂ ಶೂರನಿಖಿಳಜನಾಧಾರನಂ ಸಾರನಂವಿಸ್ತರ ತೇಜೋದಿತ್ಯನಂ ನಿತ್ಯನನಮಳ ಗುಣಾಗಣ್ಯನಂ ಪುಣ್ಯನಂ ಸೌಂದರರೂಪೋದ್ದಾಮನಂ ಕಾಮ ನನರಿನೃಪಪ್ರಿತುಸೆಲ್ಲನಂ ಬಲ್ಲನಂ ಪೋಲ್ವರದಾರ್ಭೂಭಾಗದೊಳ್ ಚಾಗದೊಳಸಮತ ರಖ್ಯಾತಿಯಿಂ ನೀತಿಯಿಂದಂ ॥ ದಾನನಿಧಾನದಾನಿಗಳಬಲ್ಲಹ ಕೀರ್ತಿವಿಳಾಸಕೀರ್ತಿಕಾನ್ತಾ ನಯನಾಭಿರಾಮ ಬುಧಬಾನ್ಧವಬಾಂಧವ ಕಳ್ಪಭೂಜ ವಿದ್ಯಾನಿಧಿಸತ್ಕಾಳಾನಿಧಿ ದಯಾನಿಧಿ ಬೆಟ್ಟಚಮೂಪನಿತ್ಯನಾಗೀ ನೆಲನೂಳ್ಪಿನಂ ದಿಗಿಭವುಳ್ಳಿನವಿಂದ್ವಿನಬಂಬ ವುಳ್ಳಿನಂ ॥ ಶ್ರೀಮತುಪ್ರತಾಪಚಕ್ರವರ್ತಿ ಹೊಯ್ಸಳ ಶ್ರೀವೀರಬಲ್ಲಾಳದೇವರಸರ ಕೈಯಲು ಶ್ರೀಮಹಾಪ್ರಧಾನಂ ಕೇಶಿರಾಜದಣ್ಣಾಯಕರು ತಾವು ಮಾಡಿದ ಅಗ್ರಹಾರ ಕೇಶವಪುರ** ಇತ್ಯಾದಿ ಮುಂದುವರೆದಿದೆ.

**ನಾಗಣ್ಣ (ಕ್ರಿ.ಶ.೧೨೬೫)**

ಹಾಸನ ಜಿಲ್ಲೆಯ, ಅರಸೀಕೆರೆ ತಾಲೂಕಿನ, ಹಾರನಹಳ್ಳಿ ಗ್ರಾಮದ[೩೩] ಶಾಸನವನ್ನು ಈತನು ರಚಿಸಿದ್ದಾನೆ. ಶಾಸನದ ಕಾಲ ಕ್ರಿ.ಶ.೧೨೬೫ ಪಿರಿಯಪಟದ ಅಗ್ರಹಾರ ಹಿರಿಯ ಸೋಮನಾಥ ಪುರವಾದ ಹಾರುವನಹಳ್ಳಿಯ ಶ್ರೀ ಚನ್ನಕೇಶವದೇವರ ನೆಲೆ ವೃತ್ತಿಗಳನ್ನು, ತೋಟಸ್ಥಳಗಳನ್ನು ಶ್ರೀಮನ್ಮಹಾಪ್ರಧಾನ ಸೋಮೇಯದಣ್ಣಾಯಕರ ಹೆಗ್ಗಡೆ ಪೆದ್ದಣ್ಣನ ಮುಂದಿಟ್ಟು (ಸಮ್ಮುಖದಲ್ಲಿ) ಶ್ರೀಚನ್ನಕೇಶವ ದೇವರ ಸ್ಥಾನಿಕ ನಾಗನಂಬಿಯರ ಮಕ್ಕಳು ನಲ್ಲಣ್ಣ, ಕೇಶಣ್ಣ, ಮುಖ್ಯವಾದ ಸಮಸ್ಥ ನಿಬಂಧಿಕಾರಿಗೆ ಹೊಂಗುತ್ತಗೆಯಾಗಿ ನೆರ್ರೆವುರುಗಳ ಮರ್ಯಾದೆಯಲ್ಲಿ ಕಂಬವೊಂದಕ್ಕೆ 'ಪಣ'ವೊಂದರ ಮರ್ಯಾದೆ ಸಲ್ಲಿಸುತ್ತಾ ಬಂದಿರುವರು.

ತೋಟಗಳ ಕೃಷಿ ವ್ಯವಸಾಯ ಏತ ನೀರಾವರಿ ಸಮಸ್ತ ವ್ಯವಸಾಯವನ್ನು ತಾವೇ ಮಾಡುವರು ಎಂಬುದಾಗಿ ತಿಳಿಸಿದೆ.

**ಶಾಸನದ ಗದ್ಯ ಹೀಗಿದೆ:**

**ಆ ಗದ್ದೆಗೆ ಸಿದ್ದಾಯ ಕಂಬವೊಂದಕ ಹಾಗವೊಂದನ್ನು ತೆರುವರು. ಆ ತೋಟದ ಫಲಗಳು, ಆದಿಕ್ರಯದಾನಕ್ಕೆ ಸಲೂವುದು. ಕೃಷಿ ವ್ಯವಸಾಯ ಮಾಡದಿದ್ದರಾದಡೆ ಅವರ ಪಡಿಜೀವಿತದಲೆ ಯಿಕ್ಕಿ ಮಾಡಿಸುವರು. ಹೆಂಬಳ ಸಲುವುದುಯೀ ಮರ್ಯಾದೆಯೆಲೆ ವರ್ಷಂಪ್ರತಿ ಶಿವರಾತ್ರಿಯಲಿ ಸಿದಾಯವನಿಕ್ಕುವರು ಕಲಿವುಗ ಕಾಲಾವಧಿ ಆಗಿ ಎಂದೆಂದಿಗೆವೂ ವಿಪುಳಫಳಂ ಮಾಳ್ಪರು ಇ ಧರ್ಮಕೆ ಆವ ಕಂಟಕನಾದನ ಅವನು ಈ ದರ್ಮ್ಮವನಳಿದವನು. ಶ್ರೀ ವಾರಣಾಸಿಯಲಿ ಕವಿಲೆಯನೂ ಬ್ರಾಮ್ಮಣರನೂ ಸ್ವಹಸ್ತವದಯ ಮಾಡಿದವನು ಯೀ ಧರ್ಮವ ಪಾಲಿಸುವೂದು"** ಎಂದಿದೆ.

**ಶಾಸನ ಕೊನೆಯಲ್ಲಿ ಶಾಸನ ಕವಿಯ ಉಲ್ಲೇಖ ಹೀಗಿದೆ:**

**"ಬರದಂ ಸೇನಬೋವ ಮಾದಂಣ್ನನ ಮಗ ನಾಗಂಣ್ನ ಆ ಪರಿವಾರಂಗಳ ವೊಪ್ಪ ಶ್ರೀ ಚನ್ನಕೇಶವ"** ಎಂದಿದೆ.

**ಗೋಪಿರಾಜ (ಕ್ರಿ.ಶ.೧೨೬೫)**

ಬಿಜಾಪುರ ಜಿಲ್ಲೆಯ, ಬಾಗೇವಾಡಿ ತಾಲೂಕಿನ, ಇಂಗಳೇಶ್ವರ ಗ್ರಾಮದ[೩೪] ನಾರಾಯಣ ದೇವರ ಗುಡಿಯ ಒಂದು ಶಾಸನವನ್ನು ಈತ ರಚಿಸಿದ್ದಾನೆ. ಈತನು ಹರಿತಗೋತ್ರದ

ಶೈವಬ್ರಾಹ್ಮಣನೆಂದು ಶಾಸನದಲ್ಲಿ ಹೇಳಿದೆ. ಕವಿಯ ಪರಿಚಯ ಶಾಸನದ ಅಂತ್ಯಭಾಗದ ಒಂದು ಕಂದಪದ್ಯದಲ್ಲಿ ಹೇಳಿದೆ:

**ಗುರುಚರಿತಸದಾಶಿವ**
**ಚರಣಾಂಬುಜಭೃಂಗ ಹರಿತ ಗೋತ್ರೋದ್ಭವನೊ**
**ಪ್ಪಿರಲೀ ಶಾಸನಗಬ್ಬಮ**
**ವಿರಚಿಸಿದಂ ಗೋಪಿರಾಜನಿಳೆಗಿಂತೆಸೆದಂ ॥**

ದೇವಗಿರಿ ಯಾದವ ಅರಸ ಮಹಾದೇವರಾಯನ ಕಾಲಕ್ಕೆ ಸೇರಿದ ಈ ಶಾಸನವು ಕ್ರಿ.ಶ. ೧೨೬೫ಕ್ಕೆ ಸರಿಹೊಂದುತ್ತದೆ. ಯಾದವ ನಾರಾಯಣ ಶ್ರೀ ಮಹಾದೇವರಾಯನು ತನ್ನ ರಾಜಧಾನಿಯಾದ ದೇವಗಿರಿಯಲ್ಲಿ ರಾಜ್ಯವನ್ನಾಳುತ್ತಿದ್ದಾಗ, ಸುಂಬರ ಚೌಂಡರಸನೆಂಬುವನು ಮಾಡಿಸಿದ ಊರೊಡೆಗೇರಿಯ ಗೋಪಿನಾಥದೇವರ ದೇವಸ್ಥಾನಕ್ಕೆ ಬಿಟ್ಟ ಕೆಲವು ದತ್ತಿಗಳ ಉಲ್ಲೇಖವೇ ಈ ಶಾಸನದ ವಸ್ತು. ಇದನ್ನು ಮಣಿಗವಳ್ಳಿ ವೊಮಬ್ಬೋಜನ ಮಗ ಕಲ್ಲೋಜ ಮತ್ತು ಬೊಮ್ಮೋಜನ ಮಗ ರಾಮೋಜ ಎಂಬುದಾಗಿ ಕಂಡರಿಸಿದುದಾಗಿ ಕೊನೆಯ ಭಾಗದಲ್ಲಿ ಹೇಳಿದೆ. ಒಟ್ಟು ೪೯ ಸಾಲುಗಳನ್ನು ಕಂಡರಿಸಿರುವ ಈ ಚಿಕ್ಕ ಚಂಪೂಕಾವ್ಯದಲ್ಲಿ ೧೪ ಕನ್ನಡ ಪದ್ಯಗಳಿವೆ. ಶಂಭುಸ್ತುತಿಯ ಸರ್ವಸಾಮಾನ್ಯ ಸಂಸ್ಕೃತ ಶ್ಲೋಕದ ತರುವಾಯ ಗೋಪಿನಾಥನ ಸ್ತೋತ್ರಪದ್ಯವಿದೆ. ಶಾಸನದ ಮೊದಲಲ್ಲಿಯೂ ಕೊನೆಯಲ್ಲಿಯೂ 'ಶ್ರೀ ಗೋಪಿನಾಥಶರಣು' ಎಂಬ ಮಾತಿದೆ. ಕೊಟ್ಟ ದತ್ತಿಗಳನ್ನೂ ಕೂಡ ಹೊಲದ ಮೇರೆ ಮೊದಲಾದವು ಸಹಿತವಾಗಿ ಪದ್ಯಗಳಲ್ಲಿಯೇ ಹೇಳಿರುವುದು ಕವಿಯ ವೈಶಿಷ್ಟ್ಯವಾಗಿದೆ. ಕವಿ ಗೋಪಿರಾಜನ ಕಾವ್ಯ ಪ್ರೌಢಿಮೆಯನ್ನು ತಿಳಿಯಲು ಮಾದರಿಗಾಗಿ ಎರಡು ಪದ್ಯಗಳು.

**ಗೋಪಾಲಕೃಷ್ಣನ ಸ್ತುತಿ ಪದ್ಯ:**

**ಶ್ರೀಮದ್ವಿದ್ಯಾಧರೇಂದ್ರೋರಗಸುರನತಶ್ರೀಪಾದಪಂಕೇಜರಮ್ಯೋ**
**ದ್ದಾಮಂ ಕ್ಷೀರಾಬ್ಧಿವಾಸಂ ಸರುಭುವಿರುಹಮಂ ನೆರೆ ಮಿತ್ರೌ... ಬಂಗಿಯೊ**
**ಳಾ ಮೂಱುಂ ಲೋಕಮಂ ರಕ್ಷಿಸಲು ಮುದದಿ ವೇಣ್ವಾದಮಂ ಮಾಳ್ಪ ಲಕ್ಷ್ಮೀ**
**ರಾಮಂ ಗೋಪಾಳಕೃಷ್ಣಂ ಸಲಹುವನೆರಡೈನೂರ್ವರಂ ಪ್ರೇಮದಿಂದಂ ॥**

**ದತ್ತಿಯ ಉಲ್ಲೇಖ:**

**ಸಿರಿವಾಗಿಲಿಂದ ಬಡಗಲು**
**ಕರನೊಪ್ಪುವ ಕಲ್ಲ ಗಾಣವಾಚಂದ್ರಾರ್ಕಂ**
**ಬರ ನಡೆವಂತಿರೆ ತಾವಿ**
**ತ್ತರು ಗೋಪಿನಾಥದೇವಗೆರಡೈನೂರ್ಬರ್ ॥**

**ಈಶ್ವರಾರ್ಯ (ಕ್ರಿ.ಶ.೧೨೭೪)**

ಚಿತ್ರದುರ್ಗ ಜಿಲ್ಲೆಯ, ದಾವಣಗೆರೆ ತಾಲ್ಲೂಕು, ಹರಿಹರ ಹೋಬಳಿ, ಭಾನುವಳ್ಳಿಯ ಒಂದು ಶಿಲಾಶಾಸನವು[೩೫] ಕವಿ ಈಶ್ವರಾರ್ಯನಿಂದ ರಚಿತವಾಗಿದೆ. ಶಾಸನದ ಮೂಲಕ ಕವಿಯ ಬಗೆಗೆ ಇತರ ವಿವರಗಳು ದೊರೆಯುವುದಿಲ್ಲ. ಕವಿಯು ಕೊನೆಯ ಪದ್ಯದಲ್ಲಿ:

> **ಆ ಚಂದ್ರಾರ್ಕಂ ಸಲುವಿನ**
> **ಮಾಚರಿಸಿದನತುಳಧರ್ಮಮಂ ತಿಪ್ಪರಸಂ**
> **ವಾಚಸ್ಪತಿಗರಿದೆನೆ ಸಂ**
> **ಕೋಚದೆ ಶಾಸನಮನೀಶ್ವರಾರ್ಯಂ ಪೇಳ್ದಂ ॥**

ಎಂದು ಹೇಳಿಕೊಂಡಿದ್ದಾನೆ. ಈ ಶಾಸನದ ಕಾಲ ಕ್ರಿ.ಶ.೧೨೭೪ ಆಗಿದೆ. ಪರಿಚಿತವಾದ ಶಂಭುಸ್ತುತಿಯಿಂದ ಪ್ರಾರಂಭವಾಗಿ ಈ ಶಾಸನವು ಯಾದವ ಅರಸರ ವಂಶಾವಳಿಯನ್ನು ರಾಮಚಂದ್ರರಾಯನವರೆಗೆ ಹೇಳಿದೆ. ಭಾನುವಳ್ಳಿಯ ಮಹಾಜನಗಳಿಗೆ ಯಾದವ ರಾಮಚಂದ್ರನ ಮಹಾಪ್ರಧಾನ ತಿಪ್ಪರಸನು ಮೂರು ಕಾಲುವಳ್ಳಿ ಸಹಿತವಾಗಿ ಆ ವೂರಿನ ಸುಂಕವನ್ನು ಬಿಟ್ಟುಕೊಟ್ಟಿರುವುದೇ ಈ ಶಾಸನದ ಮುಖ್ಯವಸ್ತು. ೪೨ ಸಾಲುಗಳಿಂದ ಕೂಡಿರುವ ಈ ಶಾಸನದಲ್ಲಿ ಹಲವು ಕಂದಪದ್ಯಗಳಿವೆ. ಇವುಗಳಲ್ಲಿ ಕವಿಯ ಶಬ್ದಜೋಡಣೆ, ಕಲ್ಪನೆ, ಉತ್ಪ್ರೇಕ್ಷೆಗಳು. ಸಹಜ ಸುಂದರವಾಗಿವೆ. ಉದಾಹರಣೆಗೆ ದೇವಗಿರಿಯ ಸಿಂಘಣ, ರಾಮಚಂದ್ರ ಮತ್ತು ಅವನ ಮಹಾಪ್ರಧಾನ ತಿಪ್ಪರಸರ ಪ್ರಶಂಸೆಯನ್ನೊಳಗೊಂಡ ಪದ್ಯಗಳು ಚೆನ್ನಾಗಿವೆ.

**ರಾಮಚಂದ್ರನ ವರ್ಣನೆ:**

> **ಕಾಮಂ ಖ್ಯಾತಂ ಚೆಲ್ವಿಂ**
> **ಭೀಮಂ ಭುಜಬಲದಿನಮೃತತನುವಿಂ ಸೋಮಂ**
> **ಕಾಮಂ ಭೀಮಂ ಸೋಮಂ**
> **ರಾಮಮಹೀಪತಿಗೆ ತದ್ಗುಣಂಗಳಿನೆನಿಪಂ ॥**

**ಗುಹಾರಣ್ಯದ ವರ್ಣನೆ:**

> **ಗುಹಗಹನದ ಬಹುಮಹಿಮೆಯ**
> **ನಹಮಹಮಿಕೆಯಿಂದಹೀಂದ್ರಜಿಹ್ವೆಗಳೊಳಗಾ**
> **ಗಹ ಎಣಿಸಲೆಯ್ದುವೆಂದೊಡೆ**
> **ಗಹನಹಿಸಿಯೆ ನಗಿಸಿಕೊಳ್ವರೆಣಿಸಿದೊಡನ್ಯರ್ ॥**

**ಕವಿಕಂದನ ನಂದ (ಕ್ರಿ.ಶ.೧೨೭೫):**

ಚಿಕ್ಕಮಗಳೂರು ಜಿಲ್ಲೆಯ, ಕಡೂರು ತಾಲೂಕು, ಕೇದಗಿಗೆರೆಯ ಶಾಸನವೊಂದನ್ನು[೩೬] ಈತ ಬರೆದಿದ್ದಾನೆ. ಶಾಸನದ ಕೊನೆಯಲ್ಲಿ "ಶಿವವರವಾಚಂದ್ರಾರ್ಕಂ ಕವಿ ಕಂದನನಂದಲಿಖಿತವಿದು ಶಿಲಲಿಖಿತಂ॥ ಎಂದಿದೆ. ಶಾಸನದಿಂದ ಕವಿಯ ವೈಯಕ್ತಿಕ ವಿಚಾರಗಳಾವವು ತಿಳಿಯುವುದಿಲ್ಲ. ಹೊಯ್ಸಳ ಅರಸ ಶ್ರೀವೀರನಾರಸಿಂಹದೇವನ III ಕಾಲಕ್ಕೆ ಸೇರಿದ ಈ ಶಾಸನವು ಕ್ರಿ.ಶ.೧೨೭೫ಕ್ಕೆ ಸೇರಿದೆ. ೬೨ ಸಾಲುಗಳಿಂದ ಕೂಡಿದ ಈ ಶಾಸನವು ಪಂಚಮಠದ ಆಚಾರ್ಯರೆಲ್ಲರೂ ಕೂಡಿ ವಾಮಶಿವದೇವರ ಸತಿ ಹೊಲ್ಲವ್ವೆ, ಆತನ ಮಗಳು ಮಹಾದೇವಿಯ ವರಪುತ್ರನಾದ ವಾಮಯ್ಯನಿಗೆ ದತ್ತಿಕೊಟ್ಟದ್ದನ್ನು ಹೇಳುತ್ತದೆ. ಹೊಯ್ಸಳನಾಡ ಶಿರೋಮಣಿಯಾದ ಅಸಂದಿನಾಡ ಪಂಚಮಠದ ಆಚಾರ್ಯರನ್ನೊಳಗೊಂಡ ಕವಿಕಂದನ ನಂದನ ಕಾವ್ಯಪ್ರೌಢಿಮೆಯನ್ನು ತಿಳಿಯಲು ಈ ಕಂದಪದ್ಯಗಳು ಸಾಕ್ಷಿಯಾಗಿವೆ:

**ಶ್ರೀಮದುಹೊಯ್ಸಣನಾಡ ಶಿ**
**ರೋಮಣಿಯಾಸಂದಿನಾಡ ಕಂಪಣಚಾರ್ಯರ್**
**ನಾಮಾವಳಿಯೆಂತೆಂದಡೆ**
**ನೇಮದ ತಪನಿಯತ ಗುರುಸಪುತ್ರಕರವರೊಳ್ ॥**

**ಮೊದಲೆನಿಪನಾದಿ ಗುರುಗಳ**
**ಗುದಯಿಸಿದಾ ಬ್ರಹ್ಮಯಾ ಬಾಚಯನುಂ**
**ಸದುಗುಣಿ ದೊಂದುರ ಕಲ್ಲಮ**
**ನಧಿಕಂ ಬೈಚಯ್ಯನಾತ್ಮಜಂ ಕಲಿದೇವಂ ॥**

**ವಾಮಶಿವರವಂ ಕಲ್ಲಯ್ಯನಯಂ**
**ವಾಮಯ್ಯಂ ನಾರಸಿಂಹ ಸುತ ಕಲ್ಲಯ್ಯಂ**
**ಗ್ರಾಮಕ್ಕಧಿಕರಸಿಯಕೆಱೆ**
**ವಾಮಯ್ಯಂಗೂಡಿ ಪಂಚಮಠದಾಚಾರ್ಯರ್ ॥**

**ಮಾಧವ (ಕ್ರಿ.ಶ.೧೨೮೫)**

ಚಿಕ್ಕಮಗಳೂರು ಜಿಲ್ಲೆಯ, ಮೂಡಗೆರೆ ತಾಲೂಕಿನ, ಕಳಸ ಗ್ರಾಮದ[೩೭] ಶಾಸನವನ್ನು ಈ ಕವಿಯು ರಚಿಸಿದ್ದಾನೆ. ಶಾಸನವು ಒಟ್ಟು ೧೧ ಸಾಲುಗಳನ್ನು ಒಳಗೊಂಡಿದ್ದು ೧೦ನೇ ಸಾಲಿನಲ್ಲಿ ಶಾಸನಕವಿಯ ಪ್ರಸ್ತಾಪ ಹೀಗಿದೆ. **"ಬರದಾತ ಕಲ್ಲೆಯನ ಮಾದವ ಶ್ರೀ.. ಚರಿಯ ಮಗ ಇಪರ ಕಂಡರಿಸಿದನು"** ಎಂದಿದೆ. ಇದರಿಂದ ಕಲೆಯನು ಈತನು ತಂದೆ ಎಂಬುದು ವೇದ್ಯವಾಗುತ್ತದೆ.

ರಾಯಬಲ್ಲಹದೇವರ ರಾಜ್ಯವಾಳುತ್ತಿರುವಾಗ ಅಡಪಳದ ಬಮ್ಮುವಿನ ಮಗ ಮಾಯ್ಯ ಶ್ರೀಕಳಸನಾಥ ದೇವರ ಅಮೃತಪಡಿಗೆ ಅಕ್ಕಿ ಕುಡುತೆ ೧ ಆ ಚಂದ್ರಾರ್ಕಸ್ಥಾಯಿಯಾಗಿ ನಡವಂತಾಗಿ ನೀಲಕಂಠ ಗಂಟೆಬಾಕನ ಕಯ್ಯಲ್ಲಿ ಆಲುಗಲ ಗುಡ್ಡಕಿಯಹಾಳಿ ಅಲ್ಲಿಂದ ಮೇಗಣವನು ಮಾಱಿಕೊಂಡು ಕೊಟ್ಟ ಅಂತಪ್ಪುದಕ್ಕೆ ಸಾಕ್ಷಿ ಎಂದಿದೆ.

**ಕವಿರಾಜ ಸಂಕಣ್ಣ (ಕ್ರಿ.ಶ.೧೨೮೭)**

ಈ ಕವಿಯು ಶಿವಮೊಗ್ಗ ಜಿಲ್ಲೆಯ, ಸೊರಬ ತಾಲೂಕಿನ, ಕಲ್ಲೂರು ಗ್ರಾಮದ[೩೮] ನಾಗರಹೊಂಡದ ಶಾಸನವನ್ನು ಬರೆದಂತೆ ಈ ಶಾಸನದ ಅಂತ್ಯಭಾಗದಿಂದ ತಿಳಿಯುತ್ತದೆ. ಶಾಸನದ ಅಂತ್ಯದಲ್ಲಿ **"ಇದೆಲ್ಲವಂ ಮಾಡಿದಾ ಕವಿರಾಜ ಸಂಕಣ್ಣ"** ಎಂದಿದೆ. ಪದ್ಯರೂಪವಾಗಿರುವ ಈ ಶಾಸನದಲ್ಲಿ ೨೪ ಸಾಲುಗಳಿದ್ದು ಅಲ್ಲಲ್ಲಿ ಅಳಸಿಹೋಗಿದೆ. ಅಕ್ಷರಗಳೆಲ್ಲವೂ ಸವೆದು ಹೋಗಿರುವುದರಿಂದ ಶಾಸನದ ವಸ್ತು ಸ್ಪಷ್ಟವಾಗುವುದಿಲ್ಲ. ಒಟ್ಟಿನಲ್ಲಿ ಇದೊಂದು 'ವೀರಗಲ್ಲು ಶಾಸನ' ಶಾಸನದ ಮೂಲಕ ಕವಿಯ ಕಾಲದ ವಿಚಾರವಾಗಲಿ ನಮಗೆ ತಿಳಿಯದು. ಪ್ರಸ್ತುತ ಕವಿಚರಿತೆಕಾರರ ಕಾಲಸೂಚನೆಯನ್ನು ಇಲ್ಲಿ ಅನುಸರಿಸಿದೆ. ಶಾಸನದ ವಸ್ತು ತುಂಬಾ ಅಳಿಸಿಹೋಗಿರುವುದರಿಂದ ಇಲ್ಲಿ ಉದಾಹರಣೆಗಳನ್ನು ಕೊಡಲಾಗಿಲ್ಲ.

**ಶ್ರೀಪತಿದೇವ (ಕ್ರಿ.ಶ.೧೨೮೭)**

ಆಂಧ್ರಪ್ರದೇಶದ ಕರ್ನೂರು ಜಿಲ್ಲೆಯ, ಆಲೂರು ತಾಲೂಕಿನ, ನೇರಣಿಕಿ ಗ್ರಾಮದ[೩೯] ಶಾಸನವನ್ನು ಈತನು ವಿರಚಿಸಿದ್ದಾನೆ. ಯಾದವ ದೊರೆ ರಾಮಚಂದ್ರದೇವನ ಆಳ್ವಿಕೆಗೆ ಸಂಬಂಧಿಸಿದ ಈ ಶಾಸನವು ಕ್ರಿ.ಶ.೧೨೮೭ಕ್ಕೆ ಸರಿಹೊಂದುತ್ತದೆ. ರಾಮಚಂದ್ರದೇವ ದೊರೆಯ ಅಧಿಕಾರಿ 'ದೇವರಾಣಿಯನು' ಆಳುತ್ತಿದ್ದ ಸಮಯದಲ್ಲಿ ಶ್ರೀಕಂಠನಾಯ್ಕನ ಮಗ ನಾಗೆಯನಾಯ್ಕನಿಗೆ ಸಿಂದವಾಡಿ ನಾಡಿನ ನೇರಳಿಕೆ, ಬೆಂಬುಗುಡಿ, ಅರಕೆಱೆ, ಹೊಳಲುಗುಂದ ಗ್ರಾಮಗಳನ್ನು ವೃತ್ತಿಯಾಗಿ ನೀಡಿದನೆಂದು ಇದರಲ್ಲಿ ದಾಖಲಿಸಿದೆ. ತುಂಬುಳ ಪಟ್ಟಣದ ಮುಖ್ಯ ಸೆಟ್ಟಿಗಳು, ನಾಯಕನಿಗೆ ಹತ್ತು ಎತ್ತುಗಳ ಮೇಲಿನ ಎರಡು ಪಣವನ್ನು ವೃತ್ತಿಯಾಗಿ ನೀಡಿದುದನ್ನು ಇದರಲ್ಲಿ ದಾಖಲಿಸಿದೆ.

ಶಾಸನದ ಗದ್ಯ ಭಾಗವನ್ನು ಹೀಗೆ ನೋಡಬಹುದು.

**"ಶ್ರೀಮನ್ಮಹಾನಾಯ್ಕಾಚಾರ್ಯನೇಕಾಂಗವೀರ ವೀರಾವತಾರ ಆಸ್ತಿವರ ಸ್ವಯಂಭು ಖಂಡೇಯರಾಯ ನಿಬ್ಭಯನಾಥ ಸ್ವಯಂಭುಸಂಗಮೇಸ್ವರಾ ದೇವರ ದಿಬ್ಯ ಶ್ರೀಪಾದಪದ್ಮಾರಾಧಕನುಮಪ್ಪ ಶ್ರೀ ಕಂಠಯನಾಯ್ಕನ ಮಗ ನಾಗೆಯನಾಯ್ಕಗೆ ಸಿಂದವಾಡಿನಾಡ ಸಮ್ಮಂದದಲ್ಲಿ ವ್ರಿತ್ತಿಯಾಗಿ ಕೊಟ್ಟ ಗ್ರಾಮಗಳು ನೇರಳಿಕೆಬೆಂಬುಗುಡಿ ಅರಕೆಱಿ ಹೊಳಲುಗುಂದ ಏವಂ ಗ್ರಾಮಗಳನು । ಸ್ವಸ್ತಿ ಸಮಸ್ತ ಭುವನವಿಖ್ಯಾತಪಂಚತವೀರಶಾಸನಲಬುಧಾನೇಕ ಗುಣಗಣಾಲಂ ಕ್ರಿತರುಮಪ್ಪ ಶ್ರೀವೀರನಾರಾಯಣಪುರ ತುಂಬುಳಪಟ್ಟಣದ ವುಬಯನಾನಾ ದೇಶಿಯರಿಗೆ ಮುಖ್ಯರಪ್ಪ ಸೆಟ್ಟಿಗುತ್ತಿ ರುದ್ದಿಸೆಟ್ಟಿ ಸವುದೊರೆ ಸೋಯಿಸೆಟ್ಟಿ ಹೆಗ್ಗಡೆ ಮಲ್ಲಿಸೆಟ್ಟಿ ಪಟಣಸಾಮಿ ಕಾಸೆಬಿಸೆಟ್ಟಿ ವುಬಯಮಾರ್ಗದ ಗುಡ್ಡ ಗಲಿಸೆಟ್ಟಿಯರ ಮಗ ದೇವಿಸೆಟ್ಟಿಯರು ದೊಡಾಲ ನಾಗಿಸೆಟ್ಟಿಯರು ಮುಖ್ಯವಾಗಿ ಸಮಸ್ತ ಹಲರು ಕೊಟ್ಟ ವ್ರಿತ್ತಿ ಆನುಪು ಎತ್ತು ೧೦ಕ್ಕೆ ಇಪ್ಪಣವ ಕೊಟ್ಟರು ॥** ಎಂದಿದೆ.

**ಪದ್ಮ ಕ್ರಿ.ಶ.೧೨೯೫)**

ಈತನು ಹಾಸನ ಜಿಲ್ಲೆಯ, ಬೇಲೂರು ತಾಲೂಕು ಕಸಬ ಹಳೆಬೀಡಿನಲ್ಲಿರುವ ಒಂದು ಸಮಾಧಿಮಂಟಪದ ಕಲ್ಲಮೇಲಿರುವ ಶಾಸನವನ್ನು[೪೦] ರಚಿಸಿದ್ದಾನೆ. ಶಾಸನದ ಅಂತ್ಯಭಾಗದ ಒಂದು ಕಂದಪದ್ಯದಲ್ಲಿ

**ಸರಸಕವಿತುಂಗನೆನಿಸಿದ**
**ವರಕವಿಪದ್ಮಂ ದಲೆನಿಸಿ ನಿಶಿದಿಗೆ ಪದ್ಮಂ**
**ಬರಸಿ ಪರೋಕ್ಷದ ಪದನಂ**
**ವಿರಚಿಸಿ ಜನಸಭೆಯೊಳಗ್ರಪೂಜೆಯ ಪಡೆದಂ ॥**

ಎಂದಿದೆ. ಈತನು ಜೈನಕವಿ. ಶಾಸನದ ಮೂಲಕ ಕವಿಯ ಬಗೆಗೆ ಇತರ ವಿವರಗಳು ನಮಗೆ ದೊರೆಯುವುದಿಲ್ಲ. ಹೊಯ್ಸಳ ದೊರೆ ಮೂರನೆಯ ಬಲ್ಲಾಳನ ಕಾಲಕ್ಕೆ ಸೇರಿದೆ. ಕ್ರಿ.ಶ.ಸುಮಾರು ೧೨೯೫ಕ್ಕೆ ಸರಿಹೊಂದುತ್ತದೆ ಎಂದು ಎಂ.ಎಚ್.ಕೃಷ್ಣ ಅವರು ಊಹಿಸಿದ್ದಾರೆ. ವರ್ಧಮಾನ ಮಲಧಾರಿದೇವರು ಸ್ವರ್ಗಸ್ಥರಾಗಲು ದೋರ ಸಮುದ್ರದ ಸಮಸ್ತ ಭವ್ಯಜನಗಳು ಅವರ ನಿಸಿದಿಯನ್ನು ಮಾಡಿಸಿರುವುದೇ ಈ ಶಾಸನದ ವಸ್ತು. ಕಣಕಣಂದಿದೇವ, ಚಂದ್ರಪ್ರಭ ಪಂಡಿತದೇವ, ಭಾವಣಂದಿದೇವ, ಪಾರಿಶ್ವದೇವ ಎಂಬ ನಾಲ್ಕು ಜನ ಭವ್ಯರ ಹೆಸರನ್ನು ಈ ಶಾಸನದಲ್ಲಿ ಹೇಳಿದೆ. ಈತನು, ತನ್ನನ್ನು ಶಾಸನದಲ್ಲಿ ವರಕವಿ ಎಂದು ಕರೆದುಕೊಂಡಿರುವುದರಿಂದ ಅಂದಿನ ಉತ್ತಮ ಕವಿಯಾಗಿದ್ದಿರಬೇಕು. ಶಾಸನವು ಚಿಕ್ಕದಾಗಿದ್ದು,

ಆರಂಭದಲ್ಲಿ ಒಂದು ಸಂಸ್ಕೃತ ಶ್ಲೋಕವೂ ಕೆಲವು ಕನ್ನಡ ಪದ್ಯಗಳೂ, ಇದ್ದಂತೆ ತೋರುತ್ತದೆ. ಹೆಚ್ಚು ಭಾಗ ನಷ್ಟವಾಗಿರುವುದರಿಂದ, ಕವಿಯ ಕಾವ್ಯಪ್ರೌಢಿಮೆಯನ್ನು ತಿಳಿಯಲು, ಪದ್ಯಗಳನ್ನು ಉದಾಹರಿಸಲಾಗಿಲ್ಲ.

**ಬೊಮ್ಮಣ (ಕ್ರಿ.ಶ.೧೨೯೯)**

ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲೂಕಿನ ಸಿಂಧಘಟ್ಟ ಗ್ರಾಮದ[೪೧] ಶಾಸನವನ್ನು ಶ್ರೀಮತು ಪ್ರತಾಪಚರ್ಕವರ್ತಿ ಭುಜಬಳಹೊಯ್ಸಳ ಶ್ರೀವೀರಬಲ್ಲಾಳ ದೇವರಸರು ದೋರಸಮುದ್ರದ ನೆಲೆವೀಡಿನಲ್ಲಿ ರಾಜ್ಯವಾಳುತ್ತಿರುವಾಗ ಶ್ರೀಮದನಾದಿಯ ಅಗ್ರಹಾರ ಸಂಗಮೇಶ್ವರಪುರವಾದ ಸಿಂದಗಟ್ಟದ ಶ್ರೀಮದಶೇಷಮಹಾಜನಗಳು ಬಿಜ್ಜೆಶ್ವರಪುರವಾದ ಮಾಚನಕಟದ ಸ್ತಾನಾತಿಗಳುಮಪ್ಪ ಹಿರಿಯ ಭಂಡಾರಿ ಚಿಕ್ಕಮಲ್ಲೆಯನಾಯಕನ ಮಗ ರಾಉಳ ಮಲೆಯನಾಯಕಂಗೆ ಕೊಟ್ಟ ಸ್ಯಾಸನದ ಕ್ರಮವೆಂತದೊಡೆ ಸಂಗಮೇಶ್ವರಪುರವಾದ ಸಿಂದಗಟ್ಟದಲ್ಲಿ ಸಂಗಮೇಶ್ವರದೇವರ ಜನೇಶ್ವರದೇವರ ಅಖಂಡಿತವಾಗಿ ವರಾಹಗ ೮೫ನ್ನು ಮಹಾಜನಗಳು ಮಲೆಯನಾಯಕನ ಕೈಯಲ್ಲಿ ಸಾಕಲ್ಯ ನಡೆಸಿ ತೆಗೆದುಕೊಂಡು ಶ್ರೀದೇವರ ವ್ರತಿಗೆ ಆ ದೇವರಿಗೆ ಒಂದು ಉಪಾರ ಕವಿಲೆಪಟ್ಟ ಮೊದಲಾಗಿ ಆ ಮಲಯನಾಯಕನ ಮಕ್ಕಳು ತಪ್ಪದೆ ಆಚಂದ್ರಾರ್ಕಸ್ತಾಯಿಯಾಗಿ ಸಲ್ಲುವುದು ಎಂದಿದೆ.

ಶಾಸನದ ಗದ್ಯಭಾಗ ಇಂತಿದೆ:

> **ಸರ್ಬಮಾನ್ಯವಾಗಿ ಆಚಂದ್ರಾರ್ಕಸ್ಥಾಯಿಯಾಗಿ ಧಾರೆಯೆರದು ಧಾರಾಪೂರ್ವ**
> **ಕಂ ಮಾಡಿಕೊಟ್ಟ ಶಾಸನ ನ್ಯೂನಾಕ್ಷರಮಧಿಕಾಕ್ಷರಂ ವಾ ತತ್ಸಬ್ಬಕಂ**
> **ಪ್ರಮಾಣಮಿತಿ ಇಂತಪುದಕೆ ಆ ಮಹಾಜನಂಗಳ ಶ್ರೀಹಸ್ತದೊಪ್ಪ**
> **ಇಂತಿವರುಭಯಾನುಮತದಿಂ" ಬರದ ಸಿಂದಗಟ್ಟದ ಊರ ಸೇನಭೋವ ಬೊಂಮಣ"**

ಎಂದು ಶಾಸನಕವಿಯ ಉಲ್ಲೇಖವಿದೆ.

**ಅಡಿಟಿಪ್ಪಣಿಗಳು:**

೧. E.C. Vol. XI No.೪೫ ಚಿಕ್ಕಮಗಳೂರು (ಜಿ)(ತಾ) ಉಪ್ಪವಳ್ಳಿ (ಗ್ರಾ) ೧೨೦೦ A.D. ಪು.೨೫

೨. ARIE, ೧೯೫೭ ೫೮ No. ೧೩೮ ಗುಲ್ಬರ್ಗಾ (ಜಿ) ಚಿಂಚೋಳಿ (ತಾ) ದೇಗಲ್‌ಮಡಿ ೧೨೦೦ A.D. ಪು–೪೯

೩. E.I. Vol.V No.೧೨೭ ಧಾರವಾಡ (ಜಿ) ಹಿರೇಕೆರೂರು (ತಾ) ಅಬ್ಬಲೂರು ೧೨೦೦ A.D. ಪು–೨೪೫

೪. ಬಿ.ಶಿವಮೂರ್ತಿಶಾಸ್ತ್ರಿ: ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ: ಸಂ:೪೩: ಸಂಚಿಕೆ:೨, ೧೯೫೮, ಪು–೨, ೩

೫. ಹಾ.ಮಾ. ನಾಯಕ: ಕನ್ನಡ ಸಾಹಿತ್ಯ ಚರಿತ್ರೆ: ಸಂ:೪: ಪು–೨೪೦

೬. ಕ.ವಿ.ಶಾ.ಸಂ.VIII No.೧೧, ಬೀದರ (ಜಿ) ಬಸವಕಲ್ಯಾಣ (ತಾ)(ಗ್ರಾ) ೧೨೦೦ A.D. ಪು.೩೧–೩೨

೭. ಕ.ವಿ.ಶಾ.ಸಂ. II No.೧೩ ಕೊಪ್ಪಳ (ಜಿ) ಕುಷ್ಟಗಿ (ತಾ) ಪುರ (ಗ್ರಾ) ೧೨೦೦ A.D. ಪು.೨೮೮–೯೧

೮. R.A.S.J: Vol X. No.೨೯ ಬೆಳಗಾವಿ (ಜಿ) ಗೋಕಾಕ (ತಾ) ಕಲ್ಲುಹೊಳೆ ೧೨೦೪ A.D. ಪು.೨೨೦

೯. E.I. Vol XIII No.೧೮ ಬೆಳಗಾವಿ (ಜಿ) ಬೆಳಗಾವಿ (ತಾ)(ಗ್ರಾ) ೧೨೦೪ A.D. ಪು.೧೫–೩೬

೧೦. ಮೇವುಂಡಿ ಮಲ್ಲಾರಿ: ಕನ್ನಡನಾಡಿನ ಕೆಲವು ಶಾಸನಕವಿಗಳು, ಪು.೨೩೬

೧೧. ಹಾ.ಮಾ.ನಾ.:ಕನ್ನಡ ಸಾಹಿತ್ಯ ಚರಿತ್ರೆ: ಮೈ.ವಿ.ವಿ. ಸಂ:೪. ೧೯೭೭ ಪುಟ–೨೪೪

೧೨. E.C. Vol. XI No.೨೩ ಚಿತ್ರದುರ್ಗ (ಜಿ)(ತಾ) ಗಂಜಿಕಟ್ಟೆ (ಗ್ರಾ) ೧೨೦೫ A.D. ಪುಟ.೨೪೫

೧೩. SII Vol XV No.೧೫೫ ಬಾಗಲಕೋಟೆ (ಜಿ)(ತಾ) ಮಂಕಣಿ, ೧೨೦೬ A.D. ಪು–೨೪೫

೧೪. ಕ.ವಿ.ಶಾ.ಸಂ, V, ಭಾಗ–೧, ಅನಂತಪುರ (ಜಿ) ಗುತ್ತಿ (ತಾ) ನೀಲೂರು ೧೨೧೫ A.D. ಪು.೧೬೫–೬೭

೧೫. ಆರ್.ನರಸಿಂಹಾಚಾರ್: ಕರ್ನಾಟಕ ಕವಿಚರಿತೆ: ಸಂ:೨. ಪುಟ–೧೭೧

೧೬. M.A.R.೧೯೨೬ ಶಿವಮೊಗ್ಗ (ಜಿ) ಸೊರಬ (ತಾ) ಕುಪ್ಪಗಡ್ಡೆ ೧೨೧೬ A.D. ಪು–೭೩

೧೭. ಕ.ವಿ.ಶಾ.ಸಂ–VI No.೧೨೬, ಸೊಲ್ಲಾಪುರ (ಜಿ) ಅಕ್ಕಲಕೋಟೆ (ತಾ) ಮಂಗರೂಲ್, ೧೨೧೮ A.D. ಪು.೨೦೮–೨೧೦

೧೮. E.C. Vol X, No.೬೩ ಹಾಸನ (ಜಿ) ಚನ್ನರಾಯಪಟ್ಟಣ (ತಾ) ನವಿಲೆ ೧೨೧೮ A.D. ಪು.೪೮೮–೯೦

೧೯. E.C. Vol.V. No.೨೦೧, ಹಾಸನ (ಜಿ) ಅರಸೀಕೆರೆ (ತಾ)(ಗಾ) ೧೨೨೦ A.D. ಪು.೨೪೮

೨೦. ಕ.ವಿ.ಶಾ.ಸಂ.I No.೧೩, ಬಳ್ಳಾರಿ (ಜಿ) ಕೂಡ್ಲಗಿ (ತಾ) ಕೊಟ್ಟೂರು ೧೨೨೧ A.D. ಪು.೨೩೪–೩೫

೨೧. E.C. Vol. Xll No.೬೪ ಚಿಕ್ಕಮಗಳೂರು (ಜಿ) ಕಡೂರು (ತಾ) ಕೆರೆಸಂತೆ ೧೨೨೪ A.D. ಪು.೭೮–೮೧

೨೨. E.C. Vol. X No.೮೭ ಹಾಸನ (ಜಿ) ಅರಸಿಕೆರೆ (ತಾ) ಕಣಿಕಟ್ಟೆ (ಗಾ) ೧೨೨೭ A.D. ಪು.೧೧೦–೧೩

೨೩. SII Vol XX No.೨೪೮ ಬೆಳಗಾವಿ (ಜಿ) ಸವದತ್ತಿ (ತಾ)(ಗಾ) ೧೨೨೮ A.D. ಪು–೨೫೦

೨೪. E.C.Vol. VII No.೫೨ ಶಿವಮೊಗ್ಗ (ಜಿ) ಚೆನ್ನಗಿರಿ (ತಾ) ನಲ್ಕುದುರೆ, ೧೨೩೩ A.D. ಪು.೨೫೨

೨೫. E.C. Vol V No.೪೨, ಹಾಸನ (ಜಿ) ಅರಸೀಕೆರೆ (ತಾ) ಹಾರನಹಳ್ಳಿ ೧೨೩೪ A.D. ಪು.೨೫೩

೨೬. K.I. Vol V No.೪೨ ಧಾರವಾಡ (ಜಿ) ಹಾನಗಲ್ಲು (ತಾ) ತಿಳಿವಳ್ಳಿ (ಗ್ರಾ) ೧೨೩೯, A.D. ಪು–೨೫೮

೨೭. ಕ.ವಿ.ಶಾ.ಸಂ. Vol, X, No.೮೫ ಬಿಜಾಪುರ (ಜಿ) ಸಿಂದಗಿ (ತಾ) ಕಲಕೇರಿ (ಗಾ), ೧೨೪೪. A.D. ಪು–೩೪೯–೫೬

೨೮. ಮೇವುಂಡಿ ಮಲ್ಲಾರಿ: ಕನ್ನಡನಾಡಿನ ಕೆಲವು ಶಾಸನಕವಿಗಳು, ಪು–೨೩೯

೨೯. ಹಾ.ಮಾ.ನಾ.: ಕನ್ನಡ ಸಾಹಿತ್ಯ ಚರಿತ್ರೆ: (ಸಂ) ೪ ಮೈ.ವಿ.ವಿ. ೧೯೭೭,

೩೦. K.I.Vol. IV, No:೪೮: ಧಾರವಾಡ (ಜಿ) ಹಿರೇಕೆರೂರು (ತಾ) ಮಡಲೂರು ೧೨೪೭, A.D. ಪು–೫೦

೩೧. E.C.Vol.VI. No.೨೦, ಚಿಕ್ಕಮಗಳೂರು (ಜಿ) ಅಂಬಳೆ (ಗ್ರಾ) ೧೨೪೯ A.D. ಪು.೪೦

೩೨. E.C.Vol.X No.೯೨, ಹಾಸನ (ಜಿ) ಚನ್ನರಾಯಪಟ್ಟಣ (ತಾ) ಬೆಳಗುಲಿ, ೧೨೫೨ A.D. ಪು.525–27

೩೩. E.C.Vol.X. No.೨೩೩, ಹಾಸನ (ಜಿ) ಅರಸೀಕೆರೆ (ತಾ) ಹಾರನಹಳ್ಳಿ, ೧೨೬೫ A.D. ಪು.೨೮೭–೮೮

೩೪. I.N.K.K.S. No. ೨೦, ಬಿಜಾಪುರ (ಜಿ) ಬಾಗೇವಾಡಿ (ತಾ) ಇಂಗಳೇಶ್ವರ, ೧೨೬೫ A.D. ಪು.೯೧

೩೫. E.C.Vol.XI. No.೭೦, ಚಿತ್ರದುರ್ಗ (ಜಿ) ದಾವಣಗೆರೆ ಕಡೂರು (ತಾ) ಕೇದಗಿಗೆರೆ, ೧೨೭೫ A.D. ಪು–೯೬–೯೯

೩೬. E.C.Vol.XII. No:೭೪, ಚಿಕ್ಕಮಗಳೂರು (ಜಿ) ಕಡೂರು (ತಾ) ಕೇದಗಿಗೆರೆ, ೧೨೭೫ A.D. ಪು–೯೬–೯೯

೩೭. E.C.Vol.XI.No:೭೯, ಚಿಕ್ಕಮಗಳೂರು (ಜಿ) ಮೂಡಗೆರೆ (ತಾ) ಕಳಸ ೧೨೮೫ A.D. ಪು–೨೦೯–೧೦

೩೮. E.C.Vol.VIII No.೨೯೪, ಶಿವಮೊಗ್ಗ (ಜಿ) ಸೊರಬ (ತಾ) ಕಲ್ಲೂರ ೧೨೮೭ A.D. ಪು.೨೬೧

೩೯. ಕ.ವಿ.ಶಾ.ಸಂ.V. ಭಾಗ–೧ No:೩೨೪, ಕರ್ನೂರು (ಜಿ) ಆಲೂರು (ತಾ) ನೇರಣಿಕಿ, ೧೨೮೭ A.D. ಪು–362–64

೪೦. E.C.Vol.IX.No:೩೧೦, ಹಾಸನ (ಜಿ) ಬೇಲೂರು (ತಾ) ಹಳೆಬೀಡು ೧೨೯೫ A.D. ಪು–೨೮೮

೪೧. E.C.Vol.VI.No:೯೦, ಮಂಡ್ಯ (ಜಿ) ಕೃಷ್ಣರಾಜಪೇಟೆ (ತಾ) ಸಿಂಧಘಟ್ಟ ೧೨೯೯ A.D. ಪು–೯೩–೯೫

## ಅಧ್ಯಾಯ–೭

## ೧೩ನೇ ಶತಮಾನದ ಶಾಸನಕವಿಗಳು

**ಜಿನಯ್ಯ (ಕ್ರಿ.ಶ.೧೩೦೦):**

ಕೊಡಗು ಜಿಲ್ಲೆಯ, ಸೋಮವಾರಪೇಟೆ ತಾಲೂಕಿನ, 'ಚೌಡ್ಲು' ಗ್ರಾಮದ ಶಾಸನವನ್ನು[೧] ಈ ಶಾಸನಕವಿಯು ವಿರಚಿಸಿದ್ದಾನೆ. ಈ ಶಾಸನ ಕಾಲಾವಧಿಯು ಕ್ರಿ.ಶ.೧೩೦೦ಕ್ಕೆ ಸರಿಹೊಂದುತ್ತದೆ ಎನ್ನಬಹುದು. ಏಕೆಂದರೆ ಕಾಲದ ಸ್ಪಷ್ಟತೆಯಿಲ್ಲದಿದ್ದರೂ ಸಂಪಾದಕರು ಗುರುತಿಸಿದಂತೆ ಬರವಣಿಗೆಯ ಕ್ರಮವನ್ನಾಧರಿಸಿ ಕಾಲಾವಧಿ ಒಪ್ಪಿಕೊಳ್ಳಬಹುದು. ಶಾನಸದ ಆರಂಭದ ಭಾಗ ನಾಶವಾಗಿದ್ದು, ಆಳ್ವಿಕೆಯ ವಿವರಗಳು ನಾಶವಾಗಿವೆ. ಚಂಗಾಳ್ವ ವಂಶಕ್ಕೆ ಸೇರಿದ ಹರಿಹರದೇವನನ್ನು ಹೆಸರಿಸುತ್ತದೆ. ಪಾರಂಪರಿಕವಾಗಿ ಬಂದ ಪಿತ್ರಾರ್ಜಿತ ಆಸ್ತಿಯ ಹಕ್ಕನ್ನು ಕುರಿತು ಹೇಳುತ್ತದೆ. ಒಟ್ಟು ೨೨ ಸಾಲುಗಳನ್ನೊಳಗೊಂಡ ಈ ಶಾಸನವು ಶಾಸನದ ಕೊನೆಗೆ "ಬರೆದ ಸೇನಬೋವ ಜಿನಯ್ಯ" ಎಂದಿದೆ. "ಕಲ್ಲಹೊಯ್ದ ಮಲೋಜ" ಎಂದಿದೆ.

**ಶಾಸನದ ಗದ್ಯಭಾಗ ಇಂತಿದೆ:**

ಕುಂದೂರಿಗೆ ಪೂರ್ವದಲ್ಲಿ ಹೆಂಣಿಂಗೆ ಸಲುವ ಸ್ವಾಸ್ತೆಮರಿಯಾದೆಯ ಕೊಟ್ಟ ಕ್ರಮವೆಂತೆಂದೊಡೆ ಹೆಂಣ್ನೆಂಗೆ ಹೆಣ್ಣುಮಕ್ಕಳಿಂಗೆ ತೊತ್ತಿನ ಮಕ್ಕಳಿಂಗೆ ಸಲುವುದು ಚವುಡ..... ಪಾರಿಸ... ಕುಂದೂರ ತಾವ ಮಾನೆಯೊಳು ಮಾಚಿಕಾರಿಯನ ಗಹ । ಮಾಚಜೀಯ ನಕಣನೈಗಣಲೆಯ ಕಾಮಣ ಪಳ್ಳಿಗುಂದದ ಆಜಣ ಬೆಣಚಹೆಗಡೆ ಹಳ್ಳಿಯ ಮಾದಣ ಅಬಿಯದಿರ ಮಲಿಗೌಡ ಯಿ ಗೌಡುಗಳು ಮುಖ್ಯವಾಗಿ ಯಿಂತೀ ನಾಡ ನಖರಕೆ ಚಂದ್ರಾದಿತ್ಯರುಳ್ಳಂನಬರ ಕೊಟ್ಟ ಶಾಸನ.

**ಬೊಮ್ಮಯರಾಯ (ಕ್ರಿ.ಶ.೧೩೦೩):**

ಶಿವಮೊಗ್ಗ ಜಿಲ್ಲೆಯ, ಸಾಗರ ತಾಲೂಕಿನ, ಮತ್ತಿಕೊಪ್ಪ ಗ್ರಾಮದ ಮಜರೆ ರಾವಣದ ಕಾಡಿನಲ್ಲಿರುವ ಒಂದು ವೀರಗಲ್ಲು ಶಾಸನವನ್ನು[೨] ಈತನು ರಚಿಸಿದ್ದಾನೆ. ಈತನು ಧಾರವಾಡ ಜಿಲ್ಲೆಯ ಚಿಕ್ಕೆರೂರು ಗ್ರಾಮದವನೆಂದು ತಿಳಿದುಬರುವುದು. ತನ್ನನ್ನು ಕವಿಯು ಶಾಸನದಲ್ಲಿ 'ಕವಿದರ್ಪಣ'ನೆಂದು ಹೇಳಿಕೊಂಡಿದ್ದಾನೆ. "ಚಿಕಕೆರವೂರ ಕವಿದರ್ಪಣ ಬೊಂಮಯರಾಯ ಬರದ" ಶಾಸನದ ಮೂಲಕ ಕವಿಯ ಇತರೆ ವಿಚಾರ ನಮಗೇನೂ ತಿಳಿಯದು. ಶಾಸನದ ಕಾಲ ಕ್ರಿ.ಶ.೧೩೦೩ಕ್ಕೆ ಸರಿಹೊಂದುತ್ತದೆ.

ಹೊಯ್ಸಳ ದೊರೆ ಮೂರನೇ ಬಲ್ಲಾಳನು ತನ್ನ ಸರ್ವದಳ ಸಹಿತ ಬನವಾಸೆಯಲ್ಲಿದ್ದಾಗ ಕದಂಬಳಲಿಗೆನಾಡ ಶಿರಿಸೆ ಎಂಬಲ್ಲಿ ಶತ್ರುಗಳೊಂದಿಗೆ ನಡೆದ ಕಾಳಗದಲ್ಲಿ ಕಾದಿ ಸುರಲೋಕ ಪ್ರಾಪ್ತವಾದ 'ಬೀರ' ಎಂಬುವನ ಪ್ರಶಂಸೆ ಈ ಶಾಸನದಲ್ಲಿನ ಮುಖ್ಯವಸ್ತು. ಈ ಶಾಸನವನ್ನು ಶಿರಿಸೆಯ ಕಾಳಗದಲ್ಲಿ ಸತ್ತ ಬೀರನ ಅಣ್ಣ ಹಡಪದ ಬರಮಯ್ಯರಾಯನೆಂಬುವನು ಹಾಕಿಸಿದುದಾಗಿಯೂ, ಅಬ್ಬಲೂರು ಸಂಕೋಜನೆಂಬುವನು ಕಂಡರಿಸಿದುದಾಗಿಯೂ ಶಾಸನದ ಅಂತ್ಯಭಾಗದಿಂದ ತಿಳಿದುಬರುತ್ತದೆ.

**ಕವಿಯ ಕಾವ್ಯ ಶೈಲಿಗೆ ಕೆಳಗಿನ ಕಂದಪದ್ಯ ಕಾಣಬಹುದು:**

**ವರತುರಗ ಕರಿಯ ದಳಮಂ**
**ಕರ ಮುನಿದಱಿಯಟ್ಟಿ ರಿಪುಗಳಂಕುಲಸರಾಯನು**
**ಧುರೆಯೊಳು ಬಿರುದಲೆ ತಿಱದನ**
**ಚ್ಚರಿ ಬಿರುದರ ಸಿರವರಿಯಲಮಮ ಬೀರಂದರನು ॥**

**ನೆರೆಯಾಗಲು ತವನಹಿತರ**
**ನುಱುವನೆ ರಂಗಕಮಹಾವೀರರ ಮೆಚ್ಚನು**
**ಜಱದಱದೆಯಿಱದೆ ತುರಗವ**
**ಯಿಱ..ಂಮಹೀ...ಂಗಮಮ ಬೀರಂದರನು ॥**

ಹೊಯ್ಸಳ ಬಲ್ಲಾಳನ ಬಿರುದುಗಳು ಮತ್ತು ಶಿರಿಸೆಯ ಕಾಳಗವನ್ನೊಳಗೊಂಡ ಗದ್ಯಭಾಗ:

**"ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತಂ ಸಮಧಿಗತ ಪಂಚಮಹಾಶಬ್ದಸಹಿತಂ**
**ಹಂನೊಂದು ಮಂಡಳಿಕರ ಗಂಡ ಮೂರುಮಡಿ ರಾಹುತರಾಯ ಕಲಿಗಳಂಕುಸ**
**ಜಗದ್ವಳೆಯ ಗಂಗೆಯ ಸಹಣಿಯ ಮೇಲೆ ಹೊಯಿಸಣ ಗಂಡಭೇರುಂಡ**
**ಗುಂಮನಾಥದೇವರ ದಿಬ್ಯಶ್ರೀಪಾದಪದ್ಮಾರಾಧಕನುಮಪ್ಪ ಬಲ್ಲಾಳರಾಯನು**
**ತಂನ ಸರ್ವದಳಸಹಿತ ನಡದುಬಂದು ಬನವಸೆಯಲಿ ಬಿಟ್ಟು ಕದಬೇಳಲಗೆ**
**ನಡವಲ್ಲಿ ಸಿರಿಸೆಯ ಕಾಳಗವೆಂದೆನೆ... ರಾವಣದ ಹಡಪದ ಸಾತಯನ**
**ಮಗ ಮಾರವಳಿಯ ಜಕ್ಕಿಯಬ್ಬೆಯ ಸುಪುತ್ರ ರಣವಗ್ಗ ಬೀರನಿಱದುನೆಂತೆನೆ"**

**ಅಲ್ಲಾಳದೇವ (ಕ್ರಿ.ಶ. ೧೩೦೯)**

ಮಂಡ್ಯ ಜಿಲ್ಲೆಯ, ನಾಗಮಂಗಲ ತಾಲೂಕಿನ, ಬೆಳ್ಳೂರು ಗ್ರಾಮದ[೩] ಶಾನಸವನ್ನು ಈ ಕವಿಯು ವಿರಚಿಸಿದ್ದಾನೆ. ಈ ಶಾಸನದ ಒಟ್ಟು ಸಾಲುಗಳು ೯೩. ಶಾಸನದ ೭೪–೭೫ನೇ ಸಾಲಿನಲ್ಲಿ ಕವಿಯ ಉಲ್ಲೇಖ ಹೀಗಿದೆ:

"ಬೆಳ್ಳೂರ ಸೇನಬ್ರೋವ ಪೆಂಮಯಂಣ್ಣನ ಮಗ ಅಲ್ಲಾಳದೇವನ ಬರಹ" ಎಂದಿದೆ. ಶಾಸನದ ಆರಂಭದಲ್ಲಿ ಹೊಯ್ಸಳ ಸಾಮ್ರಾಜ್ಯ ಸ್ಥಾಪನೆಯ ವಿವರಗಳು ಹಾಗೂ 'ಸಳ'ನ

ವೀರವೃತ್ತಾಂತವನ್ನು ಒಳಗೊಂಡಿದೆ. ವಿನಯಾದಿತ್ಯ, ವಿಷ್ಣುವರ್ಧನ, ಬಲ್ಲಾಳ, ನರಸಿಂಹರಾಯ ಇವರ ವಿವರಗಳಿವೆ. ನರಸಿಂಹದೇವರಸನನ್ನು ಹೀಗೆ ಹೊಗಳಲಾಗಿದೆ.

**ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀಪ್ರಿಥ್ವಿವಲ್ಲಭ ಮಹಾರಾಜಾಧಿರಾಜ ಪರಮೇಶ್ವರಂ ದ್ವಾರಾದಿತಿಪುರವರಾಧೀಶ್ವರ ಯಾದವಕುಕಳಾಂಬರದ್ಯುಮಣಿ ಸರ್ವಜ್ಞಚೂಡಾಮಣಿ ಮತಿರಾಜರಾಜ ಮಲೆಪರೊಳುಗಂಡ ಗಂಡಬೇರುಂಡ ಕದನಪ್ರಚಂಡನ ಸಹಾಯಶೂರ ಏಕಾಂಗವೀರ ಶನಿವಾರಸಿದ್ಧಿ ಗಿರಿದುರ್ಗಮಲ್ಲ, ಚಲದಂಕರಾಮ ವೈರೀಭಕಂಠಿರವಂ ಮಗರರಾಜ್ಯನಿರ್ಮೂಲನ ಚೋಳರಾಜ್ಯ ಪ್ರತಿಷ್ಠಾಚಾರ್ಯ ಪಾಂಡ್ಯರಾಜ್ಯ ಸಮುದ್ಧರಣ ನಿಶ್ಶಂಕ ಪ್ರತಾಪಚಕ್ರವರ್ತಿ ಹೊಯ್ಸಣಶ್ರೀವೀರ**

ನಾರಸಿಂಹದೇವರ್ಸರು ಶ್ರೀಮದ್ರಾಜಧಾನಿ ದೋರಸಮುದ್ರದೊಳು ಸುಖಸಂಕಥಾ ವಿನೋದದಿಂದ" ಪೃಥ್ವಿರಾಜ್ಯಂಗೆಯ್ಯುತ್ತಿರುವಾಗ ಶ್ರೀಮನ್ಮಹಾಪ್ರಧಾನನಾದ ಪೆರುಮಾಳೆ ದೇವದಂಣ್ನಾಯ್ಕರು ಉದ್ಭವನರಸಿಂಹಪುರನಾದ ಬೆಳ್ಳೂರ ಶ್ರೀಮದಶೇಷ ಮಹಾಜನಗಳೂ ಶ್ರೀಮನ್ಮಹಾಪ್ರಧಾನ ಪೆರುಮಾಳದೇವ ದಣ್ಣಾಯಕರು ಹರಿಹರ ಪಟ್ಟವರ್ಧನರ ಮಕ್ಕಳೂ ವಿಠಂಣ್ನಗಳ ಹೆಗ್ಗಡೆಕೆಯಲ್ಲಿ ಸರ್ವಜನರ ಸಮ್ಮತಿ ಪಡೆದು ವೊಡಂಬಟ್ಟು ಬರಸಿದ ಶಾಸನಕ್ರಮ ಹೀಗಿದೆ;

ಪೆರುಮಾಳೆದೇವದಣ್ನಾಯಕರು ಶ್ರೀಮತ್ಪ್ರತಾಪಚಕ್ರವರ್ತಿ ಹೊಯ್ಸಳ ಶ್ರೀ ವೀರನಾರಸಿಂಹದೇವರಸರ ಕೈಯಲ್ಲಿ ಧಾರಾಪೂರ್ವಕವಾಗಿ ತಾಮ್ರಶಾಸನವನ್ನು ಸೀಮಾಸಮನ್ವಿತವಾಗಿ ಪ್ರಸಿದ್ಧ ಸೀಮಾಸಮನ್ವಿತವಾದ ಬಿಲ್ಲಬೆಳಗುಂದ ತಿಪ್ಪೂರು, ಬೆಳ್ಳೂರು ಗ್ರಾಮ ಮದ್ಯದ ಶ್ರೀಪ್ರಸನ್ನ ಮಾಧವದೇವರು, ಶ್ರೀರಾಮಕೃಷ್ಣದೇವರು, ಶ್ರೀ ವರದಅಲ್ಲಾಳನಾಥ ದೇವರುಗಳ ಅಮ್ರಿತಪಡಿ ಅಂಗಭೋಗ ರಂಗಭೋಗ ರಂಗಭೋಗ ಚೈತ್ರಪವಿತ್ರ ಕಾರ್ಯಕ್ಕೆ ಸಲುವಂತೆ ಈ ತಾಮ್ರಶಾಸನವನ್ನು ಬರೆಸಿಕೊಂಡು ಆ ಬೆಳ್ಳೂರಲ್ಲಿ ಮುನ್ನ ಮಾಡಿದ ಎಂಬತ್ತಾರು ವ್ರಿತ್ತಿಯ ಮೇಲೆ ಹೊಸತಾಗಿ ಹತ್ತು ವ್ರಿತ್ತಿಯನ್ನು ಏರಿಸಿ ಆ ಬೆಳ್ಳೂರು ತೊಂಬತ್ತಾರು ವ್ರಿತ್ತಿಯಾಗಿ ಮಹಾಜನಗಳಿಗೆ ಆ ಪೆರುಮಾಳು ದೇವದಣ್ಣಾಯಕರು ಧಾರಾಪೂರ್ವಕವಾಗಿ ಕೊಟ್ಟ ವಿಷಯವನ್ನು ಒಳಗೊಂಡಿದೆ.

**ಗುಂಮಣ (ಕ್ರಿ.ಶ.೧೩೧೨)**

ಮಂಡ್ಯ ಜಿಲ್ಲೆಯ, ಕೃಷ್ಣರಾಜಪೇಟೆ ತಾಲೂಕಿನ, ಬೈರಾಪುರದ[೪] ಶಾಸನವನ್ನು ಈತನು ವಿರಚಿಸಿದ್ದಾನೆ. ಶಾಸನವು ಒಟ್ಟು ೩೯ ಸಾಲುಗಳನ್ನು ಒಳಗೊಂಡಿದೆ. ೩೭ನೇ ಸಾಲಿನಲ್ಲಿ ಕವಿಯ ಉಲ್ಲೇಖವಿದೆ. "ಸೇನಬೋವ ಗುಂಮಣನ ಬರಹ" ಎಂದಿದೆ.

ಶಾಸನ ಅರಂಭದಲ್ಲಿ ಶ್ರೀಮದನಾದಿ ಅಗ್ರಹಾರ ಭಯಿರಮೇಶ್ವರಪುರವಾದ ಬಯಿರಾಪುರದ ಶ್ರೀಮದ್ ಆಶೇಷವ ಮಹಾಜನಗಳು ಸ್ಥಾನಿಕ ಬೊಮ್ಮಣ ಇವರು ಕೊಟ್ಟ ಕ್ರಯಪತ್ರದ ವಿವರವನ್ನು ಶಾಸನವು ಒಳಗೊಂಡಿದೆ.

**ಶಾಸನದ ಗದ್ಯಭಾಗ:**

"ಚತುಸೀಮೆಗೆ ಕಲ್ಲನೆಡಿಸಿ ಆ ಮಹಾಜನಂಗಳು ಸ್ಥಾನಿಕ ಬೊಂಮಣ ಸಮಸ್ತ ಪ್ರಜ್ಞೆಗಳು ನಾವೆಲ್ಲರೂ ಸರ್ವೈಕಮತ್ಯವಾಗಿ ಒಡಂಬಟ್ಟು ಕೊಟ್ಟ ಕ್ರಯಪತ್ರ ಇದೆ. ಕ್ರಯ ನೆನಪು ಯಿ ಆಯಿಘಂಡುಗ ಗದೆಯನು ಸರ್ವಮಾನ್ಯರಾಗಿ ನಿಮಗೆ ಸಲಿಸಿ ಕೊಡುವುದಕೆ ಹೊಣೆಕಾರರು ಭಯಿರಾಪುರದ ಒಜಾಯಿತ ಲಬೋಜ ಅಕಸಾಲೆ ಸಬೆಯೋಜ ಅಕಸಾಲೆ, ಮಂಚಿ ಹಿರಿಯ ಕಾಮೋಜಗಳು ಒಳಗಾದ ಪಂಚಾಳದವರು ಹೊಣೆ ಯಿ ಅಯಿಘಂಡುಗ ಗದೆಯನು ಸೂರ್ಯಚಂದ್ರ ಮೇರು ಉಳಲಿ ಸರಿಯಂತರ ಸರ್ವಮಾನ್ಯ ನಡೆಸಿಕೊಡದೆ ಅರೊಬರು ತಪ್ಪಿದರೆಉ ನಂಮ ನಂಮ ಯಾವ ಜಲ್ಮ ಮಾಡಿದಂಥ ಪಾಪಗಳನು ವಧಿಸಿದವರು ಯಿಂತೊಪ್ಪುದಕೆ ಸಾಕ್ಷಿಗಳು ಸಿಂದಗಟ್ಟದ ಮಹಾಜನಂಗಳು" ಎಂದಿದೆ.

**ನೀಲಕಂಠದೇವ (ಕ್ರಿ.ಶ.೧೩೧೪)**

ಹಾಸನ ಜಿಲ್ಲೆಯ, ಹಾಸನ ತಾಲೂಕಿನ, ಅವ್ವೇರಹಳ್ಳಿ ಗ್ರಾಮದ ಶಾಸನವನ್ನು[೫] ಈತನು ರಚಿಸಿದ್ದಾನೆ. ಶಾಸನವು ಒಟ್ಟು ೩೭ ಸಾಲುಗಳನ್ನೊಳಗೊಂಡಿದ್ದು, ೩೪ನೇ ಸಾಲಿನಲ್ಲಿ ಕವಿಯ ಉಲ್ಲೇಖ ಹೀಗಿದೆ:

**"ಗೊರವೂರ ಮಹಾಜನಗಳ ಅಪ್ಪಣೆಯಿಂ ಬರದ ಸೇನಬೋವ ಮಾದಂಣನವರ ಮಕ್ಕಳು ನೀಲಕಂಠದೇವರ ಬರಹ"** ಎಂದಿದೆ.

ಶಾಸನವು ದೋರಸಮುದ್ರದಿಂದ ಆಳುವ ಹೊಯ್ಸಳ ಮೂರನೇ ಬಲ್ಲಾಳನನ್ನು ಹೆಸರಿಸುತ್ತದೆ. ಈ ಶಾಸನದ ಕಾಲ ಕ್ರಿ.ಶ.೧೩೧೪ ಆಗಿದೆ.

ಶ್ರೀಮನುಮಹಾಪ್ರಧಾನ ಅಂಕೆಯದಂಣಾಯಕರ ಅಳಿಯ ಮಾಚಯ ದಣ್ಣಾಯಕರು ಶ್ರೀಮದನಾದಿ ಅಗ್ರಹಾರ ಚೆನ್ನಕೇಶವಪುರವಾದ ಗೊರವೂರ ಕಾಲುವಳ್ಳಿ ದಾವರಹಳ್ಳಿಯಿಂದ ಬಡಗಣಹಳ್ಳಕ್ಕೆ ಆ ಹಳ್ಳಿಯ ವೃತ್ತಿಯ ಮಹಾಜನಗಳಿಗೆ ಕೆಱೆನಿವೇಶನಕ್ಕೆ ಕ್ರಯಕೊಟ್ಟು

ಮಾರುವುದಕ್ಕೆ ಕೊಂಡು ಆ 'ಮಾಚೆಯ ದಣ್ಣಾಯಕರು' ತಮ್ಮ ಅವ್ವ 'ಮಾಯಕ್ಕ'ನವರ ಹೆಸರಲ್ಲಿ ಮೂರು ನಾಲ್ಕು ಸಾವಿರ ಹೊನ್ನು ಕೊಟ್ಟು ಕಟ್ಟೆ ಕಟ್ಟಿಸಿದರು.

ಆವ್ರಿತ್ತಿವಂತ ಮಹಾಜನಗಳು ಅಶೇಷಮಹಾಜನಗಳು ತಮ್ಮಲ್ಲಿ ಒಡಂಬಟ್ಟ ಆ ಕೆಱೆಯ ಕೆಳಗೆ ಕೆರೆಗೊಡುಗೆಯಾಗಿ ಆ ಗೊರವೂರ ನೂರಾನಲ್ವತ್ತು ವ್ರಿತ್ತಿಯ ಮಹಾಜನಗಳು ತಮ್ಮ ಸ್ವಇಚ್ಛೆಯಿಂದ ಒಡಂಬಡ್ಡು ಹೀಗೆ ಹೇಳಿದೆ.

"ಅಲ್ಲಿ ವುಳ್ಳ ದೇವದಾನವನುಳಿಯೆ ಅಲ್ಲಿ ವುಳ್ಳ ಗದ್ದೆ ಬೆದ್ದಲಿಂಗೆ ನಾಕು ಕಡೆಯಲು ತೋರಣಗಲ್ಲ ನಟ್ಟು ಆ ಚಂದ್ರಾರ್ಕಸ್ಥಾಯಿಯಾಗಿ ಆ ಮಾಚೆ ದಂಣಾಯ್ಕರ ಮಕ್ಕಳಿಗೆ ಸಲುವಂತಾಗಿ ಹುಟ್ಟುಮೆಟ್ಟಾಗಿ ಸರ್ವಮಾನ್ಯವಾಗಿ ಆ ಕೊಡುಗೆ ಆವ ತೆರವೂ ಯಿಲ್ಲೆಂದು ಬರಸಿಕೊಟ್ಟ ಕೊಡುಗೆಯ ಧರ್ಮ್ಮವ ಕೆಡ್ಸಿ ನೆನದವರು ತಮ್ಮ ತಾಯಿ ತಂದೆ ನರಕಕ್ಕೆಯಿಕ್ಕಿದವರು" ಎಂದು ಮುಂತಾಗಿ ಶಾಪಾಶಯವಿದೆ.

**ಮಾದೆಯ ಹೆಗ್ಗಡೆ (ಕ್ರಿ.ಶ. ೧೩೧೫)**

ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲೂಕಿನ ಕಮ್ಮಟದುರ್ಗದ[೬] ಶಾಸನವನ್ನು "ಬರದಾತ ಮೈದುನ ಮಾದಿಯಹೆಗ್ಗಡೆ" ಎಂದು ಉಲ್ಲೇಖಗೊಂಡಿದೆ. ಒಟ್ಟು ೮ ಸಾಲುಗಳನ್ನೊಳಗೊಂಡ ಈ ವೀರಗಲ್ಲು ಕಮ್ಮಟದುರ್ಗದ ಪಾಳೆಯಗಾರ 'ವೀರಕಂಪಿಲನು' ರಾಜ್ಯಭಾರ ಮಾಡುತ್ತಿದ್ದಾಗ, ಸುರತ್ರಾಣ (ಸುಲ್ತಾನ)ನ ದಳವು ನೇಮಿಯ ನೇತೃತ್ವದಲ್ಲಿ ಬಂದು ಯುದ್ಧ ಮಾಡಿದಾಗ ಕಾಳಗದಲ್ಲಿ ಗಡೆಸಿಂಗನಾಯ್ಕನ ತಮ್ಮನಾದ ಕಾಮಿನಾಯ್ಕನು ಹೋರಾಡಿ ಸಾಯುತ್ತಾನೆ. ಅವನ ಅಕ್ಕ ಮತ್ತು ಅಳಿಯ ಸೇರಿ ವೀರಗಲ್ಲು ಹಾಕಿಸುತ್ತಾರೆ. ಇದನ್ನು ಶಾಸನ ಹೀಗೆ ಹೇಳಿದೆ.

**"ಸುರತಾಣನ ದಳ ನೇಮಿಸಹಿತ ನಡೆದುಬಂದಲ್ಲಿರೆ ತುಳುವ**
**ಯೆಕ್ಕಟಿಗಡೆ ಸಿಂಗನಾಯ್ಕನ ತಮ್ಮ ಕಾಮಿನಾಯ್ಕನು ರಣದಲ್ಲಿ**
**ಹೋಯ್ದಾಡ ಬಿದ್ದನು. ಹತನ ಅಕ್ಕ ಅಳಿಯ ಬಿರು ಯಿಕ್ಕಿಸಿದ**
**ಬೀರಗಲ್ಲು ಬರದಾತ ಮೈದುನ ಮಾದಿಯ ಹೆಗ್ಗಡೆ ಮಂಗಳ ಮಹಾಶ್ರೀ"** ಎಂದಿದೆ.

**ಸಿರಿಪನ್ನ (ಕ್ರಿ.ಶ.೧೩೧೮)**

ಹಾಸನ ಜಿಲ್ಲೆಯ, ಅರಸೀಕೆರೆ ತಾಲೂಕಿನ, ಕೆಲ್ಲಂಗೆರೆ ಗ್ರಾಮದ[೭] ಶಾಸನವನ್ನು ಈತನು ವಿರಚಿಸಿದ್ದಾನೆ. ಇದನ್ನು ಶಾಸನದ ೨೭ನೇ ಸಾಲಿನಲ್ಲಿ ಗಮನಿಸಬಹುದಾಗಿದೆ.

"ಗ್ರಾಮನಿಯೋಗದಿಂ ಬರೆದ ಹರಿಅಂಣ್ಣಂಗಳ ಮಗ ಸೇನಬೋವ ಸಿರಿಪಂಣ್ನನ ಬರಹ" ಎಂದಿದೆ. ಶಾಸನದಲ್ಲಿ ಒಟ್ಟು ೩೦ ಸಾಲುಗಳಿವೆ. ಶ್ರೀ ಹರಿಹರಪುರ (ಕೆಲ್ಲಂಗೆರೆ)ದ ಶ್ರೀಮದಶೇಷ ಮಹಾಜನಗಳು ಶ್ರೀಮನುಮಹಾಪಸಾಯಿತ ಭಂಡಾರಿ ಕಾವಣ್ಣನವರ ಮಕ್ಕಳು ಕಾವಣ್ಣನವರಿಗೆ ಕೊಟ್ಟ ಶಿಲಾಶಾಸನದ ಕ್ರಮವೆಂತೆಂದೊಡೆ ಎಮ್ಮ ಊರು ಮದ್ದಿಕದ ಕೂಟಗಟ್ಟದಲ್ಲಿ ಮಹೇಸ್ವರ ಹರಿಯಣ್ಣಗಳು, ಕರಿಯಮಾದಣ್ಣನ ಮಕ್ಕಳು, ನರಸಿಂಹದೇವಂಗಳು ಮುರುತಣ್ಣಗಳ ಮಕ್ಕಳು ಸಂಕಣ್ಣ ಗೋಪಣ್ಣಗಳು ತಾವು ಅಳಲಾರದೆ ಆ ಕ್ಷೇತ್ರದ ಮೊದಲ ಸಿದ್ಧಾಯ ಆ ಅಪೂರ್ವ ಆಯಗಳನ್ನು ತೆರಲಾರದೆ. ಕಟ್ಟಿಗೆ ಧಾರೆಯೆರೆದು ವೋಲೆಯ ಕೊಟ್ಟು ಬಿಟ್ಟರಾಗಿ ಆ ಕ್ಷೇತ್ರಗಳನ್ನು 'ಕಾವಣ್ಣ'ಗಳ ಕಯ್ಯಲ್ಲಿ ಗದ್ದಾಣ ಎಂಟನ್ನು ಕಟ್ಟುಗೆ ಕಾಣಿಕೆಯಾಗಿ ಕೊಂಡು ಆ ಕ್ಷೇತ್ರಕ್ಕೆ ಪ್ರತಿವರುಷವೂ ಗದ್ಯಾಣ ಒಂದನ್ನು ಆ ಮಹಾಜನಗಳಿಗೆ ಆ ರಾಮಣ್ಣಗಳು ಪುಷ್ಯಮಾಸದಲ್ಲಿ ಕೊಡುತ್ತ ಬರುವರು.

ಮುನ್ನ ಬಿಟ್ಟ ಕಂಚೆಯನ ಹೊನ್ನಸಿಂಗನ ಮಂಚು ಕೆಂಚಯನ ಚಿಕನ ಬಾಗಯವೊಳಗೆ ಅರ್ದ ಇವರ ಬಳಿಯ ಆ ಕಟ್ಟೆಯ ಹಿಂದಿಕ ಎಲ್ಲಾ ಸಾವಿನ ಗದ್ದೆ ಕೂಡಿ ಆ ರಾಮಣ್ಣಗಳು ಆಳುವರು. ಈ ಸಿದ್ಧಾಯದ ಗದ್ಯಾಣ ಅಲ್ಲದೆ ಅರಮನೆಯಿಂದ ಬಂದ ಪೂರ್ವ ಆಯ ಅಪೂರ್ವಾಯ ಎನೇ ಬಂದರೂ ಆ ಮಹಾಜನಗಳೇ ಪರಿಹರಿಸಿ ಕೊಡುವರು ಎಂದಿದೆ.

ಈ ಶಾಸನದ ಗದ್ಯಕ್ಕೆ ಮಾದರಿ ಹೀಗಿದೆ:

**"ಈ ಕ್ಷೇತ್ರಉೂ ಆ ರಾಮಂಣ್ಣಗಳಿಗೆ ಆದಿಕ್ರಯದಾನಕ್ಕೆ ಸಲುಉದು ಯೀ ಕ್ಷೇತ್ರಕ್ಕೆ ಸೀಮಾವಿವಾದವಾದಡೆ ಮಹಾಜನಂಗಳು ತಿದ್ದಿಕೊಡುವರು ಇ ಕ್ಷೆತ್ರಕ್ಕೆ ಬಡಗಣ ಹೊಲದ ಕಾರಣವಿಲ್ಲ. ಅದನ್ನು ಮಹಾಜನಗಳೇ ಅನುಭವಿಸಿಕೊಂ ಬರು ಯೀ ಭೂಮಿ ರಾಮಣ್ಣಗಳಿಗೆ ಸಂತಾನಗಾಮಿ ಆಗಿ ಸಲುವಂತಾಗಿ ಆ ಮಹಾಜನಂಗಳು ಧಾರಾಪೂರ್ವಕವಾಗಿ ಕೊಟ್ಟ ಶಿಲಾಶಾಸನ"** ಎಂದಿದೆ.

**ವಿಜಯಾದಿತ್ಯ (ಕ್ರಿ.ಶ.೧೩೨೬)**

ಬೀದರ ಜಿಲ್ಲೆಯ, ಬಸವಕಲ್ಯಾಣ ತಾಲೂಕಿನ, ಬಸವಕಲ್ಯಾಣ[೮] ಶಾಸನವನ್ನು ಈತನು ರಚಿಸಿದ್ದಾನೆ. ಈ ಶಾಸನವು ೩೧ ಸಾಲುಗಳನ್ನು ಒಳಗೊಂಡಿದ್ದು, ೩೦ನೇ ಸಾಲಿನಲ್ಲಿ ಶಾಸನ ಕವಿಯ ಉಲ್ಲೇಖವಿದೆ. "ಶ್ರೀಮತುಸ್ಯರ ಸಿಹಾದಾರಾಜಪೂಜಿತದೇವ ವಚಾ ವಿಜಾದಿತ್ಯಸ್ಯ ಲಿಖಿತ ಶಾಸನಂ" ಎಂದಿದೆ. ಈ ಶಾಸನ ಕಾಲಾವಧಿ ಕ್ರಿ.ಶ.೧೩೨೬ ಆಗಿದೆ. ಶಾಸನವು ಸಂಸ್ಕೃತ ಭಾಷೆಯನ್ನು ಒಳಗೊಂಡಿದ್ದು, ನಾಗರಿಲಿಪಿಯನ್ನು ಒಳಗೊಂಡಿದೆ. ಭಾಷೆ ಅಶುದ್ಧವಾಗಿದೆ.

ಮಹಾರಾಜಾಧಿರಾಜ ಸುರತಾಣ (ಸುಲ್ತಾನ) ಮಹಮ್ಮದನು ಆಳುತ್ತಿದ್ದಾಗ ಇವನ ಮಹಾಪ್ರಧಾನವಾಗಿ ಮಲ್ಲಿಕ್ 'ಕಾಮದೀನ' ಎನ್ನುವವನು. ಮಹಾರಾಷ್ಟ್ರ ಮಂಡಳವನ್ನು ಆಳುತ್ತಿದ್ದ. ಇವನು ಇಲ್ಲಿಯ ಸಮಸ್ತ ಮುದ್ರಾ ವ್ಯಾಪಾರವನ್ನು ನೋಡಿಕೊಳ್ಳುತ್ತಿದ್ದ ಶೋಜ್ ಅಹ್ಮದ್ ಎನ್ನುವವನು ಕಲ್ಯಾಣಪಟ್ಟಣದ ಆಡಳಿತಾಧಿಕಾರಿಯಾಗಿದ್ದನು. ಬಾಹಬದೀನು ಹಾಗೂ ಕಲ್ಯಾಣದ ಅಧಿಕಾರಿಯಾಗಿದ್ದ. 'ಖೋಜಾ ಅಹಮ್ಮದ್' ಹಾಗೂ ಸ್ಯಾರಮಲ್ಲಿಕನ ಮಗನಾದ ಜಂಡಮಲ್ಲ ಎಂಬುವವರ ಮಧ್ಯೆ ಇಲ್ಲಿ ನಡೆದ ಅಧಿಕಾರ ಹಸದ್ತಾಂತರದ ಗೊಂದಲದಲ್ಲಿ ಕೆಲವರು ಇಲ್ಲಿನ ಮಧುಕೇಶ್ವರ ದೇವಾಲಯಕ್ಕೆ ಹಾನಿ ಮಾಡಿದ್ದಲ್ಲದೆ; ಅದರಲ್ಲಿಯ ಶಿವಲಿಂಗವನ್ನು ಒಡೆದಿದ್ದರು. ಇದಾದ ನಂತರ ಕರ್ನಾಟಕ ಭಾಗದ ಈ ದೇವರ ಭಕ್ತ ಜನರು ಬಂದು ದೇವಲಯದ ಜೀರ್ಣೋದ್ಧಾರ ಮಾಡಲು ಕೇಳಿಕೊಂಡರು. ಕೆಲವು ಕಾಲದ ನಂತರ ಪ್ರಾಂತ್ಯಾಧಿಕಾರಿಯು ಪಟ್ಟಣಕ್ಕೆ ಬಂದಾಗ, ದೇವಾಲಯದ ಸ್ಥಾನಿಕನಾದ ವೈಣಿಪಾಲನ ಮಗನಾದ ಠಕ್ಕುರಮಲ್ಲ ಎಂಬುವವನು ದೇವರನ್ನು ಪುನಃಸ್ಥಾಪಿಸಲು ವಿನಂತಿಸಿಕೊಂಡ. ಪ್ರಾಂತ್ಯಾಧಿಕಾರಿಯು ಇದಕ್ಕೆ ಸಮ್ಮತಿಸಿದ. ಹಾಗೆಯೇ ಕುಲಧರ್ಮವನ್ನು ಕಾಪಾಡಿಕೊಳ್ಳುವುದು ಅವರ ಕರ್ತವ್ಯ ಎಂಬ ಆಜ್ಞೆನ್ನು ಮಾಡಿದ. ಮುಂದೆ ಶಾಸನದಲ್ಲಿ ನಾಲ್ಕು ಪದ್ಯಗಳು ಬಂದಿದ್ದು, ಸುಲ್ತಾನ ಮಹಮದ್‌ನ ಉಲ್ಲೇಖ ಬಂದಿದೆ. ನಂತರ ಕಾಯಸ್ಥಮಲ್ಲನು ವಿಧಿ-ವಿಧಾನಗಳಂತೆ ಮಂತ್ರ ಪೂರ್ವಕವಾಗಿ ರೋಹಿಣಿ ನಕ್ಷತ್ರದ ರಾತ್ರಿಯಲ್ಲಿ 'ಮಧುಕೇಶ್ವರ' ಪ್ರತಿಷ್ಠಾಪಿಸಿದ ವಿಷಯವನ್ನು ತಿಳಿಸುತ್ತದೆ. ಮುಂದೆ ಮಧುಕೇಶ್ವರನನ್ನು ಸ್ತುತಿಸಿದ್ದು ಸ್ಯಾತ ಸಿಹಾದಾರಾಜನಿಂದ ಗೌರವವನ್ನು ಪಡೆದಿದ್ದ 'ವಿಜಯಾದಿತ್ಯ' ಎಂಬುವವನು ಈ ಶಾಸನದ ಕರ್ತೃ ಎಂದು ತಿಳಿಸುತ್ತದೆ.

> **'ಅದ್ಯೇಹ ಸಮಸ್ತ ರಾಜಾವಲೀ ಮಾಲಾಕೃತ**
> **ವಿರಾಜಿತ ಮಹಾರಾಜಾಧಿರಾಜ ಶ್ರೀ**
> **ಸಾರತಾಣ ಮಹಮದಃ ರಾಜ್ಯೇ ತತ್ಪಾದ**
> **ಪದ್ಮೋಪಜೀವಿತಸರ್ ನಾರ್ವಭಾರ ನೃನಿರೂಪಿತ**
> **ಮಹಾಪ್ರಧಾನ ಮಲ್ಲಿಕ ಕಾಮದಿನನೇ"** ಎಂದಿದೆ.

**ಸುಧಾಕರದೇವ (ಕ್ರಿ.ಶ.೧೩೩೧)**

ತುಮಕೂರು ಜಿಲ್ಲೆಯ, ಗುಬ್ಬಿ ತಾಲೂಕಿನ, ಸಂಪಿಗೆ ಗ್ರಾಮದ ಮಲ್ಲಿಕಾರ್ಜುನ ದೇವಸ್ಥಾನದ ಮುಂದಿರುವ ಒಂದು ಶಾಸನವನ್ನು[೮] ಈತನು ರಚಿಸಿದ್ದಾನೆ. ಈತನು ಹೆಗ್ಗೆರೆ ಎಂಬ ಊರಿನವನೆಂದೂ ತಂದೆ ವಿಷ್ಣುದೇವನೆಂದೂ ಶಾಸನದ ಅಂತ್ಯದಲ್ಲಿ ಹೇಳಿದೆ. ಶಾಸನ ಈತನನ್ನು 'ಜೋಯಿಸ ಸುಧಾಕರದೇವ'ನೆಂದು ಕರೆದಿದೆ. ಹೇಳಿ ಬರೆಸಿದವರು ಹೆಗೆಜ಼ಿಯ

ಶ್ರೀಮದ್ವಿನಯನಿಧಾನ ವಿಷ್ಣುದೇವರ ಮಕ್ಕಳು ಜೋಯಿಸ ಶ್ರೀ ಸುಧಾಕರದೇವರು" ಎಂದಿದೆ. ಈ ಶಾಸನದ ಕಾಲಾವಧಿ ಕ್ರಿ.ಶ.೧೩೩೧ರಂದು ಈ ಶಾಸನ ರಚಿತವಾಯಿತು.

ಹೊಯ್ಸಳ ಮೂರನೆಯ ಬಲ್ಲಾಳ ಮತ್ತು ಅವನ ಮಹಾಪ್ರಧಾನ ಕಾಮೆಯ ದಂಣಾಯಕ 'ಶ್ರೀ ವಿರೂಪಾಕ್ಷ ಹೊಸದುರ್ಗದಲ್ಲಿ' ರಾಜ್ಯವನ್ನು ಆಳುತ್ತಿದ್ದಾಗ. ಪಟ್ಟಣಸ್ವಾಮಿ ಕಲಿಸೆಟ್ಟಿಯ ಮಗ ಸಿಂಗೆಸೆಟ್ಟಿ ಎಂಬುವನಿಗೆ ಸಂಪಿಗೆಯ ಸ್ಥಳವನ್ನು ಕೊಡುಗೆಯಾಗಿ ಕೊಟ್ಟಿರುವುದೇ ಶಾಸನದ ಮುಖ್ಯವಸ್ತು. ೪೬ ಸಾಲುಗಳಿಂದ ಕೂಡಿರುವ ಈ ಶಾಸನವು ಗದ್ಯಮವಯಾಗಿದೆ. ಹೊಯ್ಸಳ ಪ್ರಶಸ್ತಿ ತತ್ಪಾದಪದ್ಮೋಪಜೀವಿಗಳ ಪ್ರಶಸ್ತಿ ಎಲ್ಲವೂ ಗದ್ಯದಲ್ಲಿದೆ. ವೀರಬಲ್ಲಾಳನ ಒಪ್ಪ ಮುಗಿದ ಒಂದು ಸಂಸ್ಕೃತ ಶ್ಲೋಕ ಅದರ ಅರ್ಥವೇ ಆದ ಒಂದು ಕಂದಪದ್ಯ ಇವುಗಳು ಮಾತ್ರ ಪದ್ಯಗಳಾಗಿವೆ.

**ರಾಯಕುಲಕೆ ಮುದರಾಜಂ**
**ರಾಯಂ ನರಸಿಂಗಸುತನು ಕಲಿ ಬಲ್ಲಾಳಂ**
**ರಾಯ ಭುಜಬಳನು ಸಿಂಗಗೆ**
**ರಾಯಂ ಯದುರಾಯ ಕೊಟ್ಟ ಚಂಪಕಪುರಮಂ ॥**

ನಾಗಲಾಪುರದ 'ಚೌಡಾಚಾರ್ಯನ' ಮಗ ಮಸಣಾಚಾರ್ಯ, ದಶವಿದ್ಯ ದಂಡನಾಥನ ಮಗ ಬೆನಕಾಚಾರ್ಯ ಇವರಿಬ್ಬರೂ ಈ ಶಾಸನವನ್ನು ಕಂಡರಿಸಿರುವುದಾಗಿ ಶಾಸನದ ಅಂತ್ಯದಲ್ಲಿ ಹೇಳಿದೆ.

**ರಾಮಂಣ (ಕ್ರಿ.ಶ.೧೩೩೪):**

ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆಯ ವರಾಹನಾಥಕಲ್ಲಹಳ್ಳಿಯ ಶಾಸನವನ್ನು[೧೦] ಈತನು ರಚಿಸಿದ್ದಾನೆ. ಶಾಸನದ ಕಾಲ ೧೩೩೪, ಶಾಸನದ ಒಟ್ಟು ಸಾಲುಗಳು ೩೭ ಆದರೆ ೩೨ ರಿಂದ ೩೭ರವರೆಗೆ ನಾಶವಾಗಿದೆ. ಶಾಸನವು ಹೆಚ್ಚು ನಾಶಹೊಂದಿದ್ದು ಅಕ್ಷರಗಳು ಅಳಿಸಿಹೋಗಿವೆ. ಕನ್ನಡ ಭಾಷೆ ಹಾಗೂ ನಾಗರಿಲಿಪಿಯನ್ನೊಳಗೊಂಡಿದೆ.

ಈ ಶಾಸನವು ಹೊಯ್ಸಳ ಮೂರನೆಯ ಬಲ್ಲಾಳನ ಕಾಲಾವಧಿಗೆ ಸೇರಿದೆ. ಈತನ ಮಹಾಪ್ರಧಾನನಾದ ಆದಿಸಿಂಗೆಯ ನಾಯಕನು 'ಕಲ್ಲಹಳ್ಳಿ' ಗ್ರಾಮವನ್ನು 'ದೇವಲಾಪುರ' ಎಂದು ನಾಮಕರಣ ಮಾಡಿ ಅಗ್ರಹಾರವನ್ನಾಗಿ ಮಾಡಿದನು. ರಾಣಿ 'ದೇಮಲದೇವಿಯ' ಹೆಸರಿನಲ್ಲಿ ಈ

ಗ್ರಾಮವು ರಾಜಗುರು 'ಗುಮ್ಮಟದೇವನಿಗೆ' ಸಲ್ಲಿಸಲಾಯಿತು. ಹಾಗೂ ಮಹಾಜನರಿಗೆ ಇದು ದೊರೆಯುವಂತಾಯಿತು.

**ಶಾಸನದ ಗದ್ಯಭಾಗ ಇಂತಿದೆ:**

ರಾಜಗುರು ಗುಂಮಟದೇವರು ಕೊಟ್ಟ ಶಿಲಾಶಾಸನದ ಕ್ರಮವೆಂತೆಂದಡೆ ಸ್ವಸ್ತಿ ಶ್ರೀಮತ್ ಪ್ರತಾಪ ಚಕ್ರವರ್ತಿ ಹೊಯ್ಸಳ ಭುಜಬಳ ಶ್ರೀವೀರಬಲ್ಲಾಳದೇವರಸರು ಶ್ರೀಮನು ಮಹಾಪ್ರಧಾನ ಆದಿಸಿಂಗೆಯ ದಣ್ಣಾಯಕ..ರುಮ ರಾಣಿವಾಸ ದೇವಲಾದೇವಿಯ ಹೆಸರಲು ಮಾಡಿದ ಅಗ್ರಹಾರವ"... ಕಲಹಳಿಯನು ಶ್ರೀ ದೇವಲಪುರವಾಗಿ ಮಾಡಿ ದೇವಲಮಹಾಸಮುದ್ರಮಾ ಕಾಲುವಳಿಯಾಗಿ ಶ್ರೀ ಬಲ್ಲಾಳದೇವರಸರು ಧಾರೆಯೆರೆದು ಕೊಟ್ಟ" ಎಂದಿದೆ.

**ಅಡಿಟಿಪ್ಪಣಿಗಳು:**

೧. E.C.Vol.I.No.೬೦, ಕೊಡಗು (ಜಿ) ಸೋಮವಾರಪೇಟೆ (ತಾ) ಚೌಡ್ಲು ೧೩೦೦ A.D. ಪು-೩೯-೪೦

೨. E.C.Vol.XV.No:೧೯೨, ಶಿವಮೊಗ್ಗ (ಜಿ) ಸಾಗರ (ತಾ) ರಾವಣದಕಾಪು ೧೩೦೨ A.D. ಪು-೩೮೬

೩. E.C.Vol.VI.No:೭೬, ಮಂಡ್ಯ (ಜಿ) ನಾಗಮಂಗಲ (ತಾ) ಬೆಳ್ಳೂರು ೧೩೦೯ A.D. ಪು-೭೧-೭೫

೪. E.C.Vol.VI.No:೯೫, ಮಂಡ್ಯ (ಜಿ) ಕೃಷ್ಣರಾಜಪೇಟೆ (ತಾ) ಬೈರಾಪುರ ೧೩೧೨ A.D. ಪು-೭೭-೭೮

೫. E.C.Vol.VIII.No:೧೮೭, ಹಾಸನ (ಜಿ) ಹಾಸನ (ತಾ) ಅವ್ವೇರಹಳ್ಳಿ ೧೩೧೪ A.D. ಪು-೪೧೬-೧೭

೬. E.C.Vol.VIII.No:೧೮೭, ಹಾಸನ (ಜಿ) ಹಾಸನ (ತಾ) ಅವ್ವೇರಹಳ್ಳಿ ೧೩೧೪ A.D. ಪು-೪೧೬-೧೭

೭. ಕ.ವಿ.ಶಾ.ಸಂ.II.No:೧೬೪, ಕೊಪ್ಪಳ (ಜಿ) ಕೊಪ್ಪಳ (ತಾ) ಕಮ್ಮಟದುರ್ಗ ೧೩೧೫ A.D. ಪು-೧೫೭-೫೮

೮. ಕ.ವಿ.ಶಾ.ಸಂ.VIII.No:೧೩, ಬೀದರ (ಜಿ) ಬಸವಕಲ್ಯಾಣ (ತಾ/ಗ್ರಾ) ೧೩೨೬ A.D. ಪು-೩೨-೩೩

೯. E.C.Vol.XII.No:೩೦, ತುಮಕೂರು (ಜಿ) ಗುಬ್ಬಿ (ತಾ) ಸಂಪಿಗೆ (ಗ್ರಾ) ೧೩೩೧ A.D. ಪು-೯೬

೧೦. E.C.Vol.VI.No:೧೦೮, ಮಂಡ್ಯ (ಜಿ) ಕೃಷ್ಣರಾಜಪೇಟೆ (ತಾ) ವರಾಹನಾಥ ಕಲ್ಲಹಳ್ಳಿ, ೧೩೩೪ A.D. ಪು-೯೬-೯೭

# ಸಮಾರೋಪ

'ವಿಜಯನಗರ ಪೂರ್ವದ ಶಾಸನಕವಿಗಳು' ಎಂಬ ಈ ಮಹಾಪ್ರಬಂಧದಲ್ಲಿ ಕ್ರಿ.ಶ.೮ನೇ ಶತಮಾನದಿಂದ ಕ್ರಿ.ಶ.೧೩೩೪ರವರೆಗೆ ಅಂದರೆ ವಿಜಯನಗರ ಪೂರ್ವದ (ಕ್ರಿ.ಶ.೧೩೩೬) ಶಾಸನಕವಿಗಳ ಶಾಸನಗಳನ್ನು ಅನುಲಕ್ಷಿಸಿ ಈ ಮಹಾಪ್ರಬಂಧವನ್ನು ರಚಿಸಲಾಗಿದೆ.

ಒಂದನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಕುರಿತು ಸೋದಾಹರಣವಾಗಿ ವಿಶ್ಲೇಷಿಸಲಾಗಿದೆ. ೧.೨ ರಲ್ಲಿ ಪೂರ್ವ ಅಧ್ಯಯನದ ಸ್ಥೂಲಸಮೀಕ್ಷೆಯನ್ನು ನಡೆಸಲಾಗಿದೆ. ಇಲ್ಲಿ ಕನ್ನಡದ ಹಿರಿಯ ವಿದ್ವಾಂಸರು ಶಾಸನಕವಿಗಳ ಬಗ್ಗೆ ನಡೆಸಿದ ಅನುಸಂದಾನದ ಚರ್ಚೆಯಿದೆ. ೧.೩ ರಲ್ಲಿ ಪ್ರಸ್ತುತ ಮಹಾಪ್ರಬಂಧದ ರಚನೆಯಲ್ಲಿ ಬಳಸಿಕೊಂಡ ಆಕರ ಸಾಮಗ್ರಿಗಳ ವಿವರವಿದೆ. ೧.೪ರಲ್ಲಿ ಅಧ್ಯಯನದ ರೂಪರೇಷೆಗಳನ್ನು ಚರ್ಚಿಸಲಾಗಿದೆ. ೧.೫ರಲ್ಲಿ ಶಾಸನದ ಅರ್ಥ, ವ್ಯಾಖ್ಯೆ ಹಾಗೂ ವ್ಯಾಪ್ತಿಯನ್ನು ವಿವಿಧ ವಿದ್ವಾಂಸರ ಹೇಳಕೆಗಳ ಹಿನ್ನೆಲೆಯಲ್ಲಿ ವಿವರಿಸಲಾಗಿದೆ. ೧.೬ರಲ್ಲಿ ಶಾಸನಗಳ ಸಿದ್ಧತೆ ಹಾಗೂ ಸಂರಕ್ಷಣೆ ಬಗ್ಗೆ ವಿಷದೀಕರಿಸಲಾಗಿದೆ. ೧.೭ರಲ್ಲಿ ಶಾಸನಕವಿಗಳು, ಲಿಪಿಕಾರರು, ರೂವಾರಿಗಳನ್ನು ಗುರುತಿಸುವ ಬಗ್ಗೆ ಚಿಂತನೆ ನಡೆಸಲಾಗಿದೆ. ಹಾಗೆಯೇ ಲಿಪಿಸೌಂದರ್ಯ ಸಾಧಿಸಬೇಕಾದರೆ ಕನ್ನಡ ಅಕ್ಷರಗಳ ಅವಯವ ಜ್ಞಾನ ಪ್ರಮಾಣ ಅವಶ್ಯವೆಂಬುದನ್ನು ಸೋದಾಹರಣವಾಗಿ ಚರ್ಚಿಸಲಾಗಿದೆ. ಶಾಸನ ಕಂಡರಣಿಕಾರರ (ರೂವಾರಿಗಳನ್ನು) ವಿವಿಧ ಬಗೆಯ ಹೆಸರುಗಳಿಂದ ಗುರುತಿಸಲಾಗಿದೆ. ೧.೮ರಲ್ಲಿ ಶಾಸನಾಧ್ಯಯನದ ಇತಿಹಾಸವನ್ನು ಚರ್ಚಿಸುತ್ತಾ ಡಾ.ಪಿ.ಬಿ. ದೇಸಾಯಿ ಹಾಗೂ ಡಾ.ಎಂ.ಎಂ. ಕಲಬುರ್ಗಿಯವರಂಥ ವಿವಿಧ ವಿದ್ವಾಂಸರ ಅಧ್ಯಯನಗಳ ಹಿನ್ನಲೆಯಲ್ಲಿ ಕರ್ನಲ್ ಮೆಕೆಂಜಿಯುಗ, ಸರ್ ವಾಲ್ಟರ್ ಇಲಿಯಟ್‌ಯುಗ, ಡಾ.ಫ್ಲೀಟ್ ಮತ್ತು ರೈಸ್ ಯುಗ ಎಂದು ಕಲಬುರ್ಗಿಯವರ ವಿಭಾಗ ಕ್ರಮವನ್ನೇ ಒಪ್ಪಿಕೊಂಡು ವಿಶ್ಲೇಷಿಸಲಾಗಿದೆ.

ಅಧ್ಯಾಯ ೨ರಲ್ಲಿ 'ವಿಜಯನಗರ ಪೂರ್ವದ ಶಾಸನಕವಿಗಳು' ಎಂಬ ನಮ್ಮ ಮಹಾಪ್ರಬಂಧದ ಶೀರ್ಷಿಕೆಯಡಿಯಲ್ಲಿ ಶಾಸನಕವಿಗಳ ಪರಂಪರೆಯನ್ನು ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಹಾಗೂ ಮುಂದೆ ಬಂದ ಎಲ್ಲ ಶಾಸನ ಕವಿಗಳ ಮೇಲೆ ಪೂರ್ವ ಸಾಹಿತ್ಯ ಕವಿಗಳ ಪ್ರಭಾವ ಹಾಗೂ ಸಂಸ್ಕೃತ ಕವಿಗಳು, ಕನ್ನಡ ಶಾಸನಕವಿಗಳ ಮೇಲೆ ಪ್ರಭಾವ ಹೇಗಾಯಿತು ಎಂಬುದನ್ನು ವಿವೇಚಿಸಲಾಗಿದೆ. ೨.೧ರಲ್ಲಿ ಕ್ರಿ.ಶ. ೮ನೇ ಶತಮಾನದ ಶಾಸನಕವಿಗಳ ಬಗ್ಗೆ ಚರ್ಚಿಸಲಾಗಿದೆ. ಈ ಕಾಲಘಟ್ಟದಲ್ಲಿ ಒಟ್ಟು ೬ ಜನ ಶಾಸನಕವಿಗಳ ಬಗ್ಗೆ ವಿಶ್ಲೇಷಿಸಲಾಗಿದೆ.

ಅಚಲನ್, ಹಾಗೂ 'ನಟಸೇವ್ಯ' ಎಂಬುವುದು ಒಬ್ಬನ ಅಂಕಿತ ಎಂದು ವಿದ್ವಾಂಸರು ಊಹಿಸಿದ್ದರು. ಆದರೆ ಇಬ್ಬರು ಬೇರೆ ಎಂಬುದು ಸ್ಪಷ್ಟಪಡಿಸಲಾಗಿದೆ. ಇನ್ನೊಬ್ಬ ಶಾಸನಕವಿ 'ಧರಂ' ಕುಂದಾಚಾರ್ಯ, ಬಲದೇವ, ಶಿವಮಾರದೇವ, ನಾಮಯ್ಯರಂಥ ಕ್ರಿ.ಶ. ೮ನೇ ಶತಮಾನದ ಶಾಸನಕವಿಗಳ ಪರಿಚಯ ಹಾಗೂ ಶಾಸನದಲ್ಲಿ ವ್ಯಕ್ತವಾದ ಕಾವ್ಯಾಂಶಗಳನ್ನು ಶೋಧಿಸಲಾಗಿದೆ.

ಅಧ್ಯಾಯ ೩ರಲ್ಲಿ ಕ್ರಿ.ಶ. ೯ನೇ ಶತಮಾನದ ಶಾಸನಕವಿಗಳ ಬಗ್ಗೆ ವಿಶ್ಲೇಷಿಸಲಾಗಿದೆ. ಈ ಕಾಲ ಘಟ್ಟದಲ್ಲಿ ಒಟ್ಟು ೨೨ ಜನ ಶಾಸನಕವಿಗಳ ಬಗ್ಗೆ ವಿವೇಚನೆಗೆ ಒಳಗು ಮಾಡಲಾಗಿದೆ. ಉದಾ: ದಿವಾಕರ, ಪಣ್ಡಸಾಮಿ, ಬೆಳ್ದೇವ, ಗುಣವರ್ಮ, ರವಿನಾಗಭಟ್ಟ, ನಾಗವರ್ಮ, ಕವಿರಾಜ, ಬೀರಯ್ಯ, ಕಬ್ಬದನಾಮಯ್ಯ, ಕಾಚಯ್ಯ, ಕವಿಪೊನ್ನ, ಜಿನವಲ್ಲಭ, ಶ್ರೀಧರಯ್ಯ, ಆಯ್ಕವೆಮ್ಮ, ಪೆದ್ದಣಭಟ್ಟ, ಸುಬಗ, ಈ ಕವಿಯ ಸಾಲು ರನ್ನನ ಕಾವ್ಯದ ಪ್ರಭಾವಕ್ಕೆ ಒಳಗಾಗಿದೆ ಎನಿಸುತ್ತದೆ. ಉದಾ:

**ಸನ್ದ ಮಹಾಸಾಮನ್ತಂ**
**ಮನ್ದಿಗನಾರ್ತಿತ್ತುಮಿೞಿದುವೀ ಜಗದೊಳ್ ಸಂ**
**ಕ್ರನ್ದನ ನನ್ದನ ಸದೃಶಂ**
**ನಿನ್ದಂ ನಿಜರಾಜ್ಯಪದವಿಯೊಳ್ಸುಖದಿಂದಂ ॥**

ಇನ್ನೊರ್ವಕವಿ 'ಸಾಮಿಯಣ್ಣ', ರಾಷ್ಟ್ರಕೂಟರ ಖೊಟ್ಟಿಗದೇವನ ಶೌರ್ಯವರ್ಣನೆ ಮಹತ್ವದ್ದಾಗಿದೆ.

ಶಾಸನಕವಿ ನಾರಣ' ತನ್ನ 'ಆಶುಕವಿತ್ವ' (ಸಮಯಸ್ಫೂರ್ತಿ)ದಿಂದ ಬಂದ ಕಾವ್ಯದ ಶ್ರೇಷ್ಠತೆಯನ್ನು ಹೇಳಿರುವುದು ಹೀಗೆ ಗುರುತಿಸಲಾಗಿದೆ.

**ವೇದ ವೇದಾಂಗಮನೋದದೇ ಸಾಸ್ತ್ರಮ**
**ನಾದಿ ಮದ್ಯಾಂತ ಮಱಿಯದೆ ನಾರಣಂ**
**ಗಾದುದು ಕವಿತೆ ಸಹಜಮೆ**

ಎಂದು ಸಹಜವೇ ಎಂದು ಪ್ರಶ್ನಿಸುವ ಜೊತೆಗೆ ಕವಿತ್ವ ತನಗೆ ಯಾವ ಶಾಸ್ತ್ರಾಧ್ಯಯನವಿಲ್ಲದೇ ಸಹಜವಾಗಿ ಒಲಿದುಬಂದಿದೆ ಎಂದು ಹೆಮ್ಮೆಪಟ್ಟುಕೊಂಡಿದದ್ದಾನೆ. ಇನ್ನೊಬ್ಬ ಕವಿ ಕೇತಯ್ಯ ಹಾಗೂ ಅರ್ಹದ್ಭಕ್ತನ ಚಂಪಕಮಾಲಾವೃತ್ತದ ಒಂದು ಪದ್ಯ ವಿಶಿಷ್ಟವಾಗಿರುವುದನ್ನು ಗುರುತಿಸಲಾಗಿದೆ. ಇನ್ನು 'ಚಂದನಂದಿಯಯ್ಯ' ಹಾಗೂ ಕಮಳಾದಿತ್ಯರ ಕಾವ್ಯಕೌಶಲವು ಯಾವ

ಸಾಹಿತ್ಯಕವಿಗಿಂತಲೂ (ಕಾವ್ಯ) ಕಡಿಮೆಯದೇನಲ್ಲ ಎಂಬುದನ್ನು ಗುರುತಿಸಲಾಗಿದೆ. ಕಮಳಾದಿತ್ಯನು ಸೊಗಲದ ವರ್ಣನೆ ಹಾಗೂ ಕಂಚಿಯಬ್ಬೆಯ ವರ್ಣನೆ ಹೃದ್ಯವಾಗಿವೆ.

ಅಧ್ಯಾಯ ೪ ರಲ್ಲಿ ಕ್ರಿ.ಶ.೧೧ನೇ ಶತಮಾನದ ಶಾಸನಕವಿಗಳ ಬಗ್ಗೆ ವಿಶ್ಲೇಷಿಸಲಾಗಿದೆ. ಉದಾ: ಶ್ರೀಕಂಠಪಂಡಿತ, ದಿನಕರಯ್ಯಸೆಟ್ಟಿ, ಹರಿಯಣ್ಣ, ಬಿಂದಯ್ಯ, ಗೋಕರ್ಣಯ್ಯ, ರನ್ನ ಕವಿಯು ಅತ್ತಿಮಬ್ಬೆಯ ವರ್ಣನೆ ಕವಿಯ ಪ್ರತಿಭೆಗೆ ಕಂದಪದ್ಯವೊಂದು ಹೀಗೆ ಹೇಳಿದೆ.

**"ಪ್ರಳಯಾಗ್ನಿಯಂತೆ ಕಟಕಮ**
**ನೊಳಕೊಂಡಳುರ್ವಗ್ನಿ ದಾನಚಿಂತಾಮಣಿ ನಿ**
**ರ್ಮಳ ಜಿನ ಗಂಧೋದಕಮಂ**
**ತಳಿಯಲು ಪಶಮಿಸಿತೆಂದೊಡೆವಣ್ಣಿಸುವೆಂ"**

ಇನ್ನೊರ್ವ ಕವಿ ವೆಣ್ಣೆಯಭಟ್ಟ ಕಾಟ್ಟಜ, ಚಾವುಂಡಮಯ್ಯ, ಕಂದರ್ಪ, ಸಮಂತಭದ್ರ, ಭಳಾರ, ದೋರಯ್ಯ, ಹೆಗ್ಗಡೆಬಾಸಯ್ಯ ಕಪ್ಪಣಭಟ್ಟ, ನಾಗಮಯ್ಯ, ನಾಗವಾರ, ವಿಷ್ಣಯ್ಯ, ಬಮ್ಮಣಯ್ಯ, ಜಕ್ಕರಾಜ, ರಾಮಲ್ಲದೇವ, ಜಿನವರ್ಮಪಂಡಿತ, ಗಂಗಯ್ಯ, ನಯಸೇನಸೂರಿ, ದೋಣಯ್ಯ, ಚಟ್ಟಪಯ್ಯ, ಕವಿರಾಜವಲ್ಲಭಗೋವಿಂದ, ಚಾವುಂಡರಾಯ, ವಾವಣಯ್ಯ, ಸರ್ವ್ವದೇವಯ್ಯ, ಗಿರಿವಜ್ರಂನಾಗದೇವ, ಕವಿಮಲ್ಲ, ಕೊಂಡಪಯ್ಯ, ಬರ್ಮದೇವ, ಕರುವರ ಬರ್ಮ್ಮ, ಬಸವಣಯ್ಯ, ಮಲ್ಲಿನಾಥ, ರಾಜವಲ್ಲಭ, ನಾಗಚಂದ್ರ, ಕನ್ನಪಯ್ಯ, ರುದ್ರಭಟ್ಟ, ಹರಿಯಣ್ಣ, ವೈಜನಾಥ, ಚಾಕರಾಜು, ಅಗ್ಗಳಯ್ಯ, ನಾಗದೇವ, ಶ್ರೀಮನ್ನುಕುಳಾರ್ಯನ ಶಾಸನದಲ್ಲಿ ಮಹಾಸ್ರಗ್ಧರೆ ಮತ್ತೇಭವಿಕ್ರೀಡಿತ ಪದ್ಯಗಳನ್ನು ಗುರುತಿಸಲಾಗಿದೆ. ಮಂಗಿಮಯ, ಮಲ್ಲಿಕಾರ್ಜುನ, ಮಾಧವಭಟ್ಟೋಪಾದ್ಯಾಯ, ಅಯ್ಯಪಯ್ಯ ಮತ್ತು ಶ್ರೀಧರ, ನಾಗದೇವ, ನಗಿಬಂಟ್ಟ, ನನ್ನಪೈ, ರಾಜಾಧಿತ್ಯದೇವ, ಕರ್ಪರಸ, ದಾಮರಾಜ, ಮಾಳಪಯ್ಯ, ಕಾಶ್ಮೀರಭಟ್ಟ ಮಲ್ಲಯಪಂಡಿತ, ಕೋವರಾಜ, ದೇಪಣಭಟ್ಟ, ಮಾಧವಭಟ್ಟ, ನಾಗಾರ್ಜುನಪಂಡಿತ ಚಾಕಲದೇವಿ ಹಾಗೂ ಜಿನಗೇಹ ನಿರ್ಮಾಣ ವರ್ಣನೆ ಗುರುತಿಸಲಾಗಿದೆ. ಸೋಮರಾಶಿಪಂಡಿತ, ದುಗ್ಗಿಮಯ್ಯ, ಚಂದ್ರಭಟ್ಟ, ಮಲ್ಲನ ಅನಂತಪಾಳನ ಶೌರ್ಯದ ವರ್ಣನೆಯ ಸಾಲುಗಳು ಮನೋಹರವಾಗಿವೆ. ಶ್ರೀಕಂಠಸೂರಿಯ ಕುರುವತ್ತಿಯ ಇನ್ನೂರ್ವರ ಗುಣಪ್ರಶಂಸೆ ಮಾಡಿದ್ದನ್ನು ವಿಶ್ಲೇಷಿಸಲಾಗಿದೆ. 'ರೇಚನ'ನು ವಿಕ್ರಮಾದಿತ್ಯನ ಆಳ್ವಿಕೆಯನ್ನು ಕುರಿತು ಹೇಳಿದನ್ನು ಗುರುತಿಸಲಾಗಿದೆ. ಒಟ್ಟು ಈ ಅಧ್ಯಾಯದಲ್ಲಿ ೬೮ ಜನ ಶಾಸನ ಕವಿಗಳ ಬಗ್ಗೆ ವಿಶ್ಲೇಷಿಸಲಾಗಿದೆ.

ಅಧ್ಯಾಯ ೫ರಲ್ಲಿ ಕ್ರಿ.ಶ.೧೧ನೇ ಶತಮಾನದ ಶಾಸನಕವಿಗಳ ಇತಿವೃತ್ತ ಹಾಗೂ ಕಾವ್ಯಾತ್ಮಕವಾದ ಸಂಗತಿಗಳನ್ನು ವಿಶ್ಲೇಷಿಸಲಾಗಿದೆ. ಒಟ್ಟು ೮೮ ಜನ ಶಾಸನಕವಿಗಳ ಬಗ್ಗ ವಿಶದೀಕರಿಸಲಾಗಿದೆ. ಉದಾಹರಣೆಗೆ ನಾಗವರ್ಮ, ದುಗಣ, ಮೂಕರಾಜ, ಚಾವರಾಜ, ಚಟ್ಟಯ್ಯ, ಕಾಳಿಮಯ್ಯ, ಮಲ್ಲಿಕಾರ್ಜುನ, ಆಚರಾಜಮಲ್ಲಿದೇವ, ಲಕ್ಷ್ಮಣ, ಕವಿಯು ನೇಮಿಚಂದ್ರಮುನಿ, ಪ್ರಭಾಚಂದ್ರಮುನಿಗಳ ವರ್ಣನೆ ಮಾಡಿದ್ದಾನೆ. ದಾಮರಸ, ಕಾಳಯ, ನಾರಣದೇವ, ಸೋಮನಾಥಯ್ಯ, ಕವಿಕಂಠಾಭರಣ, ಚಟ್ಟಪಾರ್ಯ, ಸರ್ವಾಶಿಭಟ್ಟ, ಆಯ್ಚರಾಜ, ವಿಷ್ಣುಭಟ್ಟ, ಚಾವರಾಜ, ಶಾಂತಿನಾಥ, ಆಸ್ಕಂದದೇವರು, ಮರ್ದಿಮಯ್ಯ, ಮಾದಿರಾಜ, ಸಂಕಣ, ಚಾವುಂಡರಾಯ, ಚಂದ್ರಭಟ್ಟನ ಪಾನಗಲ್ಲಿನ ಹಾಗೂ ಕುಂತಳ ವಿಷಯ ವರ್ಣನೆ ಮನದುಂಬುವಂತಿದೆ. ನಾಗಾರ್ಜುನ ಪಂಡಿತ, ಮಲ್ಲಿಯಣ್ಣ, ಭಾಸ್ಕರಯ್ಯನು ತೈಲಪನ ಹಿರಿಮೆ ಹಾಗೂ ನನ್ನೆಯಭಟ್ಟರಿಗೆ ದಾನ ನೀಡಿದ ಪದ್ಯವನ್ನು ಗುರುತಿಸಲಾಗಿದೆ. ಮಲ್ಲಿನಾಥ ಸೋಮೇಶ್ವರ ಪಂಡಿತ, ಮೂಕಣಪಂಡಿತನ ಬನವಾಸಿನಾಡು ಕುರಿತು ವೃತ್ತ ಪದ್ಯವನ್ನು ಗುರುತಿಸಲಾಗಿದೆ. ಬಮ್ಮಣ, ಜನ್ನಮಯ್ಯ, ಸಾಂತಮಹಾಂತ, ಬಲದೇವ, ರೇಚಣಭಟ್ಟ, ಮಹಾದೇವವಿಬುಧ, ಸರ್ವಜ್ಞಪಟ್ಟವರ್ಧನ ಮುಖ್ಯಪಂಡಿತ, ಮಧುಸೂದನದೇವ, ಕಲಿದೇವಪಂಡಿತನ, ಋಷ್ಯಶೃಂಗಪುರದ ವರ್ಣನೆ, ಬೆಳ್ವಲ ದೇಶದ ವರ್ಣನೆ ಹೃದ್ಯವಾಗಿದೆ. ಶಂಕರದೇವ, ಹಬ್ಬಣಯ್ಯನಾಯಕ, ನಾಗರಾಶಿಪಂಡಿತ, ನಾಗಾರ್ಯ, ದೇವಭದ್ರಮುನಿಪನು ವಿಷ್ಣುವರ್ಧನ ಹಾಗೂ ಸಾಮಂತ ಬಿಟ್ಟಿದೇವನ ವರ್ಣನೆಗಳನ್ನು ಗುರುತಿಸಿ ವಿಶ್ಲೇಷಿಸಲಾಗಿದೆ. ಹಂಸದೇವ, ನಾಗಾರ್ಜುನ, ಸಿಂಗಣ, ಮಹಾದೇವ, ಶಾಂತಿನಾಥ, ಸೋಮೇಶ್ವರ, ಸಜ್ಜನತಿಲಕ, ಸೂರ್ಯಣ, ಬಿಜ್ಜಯನಾಯಕ, ಕವಿರಾಜ, ಬೂಚಿಮಯ್ಯ, ಶಾಂತಿನಾಥ ಪಂಡಿತ, ದೇವಪಾರ್ಯ, ಕಾಳಿದಾಸ, ಕವಿಕಂದರ್ಪ, ಶಾರದಿನಾಥಪಂಡಿತ, ಹೋರಿಯ ನೀಲಯ್ಯ, ಹೆಮ್ಮಾಡಿ, ಕಲ್ಯಾಣಶಕ್ತಿ ಪಂಡಿತ, ದೇವಣ್ಣನ ಸಂಸ್ಕೃತಬೂಯಿಷ್ಟ ಗದ್ಯಶೈಲಿಯನ್ನು ಗುರುತಿಸಲಾಗಿದೆ. ಗೋಮಕವಿ, ನಾಗದೇವ, ರಾಮದೇವ, ಬೊಪ್ಪಣ ಪಂಡಿತನನ್ನು ಕನ್ನಡ ಕವಿಬಪ್ಪ, ಸುಜನೋತ್ತಂಸ, 'ಸುಕವಿಸಮಾಜನುತ' ಎಂದು 'ವಿದ್ಯಾಜಿತವೃಜಿನ' ಎಂದು ಬಿರುದುಗಳಿದ್ದುದು ಗುರುತಿಸಲಾಗಿದೆ. ಹಾಗೂ ಗೊಮ್ಮಟನ ಸ್ತುತಿ, ವರ್ಣನೆ ಪದ್ಯಗಳನ್ನು ಗುರುತಿಸಲಾಗಿದೆ. ಉದಯಕಲ್ಪ, ಲಕ್ಷ್ಮೀಧರ, ನಾಗದೇವಭಟ್ಟ, ಭಾಸ್ಕರ, ಚಾವಣಿಪಂಡಿತ, ತ್ರಿವಿಕ್ರಮಾಂಕ, ಮಾರ್ತಂಡದೇವ, ಬಾಚಯ್ಯ, ಜನ್ನನ ನಾಲ್ಕು ಶಾಸನಗಳನ್ನು ವಿಶ್ಲೇಷಿಸಲಾಗಿದೆ. ತ್ರಿಭುವನಶಕ್ತಿ ಪ್ರಾರ್ಥನಾಪದ್ಯ ಕಂದಪದ್ಯದಲ್ಲಿದೆ. ಬೆಡಗಿನ ಸೋಮನಾಥಪಂಡಿತ, ಶಾಸನವು ವಿಶಿಷ್ಟ ಆಚರಣೆ (ವೃತ)ವನ್ನು ಹೇಳಿದೆ. ಅದನ್ನು 'ಕ್ಷಿತಿರುಹನೋಂಪಿ' (ವೃಕ್ಷ ನೆಡುವ ಮತ್ತು ದಾನ ಮಾಡುವುದು) ಎಂದು ಗುರುತಿಸಲಾಗಿದೆ.

ಮಾಳೆಯ, ಮಾಚರಸ, ಸೇನಬೋವ ಮಾಯಂಣ ಮುಂತಾದವರ ಶಾಸನಗದ್ಯವನ್ನು ಗುರುತಿಸಲಾಗಿದೆ. ಹರಿಹರಸೂರಿ, ಕುಂದೂರ ರಾಯಣ್ಣ, ಮಾರಮರಸನ ಎರಡು ಶಾಸನಗಳನ್ನು ಗುರುತಿಸಲಾಗಿದೆ.

ಅಧ್ಯಾಯ ೬ರಲ್ಲಿ ಕ್ರಿ.ಶ.೧೨ನೇ ಶತಮಾನದ ಶಾಸನಕವಿಗಳ ಬಗ್ಗೆ ವಿಶ್ಲೇಷಿಸಲಾಗಿದೆ. ಒಟ್ಟು ಈ ಕಾಲಘಟ್ಟದಲ್ಲಿ ೩೪ ಜನ ಶಾಸನಕವಿಗಳ ಚರ್ಚೆ ನಡೆಸಲಾಗಿದೆ. 'ಕವಿಚಂದಣ' ಕೇಶವರಾಜ' ಕವಿ ಸುಬ್ಬನು ಬರೆದ ಅಸುಂಡಿ ಶಾಸನದಲ್ಲಿ ತಾನೇ ಶಾಸನವನ್ನು ವಿರಚಿಸಿ ಬರೆದ ಬಗ್ಗೆ ತಿಳಿದುಬರುತ್ತದೆ. ಉದಾ:

**ಬರೆವರ ಮಿತ್ರಂ ಸುಬ್ಬಂ**
**ವಿರಚಿಸಿ ಪೆರ್ದ್ದೆಸೆವ ಗದ್ಯಪದ್ಯೋಕ್ತಿಗಳಿಂ**
**ಬರೆದಂ ಶಾಸನಮನಿದಂ**
**ಧರೆಯೊಳ್ ಬುಧರೊಲ್ದು ಪೊಗಳೆ ಲಲಿತಾಕ್ಷರದಿಂ ॥**

ಇನ್ನೊರ್ವ ಕವಿ ಕೇಶವಪಂಡಿತ ಬಮ್ಮರಸ, ಪಾರ್ಶ್ವ ಕವಿಯು ಸತ್ಕೃತಿಯ (ಒಳ್ಳೆಯ ಕೃತಿ ಲಕ್ಷಣ) ಹೇಗಿರಬೇಕೆಂಬ ಮೀಮಾಂಸೆ ಗುರುತಿಸಲಾಗಿದೆ.

**ಲಲಿತಪದಾರ್ಥಳಂಕೃತಿ**
**ಗಳಿನೊಸರ್ವರಸಂಗಳಿಂದೆ ಬುಧರೊಳ್ಪುಳಕಾ**
**ವಳಿಸಸ್ಯಮೊಗೆಯೆ ಕವಿಕುಳ**
**ತಿಳಕಂ ಶಾಸನಮನೊಲ್ದು ಪೇಳ್ದಂ ಪಾರ್ಶ್ವಂ ॥**

ಕವಿ ತನ್ನನ್ನು 'ಕವಿಕುಳ ತಿಳಕ'ನೆಂದು ಬಿರುದು ಪಡೆದಿದ್ದಾನೆ. ಕನ್ನಡದಲ್ಲಿ 'ಪಾರ್ಶ್ವನಾಥಪುರಾಣ'ವನ್ನು ರಚಿಸಿದ್ದಾನೆ. 'ಬಾಳಚಂದ್ರ', ಕವಿಯನ್ನು ಪಾರ್ಶ್ವಕವಿಯು ಪಾರ್ಶ್ವನಾಥ ಪುರಾಣದಲ್ಲಿ ಹೀಗೆ ಹೊಗಳಿದ್ದಾನೆ.

**ವಕ್ರೋಕ್ತಿಭವಯಶೋಜ್ಯೋ**
**ತ್ಸ್ನಾಕ್ರಾಂತಪರಾವಲೇಪತಿಮಿರಂ ಧರಣೀ**
**ಚಕ್ರದೊಳತಿಚಿತ್ರಂ ಕವಿ**
**ಚಕ್ರಪ್ರಿಯನೆನಿಸಿ ಬಾಳಚಂದ್ರ ನೆಗಳ್ದಂ ॥**

ಈ ಕವಿಯು ಜನ್ನನ ಪತ್ನಿ ಲಕುಮಾದೇವಿಯ ಗುರುವೆಂದು ಆ ಕವಿಯ 'ಅನಂತನಾಥ ಪುರಾಣ'ದಿಂದ ತಿಳಿದುಬರುತ್ತದೆ. ಜನ್ನ ಈ ಕವಿಯನ್ನು ಪ್ರಸಿದ್ಧ ಕವಿಯೆಂದು ಬಣ್ಣಿಸಿದ್ದಾನೆ. ಪ್ರಾಬೃತಕತ್ರಯ, ಪರಮಾತ್ಮಪ್ರಕಾಶಿಕಾ ಸಮಯಸಾರ, ಮೊದಲಾದ ಗ್ರಂಥಗಳಿಗೆ ವ್ಯಾಖ್ಯಾನ

